7. ಈ ಅನುಮತಿ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರನ್ವಯ ಮಾತ್ರ ನೀಡಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

8. ಪ್ರಸ್ತುತ ಸಂಸ್ಥೆ ಎರಡು ವರ್ಷಗಳಲ್ಲಿ ಸಂಬಂಧಪಟ್ಟ ಪ್ರಾಧಿಕಾರಿಗಳಿಂದ ಸೂಕ್ತ ಅನುಮೋದನೆ ಪಡೆದುಕೊಳ್ಳುವ ಷರತ್ತಿಗೊಳಪಡಿಸಿ, ಅನುಮತಿ ನೀಡಿದೆ.

**ಎಂ.ಕೆ. ಅಯ್ಯಪ್ಪ**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು

ಪಿ.ಆರ್. 1206

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ

### ಅಧಿಕೃತ ಜ್ಞಾಪನ

**ಸಂಖ್ಯೆ:ಎಲ್.ಎನ್.ಡಿ. (109) (ಎನ್.ಎ.) ಸಿಆರ್ 2/2011–12, ಬೆಂಗಳೂರು ದಿನಾಂಕ: 20.10.2011**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ ಆವಲಹಳ್ಳಿ ಗ್ರಾಮದ ಸ.ನಂ. 80ರ ಬ್ಲಾಕ್ ನಂ: 3ರಲ್ಲಿ 0–37 ಎಕರೆ/ಗುಂಟೆ ಸರ್ಕಾರಿ ಜಮೀನನ್ನು ಶ್ರೀ ರಾಮಕೃಷ್ಣ ಎಜುಕೇಷನ್ ಟ್ರಸ್ಟ್ (ರಿ), ನಂ: 160, ಚಲ್ಲಕೆರೆ ಮುಖ್ಯರಸ್ತೆ, ಕಲ್ಯಾಣನಗರ, ಬೆಂಗಳೂರು ಇವರು ಹರಾಜು ಮೂಲಕ ಖರೀದಿಸಿ, ಕರ್ನಾಟಕ ಭೂ ಸುಧಾರಣಾ ಕಾಯ್ದೆ (ತಿದ್ದುಪಡಿ) 2003ರ ಕಲಂ 109 (1) (iv)ರಡಿಯಲ್ಲಿ ಅನುಮತಿ ನೀಡುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಶಾಇ 47 ಶಾಸನ/2011 ಬೆಂಗಳೂರು ದಿನಾಂಕ: 23.04.2003.

2. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 545 ಎಲ್‌ಜಿಬಿ 2008 (2) ದಿನಾಂಕ: 26.12.2008

3. ಶ್ರೀ ರಾಮಕೃಷ್ಣ ಎಜುಕೇಷನ್ ಟ್ರಸ್ಟ್ (ರಿ), ನಂ: 160, ಚಲ್ಲಕೆರೆ ಮುಖ್ಯರಸ್ತೆ, ಕಲ್ಯಾಣನಗರ, ಬೆಂಗಳೂರು ಇವರ ಮನವಿ ದಿನಾಂಕ: 28.02.2011.

* * * * *

ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ ಆವಲಹಳ್ಳಿ ಗ್ರಾಮದ ಸ.ನಂ: 80ರ ಬ್ಲಾಕ್ ನಂ. 3ರಲ್ಲಿ 0–37 ಎಕರೆ/ಗುಂಟೆ ಸರ್ಕಾರಿ ಜಮೀನನ್ನು ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 265 ಎಲ್‌ಜಿಬಿ 2007 (ಪಿ.ಆರ್.) ದಿನಾಂಕ: 21.10.2008ರಂತೆ ಬಹಿರಂಗ ಹರಾಜು ಮಾಡಲು ಅನುಮತಿ ನೀಡಲಾಗಿರುತ್ತದೆ. ಅದರಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಇವರು ಹೊರಡಿಸಿರುವ ಹರಾಜು ಇಸ್ತಿಹಾರ್ ಆಧರಿಸಿ ದಿನಾಂಕ: 05.09.2008ರಂದು ಬಹಿರಂಗ ಹರಾಜು ಮಾಡಲಾಗಿದೆ. ಸದರಿ ಜಮೀನಿಗೆ ಶ್ರೀ ರಾಮಕೃಷ್ಣ ಎಜುಕೇಷನ್ ಟ್ರಸ್ಟ್ (ರಿ), ನಂ: 160, ಚಲ್ಲಕೆರೆ ಮುಖ್ಯರಸ್ತೆ, ಕಲ್ಯಾಣನಗರ, ಬೆಂಗಳೂರು ಇವರು ರೂ. 1.21 ಲಕ್ಷಗಳಿಗೆ ಅಂತಿಮ ಬಿಡ್‌ದಾರರಾಗಿದ್ದಾರೆ. ಈ ಹರಾಜನ್ನು ಸರ್ಕಾರದ ಆದೇಶ ಸಂಖ್ಯೆ: 545 ಎಲ್‌ಜಿಬಿ 2008 (1) ದಿನಾಂಕ: 26.12.2008ರಲ್ಲಿ ಸ್ಥಿರೀಕರಿಸಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು, ಜಾರಿದಳ ಇವರಿಂದ ಹೊರಡಿಸಿದ ಹರಾಜು ಸ್ಥಿರೀಕರಣ ಆದೇಶ ಸಂಖ್ಯೆ: ವಿ.ಜಿ. (ಜಾ.ದ.) (ಉ.ಅ.) ಸಿಆರ್/ಹರಾಜು/60/2007–08 ದಿನಾಂಕ: 22.10.2007ರನ್ವಯ ರೂ. 1,21,00,000–00ಗಳನ್ನು ಚಲನ್ ಸಂಖ್ಯೆ: 63/108 ದಿನಾಂಕ: 1.03.2011 ಹಾಗೂ ಚಲನ್ ಸಂಖ್ಯೆ: 18995/3 ದಿನಾಂಕ: 24.02.2011ಗಳನ್ವಯ ಸರ್ಕಾರಕ್ಕೆ ಹಣ ಪಾವತಿಸಿರುತ್ತಾರೆ.

ಸರ್ಕಾರದ ಪತ್ರ ಸಂಖ್ಯೆ: ಆರ್‌ಡಿ 6 ಎಲ್‌ಆರ್‌ಎಂ 2008 ದಿನಾಂಕ: 31.05.2008ರನ್ವಯ ಮೇಲ್ಕಂಡ ಸರ್ಕಾರಿ ಜಮೀನನ್ನು ಹರಾಜಿನ ಮೂಲಕ ಖರೀದಿಸಿರುವುದರಿಂದ, ಕರ್ನಾಟಕ ಭೂ ಸುಧಾರಣಾ (ತಿದ್ದುಪಡಿ) ಕಾಯ್ದೆ 2003ರ ಕಲಂ 109(1)ರ ಪ್ರಕಾರ ಕೃಷಿ ಜಮೀನು ಹೊಂದಲು ಅನುಮತಿ ನೀಡುವ ಬಗ್ಗೆ ಜಿಲ್ಲಾಧಿಕಾರಿಗಳಿಗೆ ಪ್ರದತ್ತವಾದ ಅಧಿಕಾರವಿರುತ್ತದೆ ಎಂದು ತಿಳಿಸಿ, ಅದರಂತೆ ಹರಾಜಿನ ಸ್ಥಿರೀಕರಣದಾರರಿಗೆ ಅನುಮತಿ ನೀಡುವಂತೆ ನಿರ್ದೇಶಿಸಲಾಗಿರುತ್ತದೆ.

ಸದರಿ ಹರಾಜು ಜಮೀನಿನ ಬಿಡ್‌ದಾರರಾದ ಶ್ರೀ ರಾಮಕೃಷ್ಣ ಎಜುಕೇಷನ್ ಟ್ರಸ್ಟ್ (ರಿ), ನಂ: 160, ಚಲ್ಲಕೆರೆ ಮುಖ್ಯರಸ್ತೆ, ಕಲ್ಯಾಣನಗರ, ಬೆಂಗಳೂರು ಇವರು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 2003ರ ಕಲಂ 109 (1) (ii)ರಡಿ ಕ್ರಯಕ್ಕೆ ಪಡೆಯಲು ನಮೂನೆ–15ಎರಲ್ಲಿ ಅರ್ಜಿ ಸಲ್ಲಿಸಿ ವಿನಾಯಿತಿ ಕೋರಿರುತ್ತಾರೆ.

ಸದರಿ ರಾಮಕೃಷ್ಣ ಎಜುಕೇಷನ್ ಟ್ರಸ್ಟ್ (ರಿ) ಸಂಸ್ಥೆಯು ನೊಂದಣಿ ಸಂಖ್ಯೆ: ೩.ಪಿ. ಖಗಿ 101/99–2000 ದಿನಾಂಕ: 23.07.1999ರಲ್ಲಿ ನೋಂದಾಯಿಸಲ್ಪಟ್ಟಿದೆ.

ಕರ್ನಾಟಕ ಭೂ ಸುಧಾರಣಾ (ತಿದ್ದುಪಡಿ) ಕಾಯೆ 2003ರ ಕಲಂ 109 (1) (ii)ರ ಪ್ರಕಾರ ಶೈಕ್ಷಣಿಕ ನಿರ್ಮಾಣಕ್ಕಾಗಿ ಸಂಸ್ಥೆಗಳಿಗೆ 10 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಬಗ್ಗೆ ಉಲ್ಲೇಖ (2)ರ ಸರ್ಕಾರದ ಪತ್ರದಲ್ಲಿ ಕರ್ನಾಟಕ (ತಿದ್ದುಪಡಿ)

ಕಾಯ್ದೆ 2003ರ ಕಲಂ 109 (1) (ಐ) ರಡಿ ಶೈಕ್ಷಣಿಕ ಉದ್ದೇಶಕ್ಕಾಗಿ ಅನುಮತಿ ನೀಡುವ ಅಧಿಕಾರ ಜಿಲ್ಲಾಧಿಕಾರಿಗಳಿಗೆ ಪ್ರದತ್ತವಾಗಿರುವುದರಿಂದ, ಜಿಲ್ಲಾಧಿಕಾರಿಗಳವರ ಹಂತದಲ್ಲಿಯೇ ಕ್ರಮ ವಹಿಸುವಂತೆ ನಿರ್ದೇಶಿಸಿರುತ್ತಾರೆ.

ಆದ್ದರಿಂದ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ ಆವಲಹಳ್ಳಿ ಗ್ರಾಮದ ಸ.ನಂ: 80ರ ಬ್ಲಾಕ್ ನಂ. 3ರಲ್ಲಿ 0–37 ಎಕರೆ/ಗುಂಟೆ ಜಮೀನನ್ನು ಶ್ರೀ ರಾಮಕೃಷ್ಣ ಎಜುಕೇಷನ್ ಟ್ರಸ್ಟ್ (ರಿ) ನಂ: 160, ಚಲ್ಲಕೆರೆ ಮುಖ್ಯರಸ್ತೆ, ಕಲ್ಯಾಣನಗರ, ಬೆಂಗಳೂರು ಇವರ ಹೆಸರಿಗೆ ವ್ಯವಸಾಯದ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣಾ (ತಿದ್ದುಪಡಿ) ಕಾಯ್ದೆ 2003ರ ಕಲಂ 109 (1) (ii)ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಕಂಇ 47/ಶಾಸನ/2011 ಬೆಂಗಳೂರು ದಿನಾಂಕ: 23.04.2003ರಂತೆ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ, ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಮತ್ತು ಈ ಬಗ್ಗೆ ತಹಸೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡಾ 55 ಪೇಯ್ಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ–ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ, ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೇ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಕೃಷಿ ವಲಯದಲ್ಲಿ ಬರುತ್ತಿದ್ದು, ವಸತಿ ಬಡಾವಣೆ ನಿರ್ಮಾಣದ ಉದ್ದೇಶಕ್ಕೆ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೇ ಹಾಗೂ ಅನ್ಯಕ್ರಾಂತ ಪಡಿಸದೇ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95(2)ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಇವರಿಂದ ಅನುಮೋದಿತಗೊಂಡಿರುವ ಆರ್.ಎಂ.ಪಿ. 2015ರ ಸಿ.ಡಿ.ಪಿ. ಆಧರಿಸಿ, ಹಸಿರು/ಕೃಷಿ ವಲಯ ವ್ಯಾಪ್ತಿಯೊಳಗೆ ಬಂದರೆ ಅದರಿಂದ ಅನುಮತಿ ಪಡೆದು, ಜಮೀನನ್ನು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿಸಿ, ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರನ್ವಯ ಮಾತ್ರ ನೀಡಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
8. ಪ್ರಸ್ತುತ ಸಂಸ್ಥೆ ಎರಡು ವರ್ಷಗಳಲ್ಲಿ ಸಂಬಂಧಪಟ್ಟ ಪ್ರಾಧಿಕಾರಿಗಳಿಂದ ಸೂಕ್ತ ಅನುಮೋದನೆ ಪಡೆದುಕೊಳ್ಳುವ ಷರತ್ತಿಗೊಳಪಡಿಸಿ, ಅನುಮತಿ ನೀಡಿದೆ.

**ಎಂ.ಕೆ. ಅಯ್ಯಪ್ಪ**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು

ಪಿ.ಆರ್. 1207

## ಕರ್ನಾಟಕ ವಿಧಾನಸಭೆ ಸಚಿವಾಲಯ

**ವಿಧಾನಸಭೆ ಸಚಿವಾಲಯ, ಅಂಚೆ ಪೆಟ್ಟಿಗೆ ನಂ. 5074, ವಿಧಾನಸೌಧ, ಬೆಂಗಳೂರು–560 233.**

**ಸಂಖ್ಯೆ: ವಿಸಸ/ಶರಶಾ/24/ಸಿಎ/2011, ದಿನಾಂಕ: 10.10.2011**

**ವಿಷಯ:** ವಿಧಾನಸಭಾ ಸದಸ್ಯರ ವಿಳಾಸ ಬದಲಾವಣೆ

ಹೊಸದುರ್ಗ ವಿಧಾನಸಭಾ ಕ್ಷೇತ್ರದ ಮಾನ್ಯ ಸದಸ್ಯರಾದ ಶ್ರೀ ಗೂಳಿಹಟ್ಟಿ ಡಿ. ಶೇಖರ್ ಅವರು ಕೆಳಕಂಡಂತೆ ತಮ್ಮ ವಿಳಾಸವನ್ನು ಬದಲಾಯಿಸಿರುತ್ತಾರೆ.

**ಶ್ರೀ ಗೂಳಿಹಟ್ಟಿ ಡಿ. ಶೇಖರ್**
ವಿಧಾನಸಭಾ ಸದಸ್ಯರು
"ಓಂ ಶಕ್ತಿ ನಿಲಯ", ನಂ. 268, 7ನೇ ಅಡ್ಡರಸ್ತೆ, 6ನೇ ಬ್ಲಾಕ್, 2ನೇ ಹಂತ
ಬಿ.ಡಿ.ಎ. ಕಾಂಪ್ಲೆಕ್ಸ್ ಹತ್ತಿರ, ನಾಗರಬಾವಿ, ಬೆಂಗಳೂರು

ಆದಕಾರಣ ಮಾನ್ಯ ಸದಸ್ಯರಿಗೆ ಇನ್ನು ಮುಂದೆ ಕಳುಹಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಮೇಲ್ಕಂಡ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಕೋರಲು ನಿರ್ದೇಶಿತಳಾಗಿದ್ದೇನೆ.

**ಎಂ.ಕೆ. ವಿಶಾಲಾಕ್ಷಿ**
ಅಧೀನ ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

ಪಿ.ಆರ್.1173

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

### ಪ್ರಕಟಣೆ

**ಪ್ರಕರಣ ಸಂಖ್ಯೆ:ಕಾಅದಾ: ಕಾನಪ:ಸಿಆರ್:168/11, ದಿನಾಂಕ: 26.10.2011**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| ಶ್ರೀಮತಿ ರತ್ನಮ್ಮ ಕೋಂ ಲೇಟ್ ಎಸ್. ಮಂಜಪ್ಪ, ಆಲೂರು ಗ್ರಾಮ, ದಾವಣಗೆರೆ ಜಿಲ್ಲೆ | | 1. ದಿ. ಜನರಲ್ ಮ್ಯಾನೇಜರ್,<br>ದಿ ಫ್ಯಾಕ್ಟರಿ ಮ್ಯಾನೇಜರ್, ಗ್ರೀನ್ ಆಗ್ರೋಪ್ಯಾಕ್ ಪ್ರೈ ಲಿ.,<br>ಹೆಬ್ಬಾಳು ಗ್ರಾಮ, ದಾವಣಗೆರೆ ಜಿಲ್ಲೆ |

ಶ್ರೀಮತಿ ರತ್ನಮ್ಮ ಇವರುಗಳಾದ ನಾವು ಮೃತ ಅಣ್ಣಪ್ಪ ಇವರ ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶ್ರೀ ಅಣ್ಣಪ್ಪ ರವರು ಒಂದನೇ ಪ್ರತಿವಾದಿಗಳಾದ ಫ್ಯಾಕ್ಟರಿ ಮ್ಯಾನೇಜರ್ ಇವರ ಫ್ಯಾಕ್ಟರಿಯಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎಸ್.ಸಿ. ರಾಮಚಂದ್ರ**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

### ಪ್ರಕಟಣೆ

**ಪ್ರಕರಣ ಸಂಖ್ಯೆ:ಕಾಅದಾ: ಕಾನಪ:ಸಿಆರ್:169/11, ದಿನಾಂಕ: 26.10.2011**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| ಶ್ರೀಮತಿ ಶೇಂದ್ರಾಯಿ ಕೋಂ ಲೇಟ್ ಸಂಜೀವ್ ಫರ್ನಾಂಡಿಸ್, ನಲವಾಗಲು ಕುಮಾರಪಟ್ಟಣಂ ಕೇರಾಫ್: ಕೊಟ್ರೇಶ್, ವಿದ್ಯಾನಗರ, ಸಿ. ಬ್ಲಾಕ್, ಹರಿಹರ | | 1. ಮಲ್ಲೇಶಪ್ಪ ಬಿನ್, ಭರಮಪ್ಪ, ಕಂಟ್ರಾಕ್ಟರ್, ಲಾರಿ ಮಾಲೀಕರು ನಂ: ಕೆ.ಎ. 17 ಬಿ.144, 144, ಶಿವಾಶ್ರೇಯ ನಿಲಯ, ವಿದ್ಯಾನಗರ, ಎ. ಬ್ಲಾಕ್ ಹರಿಹರ<br>2. ದಿ ಬ್ರ್ಯಾಂಚ್ ಮ್ಯಾನೇಜರ್ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., 1ನೇ ಮಹಡಿ, ವಾಲಿ ಕಾಂಪ್ಲೆಕ್ಸ್, ಶಿವಮೊಗ್ಗ ರಸ್ತೆ, ಹರಿಹರ |

ಶ್ರೀಮತಿ ಶೇಂದ್ರಾಯಿ ಇವರುಗಳಾದ ನಾವು ಮೃತ ಸಂಜೀವ್ ಫರ್ನಾಂಡಿಸ್ ಇವರ ಹೆಂಡತಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶ್ರೀ ಸಂಜೀವ್ ಫರ್ನಾಂಡಿಸ್ ರವರು ಒಂದನೇ ಪ್ರತಿವಾದಿಗಳಾದ ಮಲ್ಲೇಶಪ್ಪ ಇವರ ಲಾರಿ ಚಾಲಕರಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು

ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎಸ್.ಸಿ. ರಾಮಚಂದ್ರ**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರಕಟಣೆ**

**ಪ್ರಕರಣ ಸಂಖ್ಯೆ:ಕಾಅದಾ: ಕಾನಪ:ಸಿಆರ್:170/11, ದಿನಾಂಕ: 26.10.2011**

**ಅರ್ಜಿದಾರರು**

ಶ್ರೀಮತಿ ಅಪ್ಸನ್ ಕೋಂ ಲೇಟ್ ಮಕ್ಬಲ್
2. ಕಾಜಾ ಮೊಹಿದ್ದೀನ್ ಬಿನ್ ಲೇಟ್ ಮಕ್ಬಲ್ 2 ತಿಂಗಳು
3. ಶ್ರೀಮತಿ ರಜಿಯಾಬೇಗಂ ಕೋಂ ಲೇಟ್ ಮೊಹ್ಮದ್ ಆಸಿಫ್‌ಸಾಬ್ 1ನೇ ಮೇನ್, 2ನೇ ಕ್ರಾಸ್ ಗಾಂಧಿನಗರ, ಹರಿಹರ

**ಪ್ರತಿವಾದಿಗಳು**

1. ಸಿದ್ದವೀರಯ್ಯ ಎಂ. ಬಿನ್. ಜಿ ಸಿದ್ದಲಿಂಗಯ್ಯ, ಟಾಟಾ ಇಂಡಿಕಾ ಕಾರ್ ಮಾಲೀಕರು, ನಂ. ಕೆ.ಎ. 17, ಎಂ. 7813, 2ನೇ ಕ್ರಾಸ್, ತೆಗ್ಗಿನಕೆರೆ ಗ್ರಾಮ, ಹರಿಹರ ತಾಲ್ಲೂಕು
2. ದಿ ಬ್ರಾಂಚ್ ಮ್ಯಾನೇಜರ್, ನ್ಯೂ ಇಂಡಿಯಾ ಆಶ್ಯೂರೆನ್ಸ್ ಕಂ. ಲಿ., 1ನೇ ಮಹಡಿ, ವಾಲಿ ಕಾಂಪ್ಲೆಕ್ಸ್, ಶಿವಮೊಗ್ಗ ರಸ್ತೆ, ಹರಿಹರ

ಶ್ರೀಮತಿ ಅಪ್ಸನ್ 2. ಕಾಜಾ ಮೊಹಿದ್ದೀನ್ 3. ರಜಿಯಾ ಬೇಗಂ ಇವರುಗಳಾದ ನಾವು ಮೃತ ಮಕ್ಬಲ್ ಇವರ ಹೆಂಡತಿ–ಮಕ್ಕಳು ಮತ್ತು ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶ್ರೀ ಮಕ್ಬಲ್ ರವರು ಒಂದನೇ ಪ್ರತಿವಾದಿಗಳಾದ ಸಿದ್ದವೀರಯ್ಯ ಇವರ ಕಾರ್ ಚಾಲಕರಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎಸ್.ಸಿ. ರಾಮಚಂದ್ರ**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ

ಪಿ.ಆರ್. 1174

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರಕಟಣೆ**

**ಪ್ರಕರಣ ಸಂಖ್ಯೆ: ಪ್ರ.ಸಂ. ಕಾಅದಾ: ಕಾನಪ: ಸಿಆರ್–162/11, ದಿನಾಂಕ: 22/10/11**

**ಅರ್ಜಿದಾರರು**

ಶ್ರೀಮತಿ ಮಾರಕ್ಕ ಕೋಂ ಓಬಯ್ಯ
a) ಕು॥ ಪಲ್ಲವಿ ಬಿನ್ ಲೇಟ್ ಓಬಯ್ಯ – 8 ವರ್ಷ
b)ಕು॥ ಹರ್ಷಿತ ಬಿನ್ ಲೇಟ್ ಓಬಯ್ಯ – 6 ವರ್ಷ
c)ಕು॥ ಹಂಸ ಬಿನ್ ಲೇಟ್ ಓಬಯ್ಯ – 4 ವರ್ಷ
d)ಯಶವಂತ ಬಿನ್, ಲೇಟ್ ಓಬಯ್ಯ – 1 ವರ್ಷ
1) ಯರಮಂಚಯ್ಯ ಬಿನ್ ಓಬಯ್ಯ
2) ಶ್ರೀಮತಿ ಗೌರಮ್ಮ ಕೋಂ ಯರಮಂಚಯ್ಯ
ನಂ. 523/5, 1ನೇ ಮಹಡಿ, 12ನೇ ಕ್ರಾಸ್
3ನೇ ಮೇನ್, ಕೇಟಿಜೆ ನಗರ, ದಾವಣಗೆರೆ

**ಪ್ರತಿವಾದಿಗಳು**

1. ಎಂ. ರಮೇಶ್‌ಕುಮಾರ್ ಬಿನ್. ವಸಂತರಾವ್, @ ವೀರವಸಂತರಾವ್, ಲಾರಿ ಮಾಲೀಕರು, ನಂ. ಕೆ.ಎ.34–9889 ನಂ. 24, ವೆಲ್‌ಕಂ ಗೇಟ್ ಹತ್ತಿರ, ಹವಂಬಾವಿ, ಬಳ್ಳಾರಿ ಜಿಲ್ಲೆ, ತಾಲ್ಲೂಕ್
2. ದಿ ಡಿವಿಜನಲ್ ಮ್ಯಾನೇಜರ್, ಶ್ರೀರಾಮ ಜನರಲ್ ಇನ್ಸೂರೆನ್ಸ್ ಕಂ. ಲಿ., ಡಿವಿಜನಲ್ ಆಫೀಸ್ ಈ–8 ಎಪಿಡ್ ಸೀತಾಪುರ ಜಯಪುರ, ರಾಜಸ್ಥಾನ ರಾಜ್ಯ

ಶ್ರೀಮತಿ ಮಾರಕ್ಕ a) ಪಲ್ಲವಿ b) ಹರ್ಷಿತ c) ಹಂಸ d)ಯಶವಂತ 2) ಯರಮಂಚಯ್ಯ 3) ಗೌರಮ್ಮ ಇವರುಗಳಾದ ನಾವು ಮೃತ ಓಬಯ್ಯ ಇವರ ಹೆಂಡತಿ–ಮಕ್ಕಳು ಮತ್ತು ತಂದೆ, ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶ್ರೀ ಓಬಯ್ಯ ರವರು ಒಂದನೇ ಪ್ರತಿವಾದಿಗಳಾದ ಎಂ. ರಮೇಶಕುಮಾರ್ ಇವರ ಲಾರಿಯಲ್ಲಿ ಚಾಲಕರಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು
ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ
ದಾವಣಗೆರೆ ಜಿಲ್ಲೆ, ದಾವಣಗೆರೆ

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

### ಪ್ರಕಟಣೆ

**ಪ್ರ.ಸಂ. ಕಾಅದಾ: ಕಾನಪ: ಸಿಆರ್–172/11**

**ಅರ್ಜಿದಾರರು**

ಶ್ರೀಮತಿ ಶ್ಯಾಮ್‌ಸಾದ್ ಬೇಗಂ ಕೋಂ ಜಮಾಲುದ್ದೀನ್ ಖಾನ್
2) ನಸರಿಂತಾಜ್ ಬಿನ್ ಲೇಟ್ ಜಮಾಲುದ್ದೀನ್ ಖಾನ್ – 17 ವರ್ಷ
3) ವಹೀದಾ ಬಾನಂ ಬಿನ್ ಜಮಾಲುದ್ದೀನ್ ಖಾನ್ – 16 ವರ್ಷ
4) ಅಲೀಮುಲ್ಲಾ ಖಾನ್ ಬಿನ್ ಜಮಾಲುದ್ದೀನ್ ಖಾನ್ – 13 ವರ್ಷ
ಕೇ. ಮೋಹದ್ ಜಾಪರ್, ಪಾತಿಮಾ ಮಸೀದಿ, ಹತ್ತಿರ ಅಗಸನಗಲ್ಲಿ, ಏರಿಯಾ ಚಿತ್ರದುರ್ಗ

**ಪ್ರತಿವಾದಿಗಳು**

1. ಸಲೀಂ ಬೇಗ್ ಬಿನ್ ಮುನಾಫ್ ಬೇಗ್ ಲಾರಿ ಮಾಲೀಕರು ನಂ. ಕೆ.ಎ.–16ಎ 4989, ಗೌರಮ್ಮನಹಳ್ಳಿ ಗ್ರಾಮ, ಭರಮಸಾಗರ, ಚಿತ್ರದುರ್ಗ ತಾಲ್ಲೂಕು
2. ದಿ ಆಫೀಸರ್
ಶ್ರೀರಾಮ ಜನರಲ್ ಇನ್ಸುರೆನ್ಸ್ ಕಂ. ಲಿ., ಈ–8, ರೀಕೋ ಇಂಡಸ್ಟ್ರಿಯಲ್ ಏರಿಯಾ ಸೀತಾಪುರ, ಜಯಪುರ ರಾಜಸ್ಥಾನ ರಾಜ್ಯ.

ಶ್ರೀಮತಿ ಶ್ಯಾಮ್‌ಸದ್ 2) ನಸರಿಂತಾಜ್ 3) ವಹೀದಾ ಬಾನಂ 4) ಅಲೀಮುಲ್ಲಾ ಖಾನ್ ಇವರುಗಳಾದ ನಾವು ಮೃತ ಜಮಾಲುದ್ದೀನ್ ಖಾನ್ ಇವರ ಹೆಂಡತಿ ಮತ್ತು ಮಕ್ಕಳು ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಜಮಾಲುದ್ದೀನ್ ಖಾನ್ ರವರು ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು
ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ
ಪಿ.ಆರ್. 1177 ದಾವಣಗೆರೆ ಜಿಲ್ಲೆ, ದಾವಣಗೆರೆ

## ವಾಣಿಜ್ಯ ತೆರಿಗೆ ಇಲಾಖೆ

## ವಾಣಿಜ್ಯ ತೆರಿಗೆಗಳ ಆಯುಕ್ತರವರ ಕಛೇರಿ, ವಾಣಿಜ್ಯ ತೆರಿಗೆಗಳ ಕಾರ್ಯಾಲಯ, ಕಾಳಿದಾಸ ಮಾರ್ಗ, ಗಾಂಧಿನಗರ, ಬೆಂಗಳೂರು

### ಅಧಿಸೂಚನೆ

**ಸಂಖ್ಯೆ.: ವಾತೆಅಆ(ಗು&ಸ)/ಉಆ/ಸಿಆರ್–181/11–12, ಬೆಂಗಳೂರು ದಿನಾಂಕ: 13.10.2011**

ಪ್ರದೀಪ್‌ಸಿಂಗ್ ಖರೋಲ, ವಾಣಿಜ್ಯ ತೆರಿಗೆ ಆಯುಕ್ತರು (ಕರ್ನಾಟಕ), ಬೆಂಗಳೂರು ಆದ ನಾನು 2003ರ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯಿದೆ (2004ರ ಕರ್ನಾಟಕ ಕಾಯಿದೆಯ ಸಂಖ್ಯೆ 32)ಯ ಕಲಮು 53(1)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಯಚೂರಿನ ಲಿಂಗಸುಗೂರು ರಸ್ತೆಯಲ್ಲಿರುವ ಮಾರಾಟ ತೆರಿಗೆ ತನಿಖಾ ಠಾಣೆಯನ್ನು ರದ್ದುಗೊಳಿಸಿ ಆದೇಶಿಸುತ್ತಿದ್ದೇನೆ.

ಈ ಅಧಿಸೂಚನೆಯು ತಕ್ಷಣದಿಂದ ಜಾರಿಗೆ ಬರುತ್ತದೆ.

ವಾಣಿಜ್ಯ ತೆರಿಗೆ ಆಯುಕ್ತರು
ಪಿ.ಆರ್. 1185 (ಕರ್ನಾಟಕ), ಬೆಂಗಳೂರು

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು,**

**ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ.**

**ಸಂಖ್ಯೆ: ಡಿಟಿಸಿಆರ್ : 220 (ಪೋಲೀಸ್)/2008–09, ದಿನಾಂಕ : 13–09–2011.**

<u>ಉಪಸ್ಥಿತರು:</u> **ಡಾ॥ ವೈ.ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

**ಪಿರ್ಯಾದುದಾರರು** **ವಿರುದ್ಧ** **ಆರೋಪಿ**

ಆರಕ್ಷಕ ನಿರೀಕ್ಷಕರು,
ದೇವರಾಜ ಪೋಲೀಸ್ ಠಾಣೆ,
ಮೈಸೂರು.

ಲೋಕೇಶ್ ಬಿನ್ ಲೇಟ್ ಬೆಟ್ಟಯ್ಯ

**ಪ್ರಕರಣದ ಮುಖ್ಯಾಂಶಗಳು :–**

ದಿನಾಂಕ : 01–09–2008 ರಂದು ಸಂಜೆ 4–00 ಗಂಟೆ ಸಮಯದಲ್ಲಿ ಆರಕ್ಷಕ ನಿರೀಕ್ಷಕರು ಸಿಬ್ಬಂದಿಯೊಂದಿಗೆ ದೇವರಾಜ ಪೋಲೀಸ್ ಠಾಣೆಯ ಸರಹದ್ದಿನ ಅಕ್ಕಿಚೌಕದಲ್ಲಿ ತಪಾಸಣೆ ಮಾಡುತ್ತಿರುವಾಗ್ಗೆ ಬೆಂಕಿನವಾಬ್ ರಸ್ತೆ ಕಡೆಯಿಂದ ಒಬ್ಬ ಆಸಾಮಿಯು ಟಿವಿ.ಎಸ್ ಎಕ್ಸೆಲ್ ಸೂಪರ್ ಸಂಖ್ಯೆ : ಕೆಎ–11/ಆರ್–7763 ನೋಂದಣಿ ಸಂಖ್ಯೆಯ ವಾಹನವನ್ನು ಪರಿಶೀಲಿಸಲಾಗಿ, ಅಕ್ರಮವಾಗಿ ವಿವಿಧ ಮಾದರಿಯ 8.640 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಲೋಕೇಶ್ ಬಿನ್ ಲೇಟ್ ಬೆಟ್ಟಯ್ಯ ಎಂಬುವವರನ್ನು ದಸ್ತಗಿರಿ ಮಾಡಿರುವುದಾಗಿ ಠಾಣಾ ಮೊಕದ್ದಮೆ ಸಂಖ್ಯೆ : 233/2008 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 34, 36ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ: 21–10–2008 ರಲ್ಲಿ ಈ ಪ್ರಾಧಿಕಾರದ ಅನುಮತಿಗಾಗಿ ಕೋರಿರುತ್ತಾರೆ. ಅದೇ ದಿನದಂದು ಮೈಸೂರು ವಲಯ–1ರ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಾಹನದ ಬಿ ವಹಿ ಪ್ರತಿಯನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಡ್ಯ ಜಿಲ್ಲೆ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ: 21–10–2008 ರಂದು ಪತ್ರ ಬರೆಯಲಾಗಿರುತ್ತದೆ. ಇದೂವರೆವಿಗೂ ಯಾವುದೇ ಪ್ರತಿಕ್ರಿಯೆ ಬಂದಿರುವುದಿಲ್ಲ.

ವಶಪಡಿಸಿಕೊಂಡ ವಾಹನಕ್ಕೆ ಸಂಬಂಧಿಸಿದಂತೆ ಲೋಕೇಶ್ ಬಿನ್ ಲೇಟ್ ಬೆಟ್ಟಯ್ಯ, ಮೇಳಾಪುರ, ಶ್ರೀರಂಗಪಟ್ಟಣ ತಾ॥, ಮಂಡ್ಯ ಜಿಲ್ಲೆ ಇವರು ವಕೀಲರ ಮುಖೇನ ವಕಾಲತ್ತಿನೊಂದಿಗೆ ಅರ್ಜಿಯನ್ನು ಸಲ್ಲಿಸಿ, ವಾಹನವನ್ನು ತನ್ನ ಮಧ್ಯಂತರ ವಶಕ್ಕೆ ನೀಡಬೇಕೆಂದು ಕೋರಿರುತ್ತಾರೆ. ಸದರಿ ಅರ್ಜಿಯ ಬಗ್ಗೆ ಸಹಾಯಕ ಅಭಿಯೋಗ ನಿರ್ದೇಶಕರು ಇವರಿಗೆ ದಿನಾಂಕ : 09–01–2009ರಂದು ಪತ್ರ ಬರೆದು ತಮ್ಮ ಸ್ಪಷ್ಟ ಅಭಿಪ್ರಾಯವನ್ನು ತಿಳಿಸುವಂತೆ ಕೋರಲಾಗಿದ್ದು, ಸಹಾಯಕ ಅಭಿಯೋಗ ನಿರ್ದೇಶಕರು ಅರ್ಜಿದಾರರು ವಾಹನವನ್ನು ಬಿಡುಗಡೆ ಕೋರಿ ಸಲ್ಲಿಸಿರುವ ಅರ್ಜಿಯಲ್ಲಿ ತಿಳಿಸಿರುವ ಕಾರಣಗಳು ಸಕಾರವಾಗಿರುವುದಿಲ್ಲ. ಹಾಗೂ ವಾಹನವನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಿದಲ್ಲಿ ಮತ್ತೆ ಇದೇ ರೀತಿ ಕಾನೂನು ಬಾಹಿರ ಚಟುವಟಿಕೆಗಳಿಗೆ ಬಳಸುವ ವಾಹನವನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡುವುದು ಸೂಕ್ತವಲ್ಲವೆಂದು ಅರ್ಜಿದಾರರ ಅರ್ಜಿಯನ್ನು ವಜಾ ಮಾಡಬೇಕೆಂದು ಕೋರಿರುತ್ತಾರೆ.

ಈ ಪ್ರಾಧಿಕಾರದಿಂದ ದಿನಾಂಕ : 28–04–09ರಂದು ಪ್ರತಿವಾದಿಗಳಿಗೆ ಕಲಂ 43(ಬಿ)ರಡಿಯಲ್ಲಿ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಾರಣ ಕೇಳುವ ನೋಟಿಸನ್ನು ದಿನಾಂಕ : 18–05–09ರಂದು ಜಾರಿಗೊಳಿಸಲಾಗಿರುತ್ತದೆ. ಪ್ರತಿವಾದಿಗಳ ಕಡೆಯಿಂದ ಇದೂವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ: 01–09–2008 ರಂದು ಬೆಂಕಿನವಾಬ್ ರಸ್ತೆ ಕಡೆಯಿಂದ ಟಿವಿ.ಎಸ್ ಎಕ್ಸೆಲ್ ಸೂಪರ್ ಸಂಖ್ಯೆ : ಕೆಎ–11/ಅರ್–7763 ನೋಂದಣಿ ಸಂಖ್ಯೆಯ ವಾಹನದಲ್ಲಿ ಅಕ್ರಮವಾಗಿ ವಿವಿಧ ಮಾದರಿಯ 8.640 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿಯಾದ ಲೋಕೇಶ್ ಬಿನ್ ಲೇಟ್ ಬೆಟ್ಟಯ್ಯ ಎಂಬುವವನನ್ನು ಸ್ಥಳದಲ್ಲಿ ದಸ್ತಗಿರಿ ಮಾಡಲಾಗಿರುತ್ತದೆ. ಈ ಬಗ್ಗೆ ಅರ್ಜಿದಾರರ ಮೇಲೆ ಕಲಂ 43(ಬಿ)(2)ರ ಅಡಿಯಲ್ಲಿ ಕಾನೂನಿನಲ್ಲಿ ವಿವಿಧ ಜವಾಬ್ದಾರಿಗಳಿದ್ದು, ಅದನ್ನು ನಿರ್ವಹಿಸುವ ಆದ್ಯ ಕರ್ತವ್ಯ ಅರ್ಜಿದಾರರ ಮೇಲಿದ್ದು, ಮದ್ಯವನ್ನು ಸಾಗಾಣಿಕೆ ಮಾಡುವ ಸಂದರ್ಭದಲ್ಲಿ ಆರೋಪಿಯನ್ನು ದಸ್ತಗಿರಿ ಮಾಡಲಾಗಿದ್ದು, ಅರ್ಜಿದಾರರು ಮತ್ತು ಆರೋಪಿಯು ಒಬ್ಬನೇ ಆಗಿದ್ದು, ಇವನ ತಿಳುವಳಿಕೆಯಲ್ಲಿಯೇ ಈ ಕೃತ್ಯ ನಡೆದಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಈ ಬಗ್ಗೆ ಯಾವುದೇ ಸಕಾರಣಗಳನ್ನು ಸ್ಪಷ್ಟವಾಗಿ ನೀಡಿರುವುದಿಲ್ಲ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ

ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/220 (ಪೋಲೀಸ್)/2008–09, ದಿನಾಂಕ : 13–09–2011.**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅರಕ್ಷಕ ನಿರೀಕ್ಷಕರು, ದೇವರಾಜ ಪೋಲೀಸ್ ಠಾಣೆ, ಮೈಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂ: 233/2008, ದಿ: 01–09–2008 ರಂದು ವಶಪಡಿಸಿಕೊಂಡ **ಕೆಎ–11/ಆರ್–7763 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ವಾಹನವನ್ನು** ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2011ನೇ ಇಸವಿ ಸೆಪ್ಟೆಂಬರ್ ತಿಂಗಳ 13ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ.ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

**ಪಿ.ಆರ್. ನಂ. 1009**

## ಕಂದಾಯ ಇಲಾಖೆ

### ಅಧಿಸೂಚನೆ

**ಸಂಖ್ಯೆ:ಕಂಇ 68 ಎಲ್‌ಆರ್‌ಎಂ 2010, ಬೆಂಗಳೂರು, ದಿನಾಂಕ:30–08–2011**

ಮೆ:ಹೊತ್ತೂರು ಇಸ್ಪಾತ್ ಪ್ರೈ. ಲಿ., ಬಳ್ಳಾರಿ, ಇವರಿಗೆ ಬಳ್ಳಾರಿ ತಾಲ್ಲೂಕು, ಕುಡತಿನಿ ಮತ್ತು ವೇಣಿವೀರಾಪುರ ಗ್ರಾಮದ ಸ.ನಂ.281/2 ಮತ್ತು ಇತರೆಗಳಲ್ಲಿ ಹಾಗೂ ಕುಡತಿನಿ ಗ್ರಾಮದ ಸ.ನಂ.402 ಮತ್ತಿತರೆಗಳಲ್ಲಿ ಒಟ್ಟು 149–79–05 ಎಕರೆ ಕೃಷಿ ಜಮೀನನ್ನು **ಕೈಗಾರಿಕಾ ಉದ್ದೇಶಕ್ಕಾಗಿ** ಮತ್ತು **ರೈಲ್ವೆ ಸೈಡಿಂಗ್ ಪ್ರಾಜೆಕ್ಟ್‌ಗಾಗಿ** ನಮೂನೆ 15–ಎ ಮತ್ತು ನಮೂನೆ 15–ಎಎ,ರಲ್ಲಿನ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ, ಇವರ ಪತ್ರ ಸಂಖ್ಯೆ:ಕಂ:ಭೂಸು:10:2010–11 ದಿನಾಂಕ:24–06–2010 ರಲ್ಲಿ ಪ್ರಸ್ತಾಪಿತ ಮೇಲ್ಕಂಡ ಜಮೀನನ್ನು ಖರೀದಿಸಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ (1ಎ)ರಡಿ ಅನುಮೋದನೆ /ವಿನಾಯಿತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನನ್ನು ಖರೀದಿಗೆ ಪಡೆಯಲು ಖಾತೆದಾರರಿಂದ ವ್ಯವಹರಿಸಿಕೊಂಡಿದ್ದು ಹಾಗೂ ಸದರಿ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ) ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ, ಮತ್ತು 80ಕ್ಕೆ ವಿನಾಯಿತಿ ನೀಡಿ ಜಿಲ್ಲಾಧಿಕಾರಿಯವರ ವರದಿಯ ಪ್ರಕಾರ ಮೆ:ಹೊತ್ತೂರು ಇಸ್ಪಾತ್ ಪ್ರೈ. ಲಿ., ಬಳ್ಳಾರಿ, ಇವರಿಗೆ ಬಳ್ಳಾರಿ ತಾಲ್ಲೂಕು, ವೇಣಿವೀರಾಪುರ ಗ್ರಾಮದ ಸ.ನಂ.281/2 ಮತ್ತು ಇತರೆಗಳಲ್ಲಿ ಹಾಗೂ ಕುಡತಿನಿ ಗ್ರಾಮದ ಸ.ನಂ.402 ಮತ್ತಿತರೆಗಳಲ್ಲಿ ಒಟ್ಟು 149–79–05 ಎಕರೆ ಕೃಷಿ ಜಮೀನನ್ನು **ಕೈಗಾರಿಕಾ ಉದ್ದೇಶಕ್ಕಾಗಿ** ಮತ್ತು **ರೈಲ್ವೆ ಸೈಡಿಂಗ್ ಪ್ರಾಜೆಕ್ಟ್‌ಗಾಗಿ** ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1ಎ)ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:–

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3. ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.

4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.

6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.

7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.

8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್.ನಾರಾಯಣ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

**ಪಿ.ಆರ್. ನಂ. 1090**

## ಕಂದಾಯ ಇಲಾಖೆ

## ಅಧಿಸೂಚನೆ

### ಸಂಖ್ಯೆ:ಕಂಇ 101 ಎಲ್‌ಆರ್‌ಎಂ 2011, ಬೆಂಗಳೂರು, ದಿನಾಂಕ:07-01-2012

ಶ್ರೀ ಸಿಮೆಂಟ್ಸ್ ಲಿ., ರಾಜಸ್ಥಾನ ಇವರಿಗೆ ಗುಲ್ಬರ್ಗಾ ಜಿಲ್ಲೆ, ಸೇಡಂ ತಾಲ್ಲೂಕು, ಕೋಡ್ಲಾ ಮತ್ತು ಬೆನಕನಹಳ್ಳಿ ಗ್ರಾಮದಲ್ಲಿ ಒಟ್ಟು 360.775 ಎಕರೆ ಜಮೀನನ್ನು **ಕೈಗಾರಿಕಾ ಉದ್ದೇಶಕ್ಕಾಗಿ** ಖರೀದಿಸಲು ನಮೂನೆ 15–ಎ ಮತ್ತು ನಮೂನೆ 15–ಎಎ, ಗಳಲ್ಲಿನ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿ, ಗುಲ್ಬರ್ಗಾ ಜಿಲ್ಲೆ, ಇವರ ಪತ್ರ ಸಂಖ್ಯೆ:ಕಂ:ಭೂಸು/24/2010-11/11259 ದಿನಾಂಕ:15-11-2011ರಲ್ಲಿ ಪ್ರಸ್ತಾಪಿತ ಮೇಲ್ಕಂಡ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109 (1ಎ) ರಡಿ ಅನುಮೋದನೆ/ವಿನಾಯಿತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನನ್ನು ಖರೀದಿಸಲು ಖಾತೆದಾರರಿಂದ ವ್ಯವಹರಿಸಿಕೊಂಡಿದ್ದು ಹಾಗೂ ಸದರಿ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿರ್ಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1) ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ, ಅಥವಾ 80ಕ್ಕೆ ವಿನಾಯಿತಿ ನೀಡಿ ಜಿಲ್ಲಾಧಿಕಾರಿಯವರ ವರದಿಯ ಪ್ರಕಾರ ಶ್ರೀ ಸಿಮೆಂಟ್ಸ್ ಲಿ., ರಾಜಸ್ಥಾನ ಇವರಿಗೆ ಗುಲ್ಬರ್ಗಾ ಜಿಲ್ಲೆ, ಸೇಡಂ ತಾಲ್ಲೂಕು, ಕೋಡ್ಲಾ ಮತ್ತು ಬೆನಕನಹಳ್ಳಿ ಗ್ರಾಮದಲ್ಲಿ ಒಟ್ಟು 360.775 ಎಕರೆ ಜಮೀನನ್ನು **ಕೈಗಾರಿಕಾ ಉದ್ದೇಶಕ್ಕಾಗಿ** ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1ಎ)ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:–

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ

51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3. ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.

4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.

6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.

7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.

8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್.ನಾರಾಯಣ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

**ಪಿ.ಆರ್. ನಂ. 52**

## ಕಂದಾಯ ಇಲಾಖೆ

## ಅಧಿಸೂಚನೆ

### ಸಂಖ್ಯೆ:ಕಂಇ 23 ಎಲ್‌ಆರ್‌ಎಂ 2011, ಬೆಂಗಳೂರು, ದಿನಾಂಕ:07-01-2012

ಮೆ: ಎಸ್.ಎಸ್.ಸಿ. ಸ್ಟೀಲ್ ಪ್ರೈವೇಟ್ ಲಿ., ಇವರಿಗೆ ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಹನುಮನಹಳ್ಳಿ ಗ್ರಾಮದ ಸರ್ವೆ ನಂ.48 ಮತ್ತು ಇತರೆಗಳಲ್ಲಿ ಒಟ್ಟು 198 ಎಕರೆ 24 ಗುಂಟೆ ಜಮೀನನ್ನು **ಕೈಗಾರಿಕಾ ಉದ್ದೇಶಕ್ಕಾಗಿ** ಖರೀದಿಸಲು ನಮೂನೆ 15-ಎ ಮತ್ತು ನಮೂನೆ 15-ಎಎ, ಗಳಲ್ಲಿನ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ, ಇವರ ಪತ್ರ ಸಂಖ್ಯೆ:ಕಂ/ಭೂಸು/71&77/2010-11 ದಿನಾಂಕ:23-02-2011 ರಲ್ಲಿ ಪ್ರಸ್ತಾಪಿತ ಮೇಲ್ಕಂಡ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109 (1ಎ) ರಡಿ ಅನುಮೋದನೆ/ವಿನಾಯಿತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನನ್ನು ಖರೀದಿಸಲು ಖಾತೆದಾರರಿಂದ ವ್ಯವಹರಿಸಿಕೊಂಡಿದ್ದು ಹಾಗೂ ಸದರಿ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿರ್ಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1) ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38-ಬಿ ಮತ್ತು 38-ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ, ಅಥವಾ 80ಕ್ಕೆ ವಿನಾಯಿತಿ ನೀಡಿ ಜಿಲ್ಲಾಧಿಕಾರಿಯವರ ವರದಿಯ ಪ್ರಕಾರ ಮೆ:ಎಸ್.ಎಸ್.ಸಿ. ಸ್ಟೀಲ್ ಪ್ರೈವೇಟ್ ಲಿ., ಇವರಿಗೆ ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಹನುಮನಹಳ್ಳಿ ಗ್ರಾಮದ ಸರ್ವೆ ನಂ.48 ಮತ್ತು ಇತರೆಗಳಲ್ಲಿ ಒಟ್ಟು 198 ಎಕರೆ 24 ಗುಂಟೆ ಜಮೀನನ್ನು

**ಕೈಗಾರಿಕಾ ಉದ್ದೇಶಕ್ಕಾಗಿ** ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1ಎ) ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:–

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್.ನಾರಾಯಣ ಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣೆ).

**ಪಿ.ಆರ್. ನಂ. 51**

## ಕಂದಾಯ ಇಲಾಖೆ

### ಅಧಿಸೂಚನೆ

**ಸಂಖ್ಯೆ:ಕಂಇ 83 ಎಲ್ಆರ್ಎಂ 2010, ಬೆಂಗಳೂರು, ದಿನಾಂಕ:30–08–2011**

ಎನ್.ಕೆ.ಯುಟಿಲಿಟೀಸ್ ಲಿ., ಬೆಂಗಳೂರು, ಇವರಿಗೆ ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ತಾಲ್ಲೂಕು, ಅಚನೂರ ಗ್ರಾಮದ ರಿ.ಸರ್ವೆ ನಂ.15/5ಡ ಮತ್ತು ಇತರೆಗಳಲ್ಲಿ ಒಟ್ಟು 170 ಎಕರೆ 19 ಗುಂಟೆ ಕೃಷಿ ಜಮೀನನ್ನು **ಕೈಗಾರಿಕಾ ಉದ್ದೇಶಕ್ಕಾಗಿ ಅಂದರೆ, ಕಲ್ಲಿದ್ದಲು ಪವರ್ ಪ್ಲಾಂಟ್ ನಿರ್ಮಾಣಕ್ಕಾಗಿ** ನಮೂನೆ 15–ಎ ಮತ್ತು ನಮೂನೆ 15–ಎಎ,ರಲ್ಲಿನ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿ, ಬಾಗಲಕೋಟೆ ಜಿಲ್ಲೆ, ಇವರ ಪತ್ರ ಸಂಖ್ಯೆ:ಆರ್‌ಬಿ/ಕೆಎಲ್‌ಆರ್/ಸಿಆರ್–16/2010–11 ದಿನಾಂಕ:06–10–2010ರಲ್ಲಿ ಪ್ರಸ್ತಾಪಿತ ಮೇಲ್ಕಂಡ ಜಮೀನನ್ನು ಖರೀದಿಸಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ (1ಎ)ರಡಿ ಅನುಮೋದನೆ /ವಿನಾಯಿತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನನ್ನು ಖರೀದಿಗೆ ಪಡೆಯಲು ಖಾತೆದಾರರಿಂದ ವ್ಯವಹರಿಸಿಕೊಂಡಿದ್ದು ಹಾಗೂ ಸದರಿ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ) ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ, ಮತ್ತು 80ಕ್ಕೆ ವಿನಾಯಿತಿ ನೀಡಿ ಜಿಲ್ಲಾಧಿಕಾರಿಯವರ ವರದಿಯ ಪ್ರಕಾರ ಎನ್.ಕೆ.ಯುಟಿಲಿಟೀಸ್ ಲಿ., ಬೆಂಗಳೂರು, ಇವರಿಗೆ ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ತಾಲ್ಲೂಕು, ಅಚನೂರ ಗ್ರಾಮದ ರಿ.ಸರ್ವೆ ನಂ.15/ಡಿ ಮತ್ತು ಇತರೆಗಳಲ್ಲಿ ಒಟ್ಟು 170 ಎಕರೆ 19 ಗುಂಟೆ ಕೃಷಿ ಜಮೀನನ್ನು **ಕೈಗಾರಿಕಾ ಉದ್ದೇಶಕ್ಕಾಗಿ ಅಂದರೆ, ಕಲ್ಲಿದ್ದಲು ಪವರ್ ಪ್ಲಾಂಟ್ ನಿರ್ಮಾಣಕ್ಕಾಗಿ** ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1ಎ)ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:–

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್.ನಾರಾಯಣ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

**ಪಿ.ಆರ್. ನಂ. 1049**

## ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ.

**ಸಂ:ಇಎಕ್ಸ್‌ಇ:3:ಡಿಟಿಸಿಆರ್‌ಎ0:179:1996–97, ದಿ:27–8–2011**

ಉಪಸ್ಥಿತರು : **ಹೆಚ್.ಎನ್.ಆನಂದ್,**
ಅಧಿಕೃತ ಅಧಿಕಾರಿಗಳು ಹಾಗೂ
ಬಕಾರಿ ಉಪ ಆಯುಕ್ತರು,
ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿಗಳು** |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ಗ್ರಾಮಾಂತರ ಠಾಣೆ,<br>ವಿರಾಜಪೇಟೆ. | | ದಾಮೋದರ ಮತ್ತು ಇತರರು |

**ಪ್ರಕರಣದ ಮುಖ್ಯಾಂಶಗಳು :–**

ದಿ:27–7–96ರಂದು ಬೆಳಿಗ್ಗೆ 10.15ರ ಸಮಯದಲ್ಲಿ ವಿರಾಜಪೇಟೆ ಗ್ರಾಮಾಂತರ ಠಾಣೆಯ ಆರಕ್ಷಕ ಉಪ ನಿರೀಕ್ಷಕರಿಗೆ ಮಾಕುಟ್ಟ ಕೂಟುಪೊಳೆ ರಸ್ತೆಯಲ್ಲಿ ಜೀಪಿನಲ್ಲಿ ಸಾರಾಯಿ ಪ್ಯಾಕೇಟುಗಳನ್ನು ತುಂಬಿಟ್ಟುಕೊಂಡು ಯಾರೋ ಮಾರಾಟ ಮಾಡುತ್ತಿರುವರೆಂಬ ಖಚಿತ ವರ್ತಮಾನ ದೊರೆತ ಮೇರೆಗೆ ಆರಕ್ಷಕ ಉಪ ನಿರೀಕ್ಷಕರು ತಮ್ಮ ಸಿಬ್ಬಂದಿಯವರೊಂದಿಗೆ ಜೀಪಿನಲ್ಲಿ ಸ್ಥಳಕ್ಕೆ ಹೋದಾಗ ಕೂಟುಪೊಳೆಯ ಹೆದ್ದಾರಿಯಲ್ಲಿರುವ ಮೈಲುಕಲ್ಲು ಎನ್.ಹೆಚ್.88ಎ ರ ಹತ್ತಿರ ಸುಮಾರು 350ಅಡಿ ದೂರದಲ್ಲಿ ಕೆಎ–12–ಎಂ–3901ರ ನಂಬರಿನ ಜೀಪು ನಿಂತಿದ್ದು, ಇದರ ಪಕ್ಕದಲ್ಲೆ ನಿಂತಿದ್ದವರು ಪೊಲೀಸ್‌ನವರನ್ನು ಕಂಡು ಓಡಿಹೋಗಿರುತ್ತಾರೆ. ಆದ ಕಾರಣ ಆರಕ್ಷಕ ಉಪ ನಿರೀಕ್ಷಕರು ಸ್ಥಳಕ್ಕೆ ತೆಗೆದುಕೊಂಡು ಜೀಪಿನ ಚಾಲಕ ಮತ್ತು ಕ್ಲೀನರ್‌ರವರನ್ನು ಪಂಚರನ್ನಾಗಿ ಮಾಡಿಕೊಂಡು ಜೀಪನ್ನು ಪರಿಶೋಧಿಸಿದಾಗ ಒಟ್ಟು 7 ಪ್ಲಾಸ್ಟಿಕ್ ಚೀಲಗಳಲ್ಲಿ ಒಟ್ಟು 1820ಸಾರಾಯಿ ಪ್ಯಾಕೇಟುಗಳನ್ನು ತುಂಬಿಕೊಂಡು ವ್ಯಾಪಾರ ಮಾಡುತ್ತಿರುವುದು ಕಂಡುಬಂದ ಪ್ರಯುಕ್ತ ಈ ಬಗ್ಗೆ ಜೀಪಿನಲ್ಲಿ ಕುಳಿತಿದ್ದವರನ್ನು ರಹದಾರಿ ಪತ್ರ ವಗೈರೆ ಹಾಜರುಪಡಿಸುವಂತೆ ಕೇಳಿದಾಗ ಯಾವುದು ಇಲ್ಲದ ಕಾರಣ (1) ಕಾರ್ಯಪ್ಪ, 2)ಕೆ.ವಿ.ವಿನೋದ್, 3) ಡಿ.ಬಿ.ರೋಹಿತ್, 4) ಕೆ.ಎನ್.ದಾಮೋಧರ್, 5) ಡಿ.ಬಿ.ಪದ್ಮನಾಭ, 6) ಬಿ.ರಮೇಶ್ ರವರ ಮೇಲೆ ವಿರಾಜಪೇಟೆ ಗ್ರಾಮಾಂತರ ಆರಕ್ಷಕ ಠಾಣೆಯ ಮೊಕದ್ದಮೆ ಸಂ:158/96, ದಿ:27–7–96ರಂತೆ ದಾಖಲು ಮಾಡಿಕೊಂಡು ಜೀಪಿನಲ್ಲಿದ್ದ ಒಟ್ಟು 7 ಚೀಲಗಳಲ್ಲಿದ್ದ ಒಟ್ಟು 1820x100 ಮಿಲಿಯ ಸಾರಾಯಿ ಪ್ಯಾಕೇಟುಗಳು, (2) ಎರಡು ಖಾಲಿ ಪ್ಲಾಸ್ಟಿಕ್ ಚೀಲಗಳು, (3)ಒಂದು ಖಾಲಿ ಸಾರಾಯಿ ಪ್ಯಾಕೇಟ್, (4)ನಗದು ರೂ.5,000–00, (5)ಒಂದು ಹಳೆಯ ಸಿಟಿಜನ್ ಕ್ಯಾಲಿಕ್ಯೂಲೇಟರ್, (6)ಹಾಗೂ ಒಂದು ಬ್ಯಾಗ್ ಇವುಗಳನ್ನು ಜೀಪು ಸಂ: ಕೆಎ–12–ಎಂ–3901ರ ಸಮೇತ ತಮ್ಮ ಸ್ವಾಧೀನ ಪಡಿಸಿಕೊಂಡು ಮೇಲ್ಕಂಡ ಜೀಪು ಮತ್ತು ಎಲ್ಲಾ ಸ್ವೊತ್ತುಗಳನ್ನು ಸಂಬಂಧಪಟ್ಟ ಕಡತದೊಂದಿಗೆ ಮುಂದಿನ ಸೂಕ್ತ ಕ್ರಮಕ್ಕಾಗಿ ದಿ:1–8–96ರಂದು ಅಬಕಾರಿ ಇಲಾಖೆಗೆ ಹಸ್ತಾಂತರಿಸಿರುತ್ತಾರೆ.

ದಿ:17–8–96ರಂದು ಆರೋಪಿಗಳಿಗೂ ಮತ್ತು ದಿ: 30–8–96ರಂದು ವಾಹನದ ಮಾಲೀಕರಿಗೂ ನಿಯಮ 43(ಬಿ)ರಡಿಯಲ್ಲಿ ಕಾರಣ ಕೇಳಿ ನೋಟೀಸ್ ನೀಡಿ ವಾಹನ ಸಂ:ಕೆಎ–12–ಎಂ–3901 ಮತ್ತು ಅದರಲ್ಲಿದ್ದ 182x100ಮಿಲಿಯ ಸಾರಾಯಿ ಪ್ಯಾಕೇಟು, ರೂ.5,000(ಐದು ಸಾವಿರ)/–ಗಳ ನಗದು ಹಣ ಮತ್ತು ಇನ್ನಿತರೆ ವಸ್ತುಗಳನ್ನು ಅಬಕಾರಿ ನಿಯಮ 43(ಬಿ)ರ ರೀತ್ಯಾ ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಾಗಿ ತಿಳಿಸಿ ಕಾರಣ ಕೇಳಿ ನೋಟಿಸ್ ನೀಡಿ ಏಳು ದಿನಗಳೊಳಗಾಗಿ ವಾಹನದ ಮಾಲೀಕರಾಗಲೀ ಅವರ ಪರ ವಕೀಲರ ಮುಖಾಂತರವಾಗಲೀ ಸೂಕ್ತ ಸಾಕ್ಷ್ಯಾಧಾರಗಳೊಂದಿಗೆ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಲು ಸೂಚಿಸಿ ನೋಟಿಸ್ ನೀಡಲಾಗಿರುತ್ತದೆ.

ಸದರಿ ಕಾರಣ ಕೇಳಿ ನೋಟಿಸ್‌ಗೆ ವಾಹನದ ಮಾಲೀಕರು ಅವರ ಪರ ವಕೀಲರ ಮೂಲಕ ದಿ:30–8–96ರಂದು ಅರ್ಜಿಯನ್ನು ಸಲ್ಲಿಸಿ ವಾಹನದ ಮಾಲೀಕರು ಯಾವುದೇ ಅಪರಾಧ ಮಾಡಿಲ್ಲವೆಂದು ಹಾಗೂ ವಾಹನ ಸಾರಾಯಿ ಸಾಗಾಣಿಕೆಗೆ ಸಂಬಂಧಿಸಿದಂತೆ ಉಪಯೋಗಿಸಿರುವ ವಿಷಯ ತಮಗೆ ಅರಿವಿಲ್ಲವೆಂದು, ವಾಹನವನ್ನು ಮುಕ್ತವಾಗಿ ರಕ್ಷಣೆ ಇಲ್ಲದೆ ಇಟ್ಟಿರುವ ಹಿನ್ನಲೆಯಲ್ಲಿ ಹಾಗೂ ಸದರಿ ಜೀಪನ್ನು ಚಾಲನೆ ಮಾಡದೇ ಹಾಗೆಯೇ ನಿಲ್ಲಿಸಿದಲ್ಲಿ ಯಾಂತ್ರಿಕ ತೊಂದರೆಯಾಗುವುದಲ್ಲದೇ ಹಾಳಾಗುವ ಸಂಭವವಿರುವುದರಿಂದ ಸದರಿ ಜೀಪನ್ನು ಮಾಲೀಕರ ವಶಕ್ಕೆ ತಾತ್ಕಾಲಿಕ ಸುಪರ್ದಿಗೆ ಬಿಟ್ಟುಕೊಡಬೇಕೆಂದು ಹಾಗೂ ಈ ಪ್ರಾಧಿಕಾರ ವಿಧಿಸುವ ಎಲ್ಲಾ ನಿಬಂಧನೆಗಳಿಗೆ ತಾವು ಬದ್ಧರಾಗಿರುತ್ತೇವೆಂದು ಕೋರಿ ಪ್ರಾರ್ಥಿಸಿಕೊಂಡಿರುತ್ತಾರೆ. ಜೀಪಿನ ಮಾಲೀಕರು ಜೀಪನ್ನು ತಾತ್ಕಾಲಿಕ ಸುಪರ್ದಿಗೆ ಬಿಡುಗಡೆಗೊಳಿಸಲು ಕೋರಿರುತ್ತಾರೆ ಹಾಗೂ ಸದರಿ ಪ್ರಕರಣವನ್ನು ನಡೆಸಿಕೊಂಡು ಹೋಗಲು ವಾಹನ ಮಾಲೀಕರಾದ ಶ್ರೀ ಎ.ಅಪ್ಪುಟ್ಟಿ, ಮಲಬಾರ್ ರೋಡ್, ವಿರಾಜಪೇಟೆ ಇವರು ನ್ಯಾಯಾಲಯದ ಎಲ್ಲಾ ಕೆಲಸ ಕಾರ್ಯಗಳಿಗೆ ಸಹಕರಿಸಲು ತನ್ನ ಪರವಾಗಿ ತನ್ನ ಮಗನಾದ ಶ್ರೀ ಮನೋಜ್ ಇವರಿಗೆ ವಿಶೇಷ (ಸ್ಪೆಷಲ್ ಪವರ್ ಆಫ್ ಅಟಾರ್ನಿ) ಅಧಿಕಾರಯುತ ಹಕ್ಕುಪತ್ರವನ್ನು ಈ ಪ್ರಾಧಿಕಾರಕ್ಕೆ ವಕೀಲರು ಅರ್ಜಿಯೊಂದಿಗೆ ಸಲ್ಲಿಸಿರುತ್ತಾರೆ. ಸಲ್ಲಿಸಿದ ಅರ್ಜಿಯನ್ನು ಪರಿಶೀಲಿಸಿದಾಗ ಅವರ ಹೇಳಿಕೆಯು ಸಮಂಜಸವಾಗಿ ಕಂಡುಬಂದಿರುವುದಿಲ್ಲ. ಇವರ ಕೋರಿಕೆಯಂತೆ ಜೀಪನ್ನು ಮಾಲೀಕರ(ಅರ್ಜಿದಾರರ) ವಶಕ್ಕೆ ತಾತ್ಕಾಲಿಕ ಸುಪರ್ದಿಗೆ ಬಿಟ್ಟುಕೊಟ್ಟಲ್ಲಿ ಮತ್ತೆ ಅಬಕಾರಿ ಕಾಯ್ದೆ ಉಲ್ಲಂಘನೆ ಕಾರ್ಯಕ್ಕೆ ಬಳಸುವ ಸಾಧ್ಯತೆ ಇರುವುದರಿಂದ ಮತ್ತು ಜೀಪನ್ನು ಬೇರೆಯವರಿಗೆ ಮಾರಾಟ ಮಾಡುವುದಾಗಲೀ, ಜೀಪಿನ ಬಣ್ಣ ಬದಲಾವಣೆ, ಭಾಗಗಳ ಬದಲಾವಣೆ, ಇಂಜಿನ್ ಬದಲಾವಣೆ, ಇನ್ನಾವುದೇ ರೀತಿಯಲ್ಲಿ ಸರ್ಕಾರಕ್ಕೆ ಮೋಸ ಮಾಡುವ ಸಾಧ್ಯತೆಯನ್ನು

ಮನಗಂಡು ವಾಹನದ ಮಾಲೀಕರು ತಾತ್ಕಾಲಿಕ ಸುಪರ್ದಿಗೆ ಬಿಡುಗಡೆಗೊಳಿಸಲು ಕೋರಿ ಈ ಪ್ರಾಧಿಕಾರಕ್ಕೆ ಸಲ್ಲಿಸಿದ ಅರ್ಜಿಯು ಅಸಮರ್ಪಕ ಹಾಗೂ ಸತ್ಯಕ್ಕೆ ದೂರವಾಗಿರುವುದು ಕಂಡುಬಂದಿರುವುದರಿಂದ ಇವರ ಅರ್ಜಿಯನ್ನು ದಿ:31–8–96ರಂದು ತಿರಸ್ಕರಿಸಿ ಆದೇಶ ನೀಡಲಾಗಿತ್ತು.

ದಿ:31–8–96ರ ಆದೇಶದ ವಿರುದ್ಧ ವಾಹನದ ಮಾಲೀಕರು ಘನ ಸೆಷನ್ಸ್ ನ್ಯಾಯಾಲಯ, ಮಡಿಕೇರಿ ಇಲ್ಲಿ ಅಪೀಲು ಸಂ:46/96ರಂತೆ ಸಲ್ಲಿಸಿದ್ದು, ಘನ ನ್ಯಾಯಾಲಯ ಇವರ ಅರ್ಜಿಗೆ ಸಂಬಂಧಿಸಿದಂತೆ ದಿ:19–10–96ರಂದು ಆದೇಶ ನೀಡಿ ದಿ:31–8–96ರ ಈ ಪ್ರಾಧಿಕಾರದ ಆದೇಶವನ್ನು ವಜಾಗೊಳಿಸಿ ವಾಹನದ ಮಾಲೀಕರ ಪರವಾಗಿ ವಾಹನವನ್ನು ಮಧ್ಯಂತರ ಬಿಡುಗಡೆಯ ಸಂಬಂಧ ಷರತ್ತು ಬದ್ಧವಾದ ಆದೇಶ ನೀಡಿರುತ್ತಾರೆ ಮತ್ತು ಸದರಿ ಆದೇಶದಲ್ಲಿ ಇಂಡೆಮಿನಿಟಿ ಬಾಂಡ್ ಮತ್ತು ಸಾಲ್ವೆಂಟ್ ಶ್ಯೂರಿಟಿಯನ್ನು ವಾಹನದ ಮೌಲ್ಯಕ್ಕೆ ಸಮನಾಗಿ ಪಡೆದುಕೊಂಡು ಮಧ್ಯಂತರ ಬಿಡುಗಡೆಗೊಳಿಸಲು ಆದೇಶ ನೀಡಿರುತ್ತದೆ.

ಘನ ನ್ಯಾಯಾಲಯದ ಆದೇಶದಂತೆ ವಾಹನದ ಮಾಲೀಕರಾದ ಶ್ರೀ ಎ.ಅಪ್ಪುಟ್ಟಿ, ಮಲಬಾರ್ ರೋಡ್, ವಿರಾಜಪೇಟೆ ರವರು ಅವರ ಹೆಂಡತಿಯ ಹೆಸರಿನಲ್ಲಿರುವ ರೂ.1,00,000(ಒಂದು ಲಕ್ಷ)/–ಗಳ ಬೆಲೆಗೆ ಸಮನಾಗಿ ಶ್ರೀಮತಿ ಪದ್ಮಾವತಿ ಕೋಂ ಅಪ್ಪುಟ್ಟಿ, ಮಲಬಾರ್ ರಸ್ತೆ, ವಿರಾಜಪೇಟೆ ಇವರ ಹೆಸರಿನಲ್ಲಿ ವಿರಾಜಪೇಟೆ ತಾಲ್ಲೂಕು ಆರ್ಜಿ ಗ್ರಾಮದಲ್ಲಿನ ಸರ್ವೇ ನಂ:328/33ರಲ್ಲಿ, ಹೊಂದಿರುವ 3.07ಎಕರೆ ಕಾಫಿ ತೋಟದ ಆಸ್ತಿಗೆ ಸಾಲ್ವೆನ್ಸಿ ದೃಡೀಕರಣ ಪತ್ರ, ಇಂಡೆಮಿನಿಟಿ ಬಾಂಡ್, ಅಫಿಡವಿಟ್‌ನ್ನು ಪಡೆದುಕೊಂಡು ದಿ:13–12–96ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಿ ವಾಹನದ ಮಾಲೀಕರಿಗೆ ವಾಹನವನ್ನು ಮಧ್ಯಂತರ ಬಿಡುಗಡೆ ಮಾಡಲಾಗಿರುತ್ತದೆ. ಶ್ರೀಮತಿ ಪದ್ಮಾವತಿ ಕೋಂ ಅಪ್ಪುಟ್ಟಿ, ಇವರ ಸಾಲ್ವೆನ್ಸಿ ದೃಡೀಕರಣ ಪತ್ರವನ್ನು ವಿರಾಜಪೇಟೆ ತಾಲ್ಲೂಕಿನ ತಹಶೀಲ್ದಾರ್ ಇವರ ದಿ: 5–1–2000ರ ದೃಢೀಕರಣ ಪತ್ರದಲ್ಲಿ 6 ತಿಂಗಳವರೆಗೆ ವಿಸ್ತರಿಸಿ ಸಲ್ಲಿಸಿರುತ್ತಾರೆ. ಆನಂತರ ಸಾಲ್ವೆನ್ಸಿ ವಾಯಿದೆಯನ್ನು ನವೀಕರಿಸಿರುವುದಿಲ್ಲ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ವಾಹನದ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಹಾಜರಾಗಿರುವುದಿಲ್ಲ ಮತ್ತು ವಾಹನವನ್ನು ಕೂಡ ಹಾಜರುಪಡಿಸಿರುವುದಿಲ್ಲ. ಆದ ಕಾರಣ ಪ್ರಕರಣ ದಾಖಲು ಮಾಡಿದ ಅಧಿಕಾರಿಯವರ ಮಾತ್ರ ವಿಚಾರಣೆ ದಿ:15–5–97ರಂದು ನಡೆಸಲಾಗಿರುತ್ತದೆ. ವಿಚಾರಣಾ ಸಮಯದಲ್ಲೂ ವಾಹನದ ಮಾಲೀಕರು ವಾಹನವನ್ನು ಪ್ರಾಧಿಕಾರಕ್ಕೆ ಹಾಜರುಪಡಿಸಿರುವುದಿಲ್ಲ. ಆದ ಕಾರಣ ವಾಹನವನ್ನು ಜಪ್ತುಪಡಿಸಿಕೊಳ್ಳಲು ಅಬಕಾರಿ ನಿರೀಕ್ಷಕರು, ವಿರಾಜಪೇಟೆ ವಲಯ ರವರಿಗೆ ಸೂಚಿಸಲಾಗಿರುತ್ತದೆ. ತಹಶೀಲ್ದಾರ್, ವಿರಾಜಪೇಟೆ ತಾಲ್ಲೂಕು ಇವರಿಗೆ ದಿ:7–2–01ರಲ್ಲಿ ಪತ್ರ ಬರೆದು ಶ್ರೀಮತಿ ಇ.ಕೆ.ಪದ್ಮಾವತಿ, ಕೋಂ ಅಪ್ಪುಟ್ಟಿ ರವರ ಹೆಸರಿಗೆ ನೀಡಲಾದ ಸಾಲ್ವೆನ್ಸಿ ದೃಢೀಕರಣ ಪತ್ರದ ಅವಧಿಯು ಮುಗಿದಿದ್ದು, ನವೀಕರಿಸದೇ ಇರುವ ಕಾರಣ ಸದರಿಯವರ ಹೆಸರಿನಲ್ಲಿರುವ ಆರ್ಜಿ ಗ್ರಾಮದಲ್ಲಿನ ಸರ್ವೇ ನಂ:328/33ರಲ್ಲಿ ಹೊಂದಿರುವ ಆಸ್ತಿಯನ್ನು ಬೇರೆಯವರ ಹೆಸರಿಗೆ ವರ್ಗಾಯಿಸುವುದಕ್ಕಾಗಲೀ, ಮಾರಾಟ ಮಾಡುವುದಕ್ಕಾಗಲೀ ಅವಕಾಶ ನೀಡಬಾರದಾಗಿ ಕೋರಲಾಗಿದೆ. ಆದರೆ ವಾಹನದ ಮಾಲೀಕರಿಗೆ ಹಲವಾರು ಪತ್ರಗಳು ಕಳುಹಿಸಲಾಗಿದ್ದು, ಪತ್ರವನ್ನು ಸ್ವೀಕೃತಿ ಮಾಡಿಕೊಂಡಿದ್ದರೂ ಸಹ 2001 ರಿಂದ 2007ನೇ ಸಾಲಿನವರೆಗೆ ಸಂಬಂಧಪಟ್ಟವರು ಹಾಜರಾಗಿರುವುದಿಲ್ಲ. ನಂತರ ದಿ:30–12–08ರಂದು ವಿಚಾರಣೆಗೆ ವಿಶೇಷ ಅಧಿಕಾರಯುತ ಹಕ್ಕುಪತ್ರ ಪಡೆದವರಾದ ಶ್ರೀ ಮನೋಜ್ ರವರು ಅವರ ವಕೀಲರೊಂದಿಗೆ ಹಾಜರಾಗಿದ್ದು, ವಾಹನವನ್ನು ಹಾಜರುಪಡಿಸಲು ಸಮಯಾವಕಾಶವನ್ನು ಕೋರಿರುತ್ತಾರೆ ಮತ್ತು ಇದೇ ರೀತಿಯ ಕೋರಿಕೆಯನ್ನು ದಿ:29–10–09ರಂದು ಸಲ್ಲಿಸಿದ್ದು, ನಂತರದ ದಿನಗಳಲ್ಲಿ ಹಾಜರಾಗದೇ ವಾಹನವನ್ನು ಹಾಜರುಪಡಿಸಲು ವಿಫಲರಾಗಿದ್ದು, ನ್ಯಾಯಾಲಯದ ಆದೇಶವನ್ನು ಉಲ್ಲಂಘನೆ ಮಾಡಿರುತ್ತಾರೆ.

ಈ ರೀತಿಯಲ್ಲಿ ಪ್ರಾಧಿಕಾರದಲ್ಲಿ ನಡೆಯುವ ವಿಚಾರಣೆಗೆ ಹಾಜರಾಗದೇ ವಾಹನದ ಮಾಲೀಕರು ಮಾನ್ಯ ಘನ ನ್ಯಾಯಾಲಯ, ಮಡಿಕೇರಿ ಇವರ ಷರತ್ತುಬದ್ಧ ಆದೇಶವನ್ನು ಉಲ್ಲಂಘಿಸುತ್ತಲೇ ಬಂದಿರುತ್ತಾರೆ. ವಾಹನದ ಮಾಲೀಕರ ಪರ ವಿಶೇಷ ಅಧಿಕಾರಯುತ ಹಕ್ಕುಪತ್ರ ಪಡೆದವರಾದ ಶ್ರೀ ಮನೋಜ್ ರವರು ಈ ಪ್ರಕರಣದ ಪೂರ್ಣ ವಿಷಯವನ್ನು ಅರಿತಿದ್ದು, ಪ್ರಕರಣವನ್ನು ವಿಲೇಗೊಳಿಸಲು ಸಹಕರಿಸದೇ ವಾಹನವನ್ನು ಹಾಜರುಪಡಿಸದೇ ಅನಾವಶ್ಯಕ ಕಾಲವಿಳಂಭ ಮಾಡುತ್ತಿರುವುದು ಕಂಡುಬಂದಿರುತ್ತದೆ. ದಿ:25–6–2011, 22–8–2011 ರಂದು ವಾಹನದ ಮಾಲೀಕರಿಗೆ ಸಮನ್ಸ್ ನೀಡಿ ಹಾಜರಾಗಲು ಸೂಚಿಸಿದ್ದರೂ ವಾಹನ ಮಾಲೀಕರು ವಾಹನದೊಂದಿಗೆ ಹಾಜರಾಗಿರುವುದಿಲ್ಲ ಹಾಗೂ ದೂರವಾಣಿ ಮೂಲಕ ಸಂಪರ್ಕಿಸಿ ಪ್ರಾಧಿಕಾರಕ್ಕೆ ಹಾಜರಾಗಲು ತಿಳಿಸಿದ್ದರೂ ಹಾಜರಾಗದೇ ಪ್ರಕರಣವನ್ನು ವಿಲೇಗೊಳಿಸಲು ಸಹಕಾರ ನೀಡದೇ ವಿಳಂಭಕ್ಕೆ ಕಾರಣರಾಗಿರುತ್ತಾರೆ.

ಆದುದರಿಂದ ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ವಾಹನದ ಮಾಲೀಕರು ವಾಹನವನ್ನು ಮಧ್ಯಂತರಿಕವಾಗಿ ಪಡೆದುಕೊಳ್ಳುವ ಸಮಯದಲ್ಲಿ ನೀಡಲಾದ ಷರತ್ತು ಬದ್ಧವಾದ ಅಫಿಡವಿಟ್ ಇಂಡೆಮಿನಿಟಿ ಬಾಂಡ್, ಸಾಲ್ವೆಂಟ್ ಶ್ಯೂರಿಟಿಯಲ್ಲಿನ ಅಂಶದಂತೆ ಪ್ರಕರಣ ಮುಗಿಯುವವರೆಗೂ ವಾಹನದ ಮಾಲೀಕರ ಪರ ವಿಶೇಷ ಅಧಿಕಾರಯುತ ಹಕ್ಕುಪತ್ರ ಪಡೆದವರಾದ ಶ್ರೀ ಮನೋಜ್ ರವರು ಮತ್ತು ಸಾಲ್ವೆಂಟ್ ಶ್ಯೂರಿಟಿದಾರರಾದ ಶ್ರೀಮತಿ ಇ.ಕೆ.ಪದ್ಮಾವತಿ, ಕೋಂ ಅಪ್ಪುಟ್ಟಿ, ಮಲಬಾರ್ ರಸ್ತೆ, ವಿರಾಜಪೇಟೆ ರವರು ಪೂರ್ಣ ಜವಾಬ್ದಾರರಾಗಿರುತ್ತೇವೆಂದು ಸಹಿ ಮಾಡಿ ಸಲ್ಲಿಸಿದ್ದು, ನಂತರ ಘನ ನ್ಯಾಯಾಲಯದ ಆದೇಶದಲ್ಲಿನ ಷರತ್ತುಗಳನ್ನು ಉಲ್ಲಂಘನೆ ಮಾಡಿರುವ ಕಾರಣದಿಂದ ವಾಹನ ಜೀಪು ಸಂ: ಕೆಎ–12–ಎಂ–3901ರನ್ನು ಮತ್ತು ಸಾಲ್ವೆನ್ಸಿ ಭದ್ರತೆಯಲ್ಲಿ ತಿಳಿಸಿರುವ ಶ್ರೀಮತಿ ಇ.ಕೆ.ಪದ್ಮಾವತಿ, ಕೋಂ ಅಪ್ಪುಟ್ಟಿ, ಮಲಬಾರ್ ರಸ್ತೆ, ವಿರಾಜಪೇಟೆ ಇವರು ವಿರಾಜಪೇಟೆ ತಾಲ್ಲೂಕಿನ ಆರ್ಜಿ ಗ್ರಾಮದಲ್ಲಿರುವ ಸರ್ವೇ ನಂ:328/33ರಲ್ಲಿ ಕಾಣಿಸಿರುವ ಆಸ್ತಿಯ ಸಾಲ್ವೆನ್ಸಿ ಭದ್ರತೆಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಭೂಕಂದಾಯದ ನಿಯಮದನ್ವಯ ವಾಹನದ ಮೌಲ್ಯಕ್ಕೆ ಸಮನಾದ ಮೊತ್ತ ರೂ.1,00,000(ಒಂದು ಲಕ್ಷ)/–ಗಳನ್ನು ವಸೂಲು ಮಾಡುವ ಬಗ್ಗೆ ಕ್ರಮ ಜರುಗಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ.

**ಆದೇಶ ಸಂ:ಇಎಕ್ಸ್‌ಇ:ಡಿಟಿಸಿಆರ್‌ಎಂ:83:2009–10, ದಿ:27–8–2011**

ಹೆಚ್.ಎನ್.ಆನಂದ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು 43 ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಬಿ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಠಾಣೆ, ವಿರಾಜಪೇಟೆ ರವರ ಪ್ರ.ವ.ವ.ಸಂ:158/1996–97, ದಿ:27–7–96ರಲ್ಲಿ ವಶಪಡಿಸಿಕೊಂಡ ವಾಹನ ಜೀಪು ಸಂ: ಕೆಎ–12–ಎಂ–3901 ರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮತ್ತು ಶ್ರೀಮತಿ ಇ.ಕೆ.ಪದ್ಮಾವತಿ, ಕೋಂ ಅಪ್ಪುಟ್ಟಿ, ಮಲಬಾರ್ ರಸ್ತೆ, ವಿರಾಜಪೇಟೆ ಇವರು ವಿರಾಜಪೇಟೆ ತಾಲ್ಲೂಕಿನ ಆರ್ಜಿ ಗ್ರಾಮದಲ್ಲಿರುವ ಸರ್ವೇ ನಂ:328/33ರಲ್ಲಿ ಕಾಣಿಸಿರುವ ಆಸ್ತಿಯ ಸಾಲ್ವೆನ್ಸಿ ಭದ್ರತೆಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಭೂಕಂದಾಯ ನಿಯಮದನ್ವಯ ವಾಹನಕ್ಕೆ ಸಮನಾದ ಮೊತ್ತ ರೂ.1,00,000(ಒಂದು ಲಕ್ಷ)/–ಗಳನ್ನು ವಸೂಲು ಮಾಡುವ ಕ್ರಮ ಜರುಗಿಸಲು ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿ:27–8–11ರಂದು ಉತ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

**ಪಿ.ಆರ್. ನಂ. 962**

## ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ.

**ಸಂ:ಇಎಕ್ಸ್‌ಇ:3:ಸಿಆರ್‌ಎ0:441:2001–02, ದಿ:12–12–2011**

ಉಪಸ್ಥಿತರು : **ಹೆಚ್.ಎನ್.ಆನಂದ್,**
ಅಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಉಪ ಆಯುಕ್ತರು,
ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ಪೊನ್ನಂಪೇಟೆ ಠಾಣೆ. | | ಚೇರಂಡ ಬೆಳ್ಯಪ್ಪ ಬಿನ್ ನಂಜಪ್ಪ,<br>ಚಿಕ್ಕಮಂಡೂರು ಗ್ರಾಮ,<br>ವಿರಾಜಪೇಟೆ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:–**

ದಿ:4–1–02ರಂದು ಆರಕ್ಷಕ ಉಪ ನಿರೀಕ್ಷಕರು ಠಾಣೆಯ ಉಸ್ತುವಾರಿಯಲ್ಲಿರುವಾಗ ಸಮಯ ಬೆಳಿಗ್ಗೆ 7.35ಗಂಟೆಯಲ್ಲಿ ಪಂಚವಳ್ಳಿ ಅಳ್ಳೂರು ಕಡೆಯಿಂದ ಸರ್ಕಾರದ ಯಾವುದೇ ಪರವಾನಗಿ ಇಲ್ಲದೆ ಅಕ್ರಮ ಸೇಂದಿಯನ್ನು ಸಾಗಿಸಿ ಮಾರಾಟ ಮಾಡುತ್ತಿರುವುದಾಗಿ ದೊರೆತ ಖಚಿತ ವರ್ತಮಾನದ ಮೇರೆಗೆ ಸಿಬ್ಬಂದಿಯವರಾದ ಕಾ.ನಂ:299, 87, 204ರವರೊಂದಿಗೆ ಇಲಾಖಾ ಜೀಪ್ ಸಂ:ಕೆಎ–12–ಜಿ–302ರಲ್ಲಿ ಪಂಚಾಯತುದಾರರನ್ನು ಕರೆದುಕೊಂಡು ಆನೆಚೌಕೂರು ತಪಾಸಣಾ ಗೇಟಿನಲ್ಲಿ ಕಾದು ಕುಳಿತಿದ್ದಾಗ ಅಳ್ಳೂರು ಕಡೆಯಿಂದ ಒಬ್ಬ ಅಸಾಮಿಯು ಒಂದು ಮೋಟಾರ್ ಸೈಕಲ್ ಸಂ:ಕೆಎ–12–ಇ–3121ರಲ್ಲಿ ಬರುತ್ತಿದ್ದು, ಸದರಿ ಮೋಟಾರು ಸೈಕಲ್ಲಿನ ಹಿಂಭಾಗದಲ್ಲಿ ಒಂದು ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನನ್ನು ಕಟ್ಟಿದ್ದು, ಸದರಿಯವನನ್ನು ಕೈಸನ್ನೆ ಮಾಡಿ ನಿಲ್ಲಿಸಿ ಪರಿಶೀಲಿಸಿದಾಗ ಕ್ಯಾನಿನಲ್ಲಿ ಸೇಂದಿ ವಾಸನೆ ಬರುತ್ತಿದ್ದು, ಸದರಿ ಸೇಂದಿಯನ್ನು ಇಟ್ಟುಕೊಳ್ಳಲು ಸರ್ಕಾರದ ಯಾವುದೇ ಪರವಾನಗಿ ಇದೆಯೇ ಎಂದು ಕೇಳಿದಾಗ ಇಲ್ಲವೆಂದು ತಿಳಿಸಲಾಗಿ, ಸದರಿ ಅಸಾಮಿಯ ಹೆಸರು ವಿಳಾಸ ಕೇಳಿದಾಗ ಚೇರಂಡ ಎನ್.ಬೆಳ್ಯಪ್ಪ ಬಿನ್ ನಂಜಪ್ಪ, ಚಿಕ್ಕಮಂಡೂರು ಗ್ರಾಮ ಎಂದು ತಿಳಿಸಿದನು. ಸದರಿ ಅಸಾಮಿಯು ಅಕ್ರಮವಾಗಿ ಸರ್ಕಾರದ ಪರವಾನಗಿ ಇಲ್ಲದೆ ಮೋಟಾರು ಬೈಕಿನಲ್ಲಿ ಸೇಂದಿಯನ್ನು ಮಾರಾಟ ಮಾಡಲು ಸಾಗಿಸುತ್ತಿದ್ದುದು ಕಾನೂನಿಗೆ ವಿರೋಧವಾಗಿ ಕಂಡುಬಂದದ್ದರಿಂದ ಪಂಚರ ಸಮಕ್ಷಮದಲ್ಲಿ 20ಲೀ. ಸಾಮರ್ಥ್ಯದ ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನಿನಲ್ಲಿದ್ದ ಸೇಂದಿಯನ್ನು ಒಂದು ಬಾಟಲಿಗೆ ತುಂಬಿಸಿ ಬಾಕಿ ಉಳಿದ ಸೇಂದಿಯನ್ನು ನಾಶಪಡಿಸಲಾಗಿರುತ್ತದೆ. ಕ್ಯಾನಿನ ಮತ್ತು ಸೀಸೆಯ ಬಾಯಿಗೆ ಬಿಳಿ ಬಟ್ಟೆಯನ್ನು ಕಟ್ಟಿ ವಿಸಿಜಿ ಎಂಬ ಅಕ್ಷರದಿಂದ ಅರಗಿನಿಂದ ಸೀಲು ಮಾಡಲಾಗಿರುತ್ತದೆ. ಆರೋಪಿಯು ಕೃತ್ಯಕ್ಕೆ ಉಪಯೋಗಿಸಿದ ಮೋಟಾರು ಸೈಕಲನ್ನು ಅಜಮಾಯಿಸಿದಲ್ಲಿ ಒಂದು ಬುಲ್ಲೆಟ್–ENFIELD ಮೋಟಾರು ಸೈಕಲ್ ಆಗಿದ್ದು, ಅದರ ಹಿಂಭಾಗ ಮತ್ತು ಮುಂಭಾಗದಲ್ಲಿ ಕೆಎ–12–ಇ–3121ರ ನಂಬರ್ ಪ್ಲೇಟ್ ಇರುತ್ತದೆ. ಮೋಟಾರು ಸೈಕಲ್ ಕಪ್ಪು ಬಣ್ಣದಿಂದ ಕೂಡಿರುತ್ತದೆ. ಮೋಟಾರು ಸೈಕಲ್ಲಿನ ಇಂಜಿನ್ ನಂಬರ್ 5ಬಿ47914OD ಆಗಿದ್ದು ಚಾಸಿಸ್ ನಂಬರ್ 5ಬಿ47914OD ಆಗಿರುತ್ತದೆ. ಸದರಿ ಮಾದರಿಗಾಗಿ ತೆಗೆದ ಸೀಸೆ, ಕ್ಯಾನನ್ನು ಮತ್ತು ಮೋಟಾರು ಬೈಕನ್ನು ಮುಂದಿನ ಕ್ರಮದ ಬಗ್ಗೆ ಸ್ಥಳದಲ್ಲಿ ಅಮಾನತ್ತು ಪಡಿಸಿಕೊಂಡು ಅದರ ಮೇಲೆ ಪಂಚರ ಸಹಿ ಇರುವ ಚೀಟಿಯನ್ನು ಅಂಟಿಸಿ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 11, 14, 34, 43(ಎ)ರ ಪ್ರಕಾರ ಮೊಕದ್ದಮೆ ಸಂ:5/2002, ದಿ:4–1–02ರಂತೆ ಪ್ರಕರಣವನ್ನು ದಾಖಲಿಸಿಕೊಂಡು ಸ್ವೊತ್ತು ಮತ್ತು ವಾಹನವನ್ನು ಮುಂದಿನ ಕ್ರಮಕ್ಕಾಗಿ ಅಬಕಾರಿ ಉಪ ನಿರೀಕ್ಷಕರು, ವಿರಾಜಪೇಟೆ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಈ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆದ 'ಬಿ' ಎಕ್ಸ್‌ಟ್ರಾಕ್ಟ್‌ನಲ್ಲಿ ನಮೂದಿಸಿರುವಂತೆ ಶ್ರೀ ಕೆ.ಎಸ್.ಗಣಪತಿ ಬಿನ್ ಲೇಟ್ ನಂಜಪ್ಪ, ಬಿರುನಾಣಿ ಗ್ರಾಮ, ವಿರಾಜಪೇಟೆ ತಾಲ್ಲೂಕು ಇವರು ವಾಹನದ ಅಧಿಕೃತ ಮಾಲೀಕರಾಗಿದ್ದು, ಸದರಿಯವರಿಗೆ ಅಬಕಾರಿ ಕಾಯ್ದೆ 43(ಬಿ)ರಡಿಯಲ್ಲಿ ಕಾರಣ ಕೇಳಿ ನೋಟಿಸ್ ನೀಡಲಾಗಿದ್ದು, ಈ ಸಂಬಂಧ ವಾಹನದ ಮಾಲೀಕರು ಅವರ ಪರ ವಕೀಲರಿಂದ ವಾಹನವನ್ನು ಮಧ್ಯಂತರವಾಗಿ ಬಿಡುಗಡೆಗೊಳಿಸಿ ಕೊಡಬೇಕೆಂದು ದಿ:16–1–02ರಂದು ವಕಾಲತ್‌ನೊಂದಿಗೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ದಿ:16–2–02ಕ್ಕೆ ಸಮನ್ಸ್ ನೀಡಿ ವಾಹನದ ಮಾಲೀಕರಿಗೂ ಮತ್ತು ಎಲ್ಲಾ ಮಹಜರ್ ಸಾಕ್ಷಿದಾರರಿಗೂ ವಿಚಾರಣೆಗೆ ಕರೆಯಲಾಗಿತ್ತು. ಸದರಿ ದಿನದಂದು ವಾಹನದ ಮಾಲೀಕರ ಪರ ವಕೀಲರು ಹಾಜರಿದ್ದು, ಸದರಿ ವಾಹನಕ್ಕೆ ಪ್ರಾದೇಶಿಕ ಸಾರಿಗೆ ಅಧಿಕಾರಿಯವರಿಂದ ಮೌಲ್ಯ ರೂ.24,000/–(ಇಪ್ಪತ್ತನಾಲ್ಕು ಸಾವಿರ)ಗಳನ್ನು ನಿಗಧಿಪಡಿಸಲಾಗಿದ್ದು ಸಹಾಯಕ ಸರ್ಕಾರಿ ಅಭಿಯೋಜಕರು ಹಾಜರಿಲ್ಲದ ಕಾರಣ ಪ್ರಕರಣವನ್ನು ಮುಂದೂಡಲಾಯಿತು. ನಂತರ ವಾಹನದ ಮಾಲೀಕರಾದ ಶ್ರೀ ಕೆ.ಎನ್.ಗಣಪತಿ ಇವರು ಅರ್ಜಿಯನ್ನು ಸಲ್ಲಿಸಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಈಗಾಗಲೇ ನಿಗಧಿಪಡಿಸಿರುವ ಮೌಲ್ಯ ಹೆಚ್ಚಾಗಿದ್ದು, ಮೌಲ್ಯ ನಿಗಧಿಪಡಿಸಿದಂದಿನಿಂದ ಇಂದಿನವರೆಗೆ ಒಂದು ವರ್ಷ ಕಳೆದಿದ್ದು, ಗಾಳಿ ಮಳೆಗೆ ತೀರಾ ಹಾಳಾಗಿರುವುದರಿಂದ ವಾಹನವನ್ನು ಪುನರ್ ಪರಿಶೀಲಿಸಿ ಮರು ಪತ್ರ ನೀಡಬೇಕಾಗಿ ದಿ:8–11–02 ರಂದು ಕೋರಿ ಅರ್ಜಿ ಸಲ್ಲಿಸಿರುತ್ತಾರೆ. ಈ ಹಿನ್ನಲೆಯಲ್ಲಿ ದಿ:12–11–02ರಲ್ಲಿ ಪುನಃ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಮೌಲ್ಯವನ್ನು ಪುನರ್‌ಪರಿಶೀಲಿಸಿ ನಿಗಧಿಪಡಿಸಲು ಕೋರಲಾಗಿತ್ತು. ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಪತ್ರ ಸಂ:ಪ್ರಾ.ಸಾ.ಅ.ಮ:ಕೆಎ–12–ಇ–3121/02–03, ದಿ:2–12–02ರಲ್ಲಿ ವಾಹನದ ಮೌಲ್ಯವನ್ನು ರೂ.17,000/–(ಹದಿನೇಳು ಸಾವಿರ)ಗಳಿಗೆ ಪುನರ್ ನಿಗಧಿಪಡಿಸಲಾಗಿರುತ್ತದೆ. ಈ ಮಧ್ಯೆ ಶ್ರೀ ಎನ್.ಜಿ.ಅಯ್ಯಪ್ಪ, ವಕೀಲರು, ಮಡಿಕೇರಿ, ಇವರು ದಿ:15–7–02ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿದ್ದ ಕೋರಿಕೆಯನ್ನು ಅಂದರೆ ವಾಹನದ ಮಧ್ಯಂತರಿಕ ಬಿಡುಗಡೆ ಬಗ್ಗೆ ಸೂಕ್ತ ಆದೇಶವನ್ನು ನೀಡುವಂತೆ ಕೋರಿರುವ ಹಿನ್ನಲೆಯಲ್ಲಿ ವಿಚಾರಣೆಯನ್ನು ದಿ:3–1–03ರಂದು ನಿಗಧಿಪಡಿಸಲಾಗಿತ್ತು. ಸದರಿ ದಿನಾಂಕದಂದು ವಾಹನದ ಮಾಲೀಕರು, ಅವರ ಪರ ವಕೀಲರು ಹಾಜರಿದ್ದು, ವಾಹನವನ್ನು ಮಧ್ಯಂತರಿಕವಾಗಿ ಬಿಡುಗಡೆ ಮಾಡುವ ಬಗ್ಗೆ ಸದರಿಯವರ ಕೋರಿಕೆಯನ್ನು ಗಣನೆಗೆ ತೆಗೆದುಕೊಂಡು ವಾಹನವನ್ನು ಚಾಲನೆಯಲ್ಲಿ ಇಲ್ಲದೆ ಬಹಳಷ್ಟು ದಿನಗಳು ಇಲಾಖಾ ಸುಪರ್ದಿಯಲ್ಲಿ ಇಟ್ಟುಕೊಂಡಲ್ಲಿ ವಾಹನವು ಹಾಳಾಗುವ ಸಾಧ್ಯತೆಗಳನ್ನು, ಅಂತೆಯೇ ವಾಹನದ ಮೌಲ್ಯ ಸಹ ದಿನೇ ದಿನೇ ಕಡಿಮೆಯಾಗುವ ಸಾಧ್ಯತೆ ಇರುವುದರಿಂದ ಕೆಲವೊಂದು ಷರತ್ತಿಗೊಳಪಟ್ಟು ಮತ್ತು ನಿಗಧಿಪಡಿಸಿದ ಮೌಲ್ಯಕ್ಕೆ ಸಮನಾದ ಬ್ಯಾಂಕ್ ಗ್ಯಾರೆಂಟಿಯನ್ನು ಸಲ್ಲಿಸಿದಲ್ಲಿ ವಾಹನವನ್ನು ಮಾಲೀಕರ ವಶಕ್ಕೆ ಮಧ್ಯಂತರಿಕವಾಗಿ ಬಿಡುಗಡೆಗೊಳಿಸುವುದು ಸೂಕ್ತವೆಂದು ತೀರ್ಮಾನಿಸಿ ಪ್ರಕರಣವನ್ನು ದಿ:20–1–03ಕ್ಕೆ ಮುಂದೂಡಲಾಯಿತು. ದಿ:20–1–03ರಂದು ವಾಹನದ ಮಾಲೀಕರು ಹಾಗೂ ಅರ್ಜಿದಾರರಾದ ಶ್ರೀ ಕೆ.ಎನ್.ಗಣಪತಿ ಬಿನ್ ಲೇಟ್ ನಂಜಪ್ಪ, ಬಿರುನಾಣಿ ಗ್ರಾಮ, ವಿರಾಜಪೇಟೆ ತಾಲ್ಲೂಕು ಇವರು ನ್ಯಾಯಾಲಯದ ಮುಂದೆ ಹಾಜರಾಗಿ ಈ ನ್ಯಾಯಾಲಯದ ಆದೇಶಕ್ಕನುಗುಣವಾಗಿ ವಾಹನದ ಭದ್ರತೆಗಾಗಿ ಕಾರ್ಪೊರೇಷನ್ ಬ್ಯಾಂಕ್, ಪೊನ್ನಂಪೇಟೆ ಶಾಖೆ ಇಲ್ಲಿಂದ ರೂ.17,000/–(ಹದಿನೇಳು ಸಾವಿರ)ಗಳ ಬ್ಯಾಂಕ್ ಗ್ಯಾರೆಂಟಿ ಸಂ:1/03, ಷರತ್ತುಬದ್ಧ ಇಂಡೆಮಿನಿಟಿ ಬಾಂಡ್ ಮತ್ತು ನಷ್ಟಭರ್ತಿ ಮುಚ್ಚಳಿಕೆ ಕರಾರು ಪತ್ರಗಳನ್ನು ಭದ್ರತೆಯಾಗಿ ಒದಗಿಸಿರುವ ಪ್ರಯುಕ್ತ ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಮೋಟಾರು ಬೈಕ್ ಸಂ:ಕೆಎ–12–ಇ–3121 ರನ್ನು ಮಧ್ಯಂತರಿಕವಾಗಿ ಆದೇಶ ಸಂ:ಇಎಕ್ಸ್‌ಇ:3:ಡಿಟಿಸಿಆರ್‌ಎಂ: 441:02–03, ದಿ:20–1–03ರಂದು ಬಿಡುಗಡೆಗೊಳಿಸಿ ಆದೇಶ ನೀಡಲಾಗಿರುತ್ತದೆ. ತದನಂತರ ವಿಚಾರಣೆಯನ್ನು ಪ್ರಾರಂಭಿಸಿ ನೋಟೀಸ್ ನೀಡಲಾಗಿ ದಿ:15–2–07ರಂದು ವಾಹನದ ಮಾಲೀಕರು ಹಾಜರಿರುವುದಿಲ್ಲ. 5–4–07 ರಂದು ವಾಹನದ ಮಾಲೀಕರು ಹಾಜರಿದ್ದು, ವಾಹನವನ್ನು ಹಾಜರುಪಡಿಸಿರುವುದಿಲ್ಲ. ತದನಂತರ ಬ್ಯಾಂಕ್ ಗ್ಯಾರೆಂಟಿ ರೂ.17,000/–(ಹದಿನೇಳು ಸಾವಿರ)ಗಳ ಹಣವನ್ನು ಇನ್‌ವೋಕ್ ಮಾಡಿಕೊಂಡು ದಿ:16–12–08ರಂದು ಆರ್.ಡಿ. ಖಾತೆಯಲ್ಲಿಡಲಾಗಿರುತ್ತದೆ. ದಿ:27–12–08, 12–7–11, 29–8–11, 26–9–11, 12–12–11ಗಳಂದು ವಿಚಾರಣೆಯನ್ನು ನಿಗಧಿಪಡಿಸಿ ವಾಹನದ ಮಾಲೀಕರಿಗೆ ಸಮನ್ಸ್ ನೀಡಲಾಗಿ ವಾಹನದ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಹಾಜರಿರುವುದಿಲ್ಲ.

ವಾಹನದ ಮಾಲೀಕರು ಮೇಲಿನ ಎಲ್ಲಾ ದಿನಾಂಕಗಳಲ್ಲೂ ಹಾಜರಾಗದೇ ಇರುವ ಕಾರಣ ದಿ:12–12–11ರ ವಿಚಾರಣೆಗೆ ಸಮನ್ಸ್‌ನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ಸದರಿಯವರಿಗೆ ಸ್ವೀಕೃತಿಯಾದ ಬಗ್ಗೆ ಅವರಿಂದ ಸಹಿ ಪಡೆದ ಸ್ವೀಕೃತಿ ಪತ್ರವು ಈ ಕಛೇರಿಗೆ ಬಂದಿರುತ್ತದೆ. ಪ್ರಕರಣದ ವಿಲೇವಾರಿಗೆ ಅಸಹಕಾರ ನೀಡಿದ ಕಾರಣ ಸುಮಾರು 2008ನೇ ವರ್ಷದಿಂದ ಅವರಾಗಲೀ ಅವರ ಪರ ವಕೀಲರಾಗಲೀ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ವಾಹನದ ಮಾಲೀಕರಿಗೆ ಅಬಕಾರಿ ಕಾನೂನಿನ ಅರಿವಿದ್ದು, ಸರ್ಕಾರಕ್ಕೆ ನಷ್ಟ ಮಾಡುವ ನೆಪದಲ್ಲಿ ಈ ಕೃತ್ಯವೆಸಗಿರುವುದು ಕಂಡುಬಂದಿದ್ದು ಹಾಗೂ ಈ ನ್ಯಾಯಾಲಯದ ಆದೇಶ ಸಂ:ಇಎಕ್ಸ್:3:ಸಿಆರ್‌ಎಂ: 441:01–02, ದಿ:20–1–03ರ ಆದೇಶಗಳಲ್ಲಿನ ಷರತ್ತುಗಳನ್ನು ಉಲ್ಲಂಘನೆ ಮಾಡಿರುತ್ತಾರೆ ಮತ್ತು ಈ ಪ್ರಕರಣವನ್ನು ವಿಲೇಗೊಳಿಸಲು ಅಸಹಕಾರ ನೀಡಿರುತ್ತಾರೆ.

ಮೇಲಿನ ದಿನಾಂಕಗಳಲ್ಲಿ ವಾಹನದ ಮಾಲೀಕರಿಗೆ ವಾಹನವನ್ನು ಖುದ್ದಾಗಿ ಹಾಜರುಪಡಿಸಬೇಕೆಂದು ಸೂಚಿಸಿದ್ದರೂ ಕೂಡ ಆದೇಶವನ್ನು ಪಾಲಿಸದೇ ಇದ್ದು ದಿ:20–1–03ರ ಮಧ್ಯಂತರ ಆದೇಶದ ಷರತ್ತುಗಳನ್ನು ಉಲ್ಲಂಘನೆ ಮಾಡಿರುವುದು ನ್ಯಾಯಾಲಯದಲ್ಲಿ ಕಂಡುಬಂದಿದ್ದು ವಾಹನದ ಮಾಲೀಕರಿಗೆ ವಾಹನವನ್ನು ಹಾಜರುಪಡಿಸಲು ಸಾಕಷ್ಟು ಅವಕಾಶವನ್ನು ನೀಡಿದ್ದರೂ ವಿಫಲರಾಗಿದ್ದು, ಪ್ರಕರಣವನ್ನು ವಿಲೇಗೊಳಿಸಲು ವಾಹನದ ಮಾಲೀಕರು ಹಾಗೂ ಅವರ ಪರ ವಕೀಲರು ಅಸಹಕಾರ ನೀಡಿರುವುದರಿಂದ ವಾಹನ ಮೋಟಾರ್ ಬೈಕ್ ಸಂ:ಕೆಎ–12–ಇ–3121ರನ್ನು ಮತ್ತು ಈಗಾಗಲೇ ಆರ್.ಡಿ.ಖಾತೆಯಲ್ಲಿಡಲಾಗಿರುವ ಮೊತ್ತ ರೂ.17,000/–(ಹದಿನೇಳು ಸಾವಿರ)ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ.

**ಆದೇಶ ಸಂ:ಇಎಕ್ಸ್‌ಇ:3:ಸಿಆರ್‌ಎಂ:441:2001–02, ದಿ:12–12–2011.**

ಹೆಚ್.ಎನ್.ಆನಂದ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು 43ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, 43ಬಿ ರಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿ, ಆರಕ್ಷಕ ಉಪ ನಿರೀಕ್ಷಕರು, ಪೊನ್ನಂಪೇಟೆ ಠಾಣೆ ರವರ ಪ್ರ.ವ.ವ.ಸಂ:5/02, ದಿ:4–1–02ರಲ್ಲಿ ವಶಪಡಿಸಿಕೊಂಡ ವಾಹನ ಮೋಟಾರ್ ಬೈಕ್ ಸಂ:ಕೆಎ–12–ಇ–3121ರನ್ನು

ನ್ಯಾಯಾಲಯಕ್ಕೆ ಹಾಜರುಪಡಿಸದೇ ಮಧ್ಯಂತರ ಆದೇಶದ ಷರತ್ತುಗಳನ್ನು ಉಲ್ಲಂಘನೆ ಮಾಡಿರುವುದರಿಂದ ವಾಹನವನ್ನು ಮತ್ತು ಈಗಾಗಲೇ ಆರ್.ಡಿ.ಖಾತೆಯಲ್ಲಿಡಲಾಗಿರುವ ಮೊತ್ತ ರೂ.17,000/–(ಹದಿನೇಳು ಸಾವಿರ)ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅಬಕಾರಿ ಶೀರ್ಷಿಕೆಗೆ ಹೊಂದಾಣಿಕೆ ಮಾಡಿಕೊಳ್ಳಲು ಆದೇಶ ನೀಡಿದೆ.

ಈ ಆದೇಶವನ್ನು ದಿ:12–12–11ರಂದು ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು .

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

**ಪಿ.ಆರ್. ನಂ. 1357**

## ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ.

**ಸಂ:ಇಎಕ್ಸ್‌ಇ:3:ಡಿಟಿಸಿಆರ್‌ಎಂ:102:2006–07, ದಿ:25–11–2011**

ಉಪಸ್ಥಿತರು : **ಹೆಚ್.ಎನ್.ಆನಂದ್,**
ಅಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಉಪ ಆಯುಕ್ತರು,
ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿ** |
|---|---|---|
| ಅಬಕಾರಿ ಉಪ ನಿರೀಕ್ಷಕರು,<br>ಜಾರಿ ಮತ್ತು ತನಿಖೆ,<br>ಸೋಮವಾರಪೇಟೆ. | | ಕೆ.ಜಿ.ಕೃಷ್ಣಕಾಂತ್,<br>ಬಿನ್ ಕೆ.ಕೆ.ಗೋವಿಂದ,<br>ಶಾಂತಳ್ಳಿ ಗ್ರಾಮ ಮತ್ತು ಅಂಚೆ,<br>ಸೋಮವಾರಪೇಟೆ. |

**ಪ್ರಕರಣದ ಮುಖ್ಯಾಂಶಗಳು:–**

ದಿ:30–1–2007ರಂದು ಅಬಕಾರಿ ಉಪ ನಿರೀಕ್ಷಕರು, ನಂ:1, ಜಾರಿ ಮತ್ತು ತನಿಖೆ, ಸೋಮವಾರಪೇಟೆ ಇವರು ಯಡೂರು ಶಾಂತಳ್ಳಿಯಲ್ಲಿ ರಸ್ತೆಗಾವಲು ನಡೆಸುತ್ತಿದ್ದಾಗ ಯಡೂರಿನ ಬಿ.ಟಿ.ಸಿ.ಜಿ ಕಾಲೇಜಿನ ಎದುರಿಗೆ ರಸ್ತೆಯಲ್ಲಿ ಒಂದು ಹೀರೋಹೋಂಡ ಸ್ಪ್ಲೆಂಡರ್ ಸಂ:ಕೆಎ–12–ಹೆಚ್–4340ರ ವಾಹನವು ಬರುತ್ತಿದ್ದು, ಅದರ ಸವಾರನನ್ನು ತಡೆದು ವಾಹನವನ್ನು ನಿಲ್ಲಿಸಿದಾಗ ವಾಹನದ ಮುಂಭಾಗದ ಪೆಟ್ರೋಲ್ ಟ್ಯಾಂಕ್ ಮತ್ತು ಸೀಟಿನ ಮಧ್ಯ ಜಾಗದಲ್ಲಿ ಒಂದು ರಟ್ಟಿನ ಪೆಟ್ಟಿಗೆ ಮತ್ತು ಸವಾರನ ಹಿಂಬದಿಯ ಸೀಟು ಮತ್ತು ಕ್ಯಾರಿಯರಿಗೆ ಸೇರಿಸಿ ಹಗ್ಗದಿಂದ ಕಟ್ಟಿದ ಎರಡು ರಟ್ಟಿನ ಪೆಟ್ಟಿಗೆ ಇರುವುದು ಕಂಡುಬಂತು. ನಂತರ ವಾಹನದ ಸವಾರನು ರಟ್ಟಿನ ಪೆಟ್ಟಿಗೆಯಲ್ಲಿ ಏನಿದೆ ಎಂದು ಕೇಳಲಾಗಿ, ಆತನು ಪೆಟ್ಟಿಗೆಗಳಲ್ಲಿ ತಾನು ಬಿಯರ್ ಮತ್ತು ಮದ್ಯವನ್ನು ಸಾಗಿಸುತ್ತಿರುವುದಾಗಿ ತಿಳಿಸಿದನು. ಸದರಿ ಪೆಟ್ಟಿಗೆಗಳನ್ನು ಪರಿಶೀಲಿಸುವ ಸಲುವಾಗಿ ಅಲ್ಲಿಯೇ ಇದ್ದ ಜನರಿಗೆ ಅಧಿಕಾರಿಗಳು ಬಂದ ವಿಷಯವನ್ನು ತಿಳಿಸಿ ಪಂಚರಾಗಲು ಕೇಳಿಕೊಂಡ ಮೇರೆಗೆ ಅವರು ಒಪ್ಪಿದ ನಂತರ ಪಂಚರ ಸಮ್ಮುಖದಲ್ಲಿ ವಾಹನದಲ್ಲಿದ್ದ ರಟ್ಟಿನ ಪೆಟ್ಟಿಗೆಗಳನ್ನು ಪರಿಶೀಲಿಸಲಾಗಿ 3 ರಟ್ಟಿನ ಪೆಟ್ಟಿಗೆಗಳ ಪೈಕಿ 2 ರಟ್ಟಿನ ಪೆಟ್ಟಿಗೆಯಲ್ಲಿ ತಲಾ 24 ಬಾಟಲಿಯಂತೆ ಒಟ್ಟು 330ಎಂ.ಎಲ್.ನ 48 ಸೀಸೆ ಯುಬಿ ಎಕ್ಸ್‌ಪೋರ್ಟ್ ಲ್ಯಾಗರ್ ಬಿಯರ್ ಎಂಬ ಲೇಬಲ್ ಇರುವ ಬಿಯರ್ ಬಾಟಲಿಗಳು ಹಾಗೂ ಉಳಿದ ಇನ್ನೊಂದು ರಟ್ಟಿನ ಪೆಟ್ಟಿಗೆಯಲ್ಲಿ 180ಮಿಲಿಯ 35 ಬಾಟಲಿಯ ಓಲ್ಡ್ ಮಂಕ್ ರಮ್ ಎಂದು ನಮೂದಿಸಿದ ಲೇಬಲ್ ಇದ್ದು ಒಟ್ಟು 15.840 ಬಲ್ಕ್ ಲೀ.ಬಿಯರ್ ಹಾಗೂ 6.300 ಬಲ್ಕ್ ಲೀ. ಸ್ವದೇಶಿ ಮದ್ಯವಿರುವುದು ಕಂಡುಬಂದಿರುತ್ತದೆ. ನಂತರ ವಾಹನದ ಸವಾರನ ಹೆಸರು, ವಿಳಾಸವನ್ನು ವಿಚಾರಿಸಲಾಗಿ ಕೆ.ಜಿ.ಕೃಷ್ಣಕಾಂತ್ ಬಿನ್ ಗೋವಿಂದ ಕೆ.ಕೆ., ಶಾಂತಳ್ಳಿ ಗ್ರಾಮ, ಸೋಮವಾರಪೇಟೆ ತಾಲ್ಲೂಕು ಎಂದು ತಿಳಿಸಿರುತ್ತಾರೆ. ನಂತರ ಸದರಿ ವಾಹನಕ್ಕೆ ಸಂಬಂಧಿಸಿದ ಯಾವುದೇ ದಾಖಲಾತಿಗಳು ಹಾಗೂ ಸದರಿ ಮದ್ಯ ಸಾಗಾಣಿಕೆಗೆ ಸಂಬಂಧಿಸಿದ ಯಾವುದೇ ದಾಖಲಾತಿ ಮತ್ತು ರಹದಾರಿ ಪತ್ರಗಳು ಲಭ್ಯವಾಗಿರುವುದಿಲ್ಲ. ನಂತರ ಸದರಿ ವಾಹನ, ಬಿಯರ್ ಹಾಗೂ ಸ್ವದೇಶಿ ಮದ್ಯವನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಈ ರೀತಿಯಾಗಿ ಅಕ್ರಮ ಬಿಯರ್ ಮತ್ತು ಸ್ವದೇಶಿ ಮದ್ಯ ಸಾಗಾಣಿಕೆ ಮಾಡುತ್ತಿದ್ದುದು ಅಬಕಾರಿ ಕಾನೂನಿಗೆ ವಿರೋಧವಾಗಿರುವುದರಿಂದ ಆರೋಪಿಯನ್ನು ದಸ್ತಗಿರಿ ಮಾಡಿ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 11, 13, 14, 32, 38(ಎ)ರಂತೆ ಮೊಕದ್ದಮೆ ನಂ:17/06–07, ದಿ:30–1–07ರಂದು ಮೊಕದ್ದಮೆಯನ್ನು ದಾಖಲು ಮಾಡಿಕೊಂಡು ಮುಂದಿನ ಕ್ರಮದ ಬಗ್ಗೆ ವರದಿಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಕರಣದಲ್ಲಿ ವಶಪಡಿಸಿಕೊಳ್ಳಲಾದ ಸ್ಪ್ಲೆಂಡರ್ ಬೈಕ್ ಸಂ:ಕೆಎ–12–ಹೆಚ್–4340ರ ಮಾಲೀಕರಾದ ಶ್ರೀ ಕೆ.ಜಿ.ಕೃಷ್ಣಕಾಂತ್ ಬಿನ್ ಗೋವಿಂದ ಕೆ.ಕೆ., ಶಾಂತಳ್ಳಿ ಗ್ರಾಮ, ಸೋಮವಾರಪೇಟೆ ತಾಲ್ಲೂಕು ಇವರಿಗೆ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕೆ ಕಾರಣ ಕೇಳಿ ನೋಟೀಸನ್ನು ದಿ:24–2–07ರಂದು ನಿಯಮ43(ಬಿ) ರನ್ವಯ ನೀಡಲಾಯಿತು. ಸದರಿ ಕಾರಣ ಕೇಳಿ ನೋಟೀಸಿಗೆ ಸಂಬಂಧಿಸಿದಂತೆ ವಾಹನದ ಮಾಲೀಕರ ಪರವಾಗಿ ವಕೀಲರು ದಿ:27–2–07ರಂದು ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿ ತಾನು ಸದರಿ ಬೈಕನ್ನು ನನ್ನ ಸ್ವಂತ ಉಪಯೋಗಕ್ಕಾಗಿ ಓಡಿಸುತ್ತಿದ್ದು, ಪ್ರಾಧಿಕಾರ ವಿಧಿಸುವ ಷರತ್ತುಗಳಿಗೆ ಬದ್ಧರಾಗಿ ಮತ್ತು ಪ್ರಾಧಿಕಾರ ವಿಧಿಸುವ ಬೆಲೆಗೆ ತಕ್ಕ ಬ್ಯಾಂಕ್ ಗ್ಯಾರಂಟಿ,

ಜಮಾಬಂದಿಯನ್ನು ಭದ್ರತೆಯಾಗಿ ನೀಡುವುದಾಗಿ ಮತ್ತು ವಾಹನವನ್ನು ಮಧ್ಯಂತರ ವಶಕ್ಕೆ ನೀಡಬೇಕಾಗಿ ಕೋರಿಕೊಂಡಿರುತ್ತಾರೆ ಮತ್ತು ಈ ಜಿಲ್ಲೆಯ ಹವಾಮಾನದ ವೈಪರೀತ್ಯದ ಹಿನ್ನಲೆಯಲ್ಲಿ ವಾಹನವು ಸಂಪೂರ್ಣವಾಗಿ ಕೆಟ್ಟು ಉಪಯೋಗಕ್ಕೆ ಬಾರದಂತಾಗುತ್ತದೆ ಎಂದೂ ಮತ್ತು ಚಲಿಸಲು ಅಸಮರ್ಥವಾಗುತ್ತದೆ ಎಂದು, ಆದುದರಿಂದ ಮೊಕದ್ದಮೆಯ ಅಂತಿಮ ಆದೇಶವನ್ನು ಕಾಯ್ದಿರಿಸಿ ವಾಹನವನ್ನು ಮಧ್ಯಂತರಿಕವಾಗಿ ಬಿಡುಗಡೆಗೊಳಿಸಬೇಕೆಂದು ಪ್ರಾರ್ಥಿಸಿದ್ದಾರೆ.

ಈ ಮೊಕದ್ದಮೆಗೆ ಸಂಬಂಧಿಸಿದಂತೆ ತನಿಖಾಧಿಕಾರಿಗಳು ದಿ:5–5–07ರಂದು ವರದಿ ಸಲ್ಲಿಸಿ ವಾಹನವನ್ನು ಕಛೇರಿಯ ಆವರಣದಲ್ಲಿ ನಿಲ್ಲಿಸಲು ಸ್ಥಳಾವಕಾಶ ಇಲ್ಲವೆಂದು ಮಳೆ, ಗಾಳಿ, ಬಿಸಿಲಿಗೆ ವಾಹನ ಹಾಳಾಗಿ ಇಲಾಖೆಗೆ ಆರ್ಥಿಕ ನಷ್ಟವುಂಟಾಗುತ್ತದೆಂದೂ, ಬ್ಯಾಂಕ್ ಗ್ಯಾರೆಂಟಿ ಹಾಗೂ ಭದ್ರತೆಯನ್ನು ಪಡೆದು ವಾಹನವನ್ನು ಬಿಡುಗಡೆಗೊಳಿಸಬಹುದೆಂದು ತಿಳಿಸಿದ್ದಾರೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಸಹಾಯಕ ಅಭಿಯೋಗ ನಿರ್ದೇಶಕರು, ದಿ:18–5–07ರಂದು ಆಕ್ಷೇಪಣೆಗಳನ್ನು ಸಲ್ಲಿಸಿ ವಾಹನ ಬಿಡುಗಡೆಗೊಳಿಸುವ ಕೋರಿಕೆಯನ್ನು ವಜಾಗೊಳಿಸಲು ಪ್ರಾರ್ಥಿಸಿದ್ದಾರೆ.

ವಾಹನದ ಮಾಲೀಕರ ಪರ ವಕೀಲರು ನಡೆಸಿದ ವಾದಗಳನ್ನು, ಸಹಾಯಕ ಅಭಿಯೋಜಕ ನಿರ್ದೇಶಕರ ವಾದಗಳನ್ನು ಹಾಗೂ ತನಿಖಾಧಿಕಾರಿಗಳ ವರದಿಯಲ್ಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಸದರಿ ಪ್ರಕರಣವು ಅಂತಿಮ ವಿಲೇ ಆಗುವವರೆಗೂ ಸದರಿ ವಾಹನವನ್ನು ಬಿಡುಗಡೆಗೊಳಿಸದೇ ಇದ್ದ ಪಕ್ಷದಲ್ಲಿ ಈ ಜಿಲ್ಲೆಯ ವಿಶೇಷ ಹವಾಮಾನದ ವೈಪರೀತ್ಯದ ಹಿನ್ನಲೆಯಲ್ಲಿ ವಾಹನಕ್ಕೆ ಚಾಲನೆ ಸ್ಥಿತಿ ಇಲ್ಲದೆ ನಿಂತಲ್ಲೇ ನಿಂತು ಅದರ ಬಿಡಿಭಾಗಗಳು ಹಾಳಾಗಿ ವಾಹನವು ಅದರ ಬೆಲೆಯನ್ನು ಕಳೆದುಕೊಳ್ಳುವ ಸಾಧ್ಯತೆ ಇದ್ದು, ಇದರಿಂದ ಸರ್ಕಾರಕ್ಕೆ ಆಗುವ ನಷ್ಟವನ್ನು ಪರಿಗಣನೆಗೆ ತೆಗೆದುಕೊಂಡು ವಾಹನವನ್ನು ಮಧ್ಯಂತರಿಕವಾಗಿ ಬಿಡುಗಡೆಗೊಳಿಸುವ ಸಲುವಾಗಿ ವಾಹನದ ಅಂದಿನ ಸ್ಥಿತಿಗತಿಗಳನ್ನು ಪರಿಶೀಲಿಸಿ ದಿ:22–2–07ರಲ್ಲಿ ಮಡಿಕೇರಿಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳನ್ನು ಕೋರಿ ಪತ್ರ ಬರೆಯಲಾಗಿದ್ದು, ಈ ಸಂಬಂಧ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಯ ಹಿರಿಯ ಮೋಟಾರು ವಾಹನ ನಿರೀಕ್ಷಕರು ದಿ:23–3–06ರ ಪತ್ರದಲ್ಲಿ ಬೆಲೆ ರೂ.15,000/–(ಹದಿನೈದು ಸಾವಿರ)ಗಳನ್ನು ನಿಗಧಿಪಡಿಸಿದ್ದು, ಸದರಿ ವಾಹನದ ಬೆಲೆಯನ್ನು ರೂ.17,500/–(ಹದಿನೇಳು ಸಾವಿರದ ಐನೂರು)ಗಳಿಗೆ ಹೆಚ್ಚಿಸಿ ಸದರಿ ಹಣಕ್ಕೆ ಸಮನಾದ ಭದ್ರತೆಯನ್ನು ಬ್ಯಾಂಕ್ ಗ್ಯಾರೆಂಟಿ ಮೂಲಕ ಇಲಾಖಾ ಷರತ್ತುಗಳಿಗೆ ಬದ್ಧರಾಗಿ ಸಲ್ಲಿಸಿದಲ್ಲಿ ವಾಹನವನ್ನು ಮಧ್ಯಂತರವಾಗಿ ಬಿಡುಗಡೆಗೊಳಿಸುವುದಾಗಿ ಸೂಚಿಸಿ ವಾಹನದ ಮಾಲೀಕರಿಗೆ ಆದೇಶ ಸಂ:ಇಎಕ್ಸ್ಇ:3:ಡಿಟಿಸಿಆರ್ಎಂ:102:06–07, ದಿ:18–5–07ರಂದು ಪತ್ರ ನೀಡಲಾಗಿರುತ್ತದೆ. ಈ ಹಿನ್ನಲೆಯಲ್ಲಿ ವಾಹನದ ಮಾಲೀಕರಾದ ಶ್ರೀ ಕೆ.ಜಿ.ಕೃಷ್ಣಕಾಂತ್ ಬಿನ್ ಕೆ.ಕೆ.ಗೋವಿಂದ, ಶಾಂತಳ್ಳಿ ಗ್ರಾಮ, ಸೋಮವಾರಪೇಟೆ ತಾಲ್ಲೂಕು ಇವರು ಇಲಾಖೆ ವಿಧಿಸುವ ಎಲ್ಲಾ ಷರತ್ತುಗಳಿಗೆ ತಾನು ಬದ್ಧನಾಗಿರುವುದಾಗಿ ಮತ್ತು ವಿಧಿಸುವ ಮೊಬಲಗಿಗೆ ಸಮನಾದ ಬ್ಯಾಂಕ್ ಗ್ಯಾರೆಂಟಿ ನೀಡಲು ಒಪ್ಪಿಕೊಂಡು, ಕಾರ್ಪೊರೇಷನ್ ಬ್ಯಾಂಕ್, ಶಾಂತಳ್ಳಿ ಶಾಖೆ, ಸೋಮವಾರಪೇಟೆ ತಾಲ್ಲೂಕು, ಇವರಿಂದ ಬ್ಯಾಂಕ್ ಗ್ಯಾರೆಂಟಿ ಸಂ:1/07, ದಿ:24–5–07 ರಂದು ಮತ್ತು ಇಬ್ಬರು ಶ್ಯೂರಿಟಿದಾರರ ಮುಚ್ಚಳಿಕೆ ಪತ್ರವನ್ನು ಪಡೆದು ದಿ:28–5–07ರಂದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಸರ್ಕಾರದ ಆದಾಯದ ದೃಷ್ಟಿಯಿಂದ ಮತ್ತು ಕೊಡಗಿನ ಹವಾಮಾನದ ವೈಪರೀತ್ಯದಿಂದ ವಾಹನದ ಬಿಡಿಭಾಗಗಳು ಹಾಳಾಗಿ ಸರ್ಕಾರಕ್ಕೆ ಬರುವ ಆದಾಯವು ಕೈತಪ್ಪುವ ಸಾಧ್ಯತೆ ಇರುವುದರಿಂದ ಸದರಿಯವರು ನೀಡಿರುವ ರೂ.17,500/–(ಹದಿನೇಳು ಸಾವಿದ ಐನೂರು)ಗಳ ಬ್ಯಾಂಕ್ ಗ್ಯಾರೆಂಟಿಯನ್ನು ಸ್ವೀಕರಿಸಿ ಆದೇಶ ಸಂ:ಇಎಕ್ಸ್ಇ:3:ಡಿಟಿಸಿಆರ್ಎಂ:102: 06–07, ದಿ:28–5–07ರಂದು ಷರತ್ತುಬದ್ಧವಾಗಿ ವಾಹನವನ್ನು ಮಾಲೀಕರ ವಶಕ್ಕೆ ಮಧ್ಯಂತರವಾಗಿ ಬಿಡುಗಡೆ ಮಾಡಲಾಗಿರುತ್ತದೆ.

ತದನಂತರ ಬ್ಯಾಂಕ್ ಗ್ಯಾರೆಂಟಿ ಹಣ ರೂ.17,500/–(ಹದಿನೇಳು ಸಾವಿದ ಐನೂರು)ಗಳನ್ನು ಇನ್ವೋಕ್ ಮಾಡಿಕೊಂಡು ಆರ್.ಡಿ.ಖಾತೆಯಲ್ಲಿ ದಿ:20–8–09ರಂದು ಜಮಾ ಮಾಡಲಾಗಿರುತ್ತದೆ. ದಿ:22–6–10, 6–8–10, 12–7–11, 26–8–11, 19–9–11, 21–11–11ಗಳಂದು ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸಮನ್ಸ್ ನೀಡಲಾಗಿದ್ದು, ದಿ:22–6–10ರಂದು ವಾಹನದ ಮಾಲೀಕರು ವಾಹನದೊಂದಿಗೆ ಹಾಜರಾಗಿರುತ್ತಾರೆ. ತದನಂತರದ ದಿನಾಂಕಗಳಲ್ಲಿ ವಾಹನದ ಮಾಲೀಕರು ಹಾಜರಿದ್ದು, ವಾಹನವನ್ನು ಹಾಜರುಪಡಿಸಿರುವುದಿಲ್ಲ ಮತ್ತು ಅವರ ಪರ ವಕೀಲರು ಹಾಜರಾಗಿರುವುದಿಲ್ಲ. ಸದರಿ ದಿನಾಂಕಗಳಲ್ಲಿ ವಾಹನದ ಮಾಲೀಕರಿಗೆ ದಿ:21–11–11ರಂದು ಖಡ್ಡಾಯವಾಗಿ ವಾಹನವನ್ನು ಹಾಜರುಪಡಿಸಬೇಕಾಗಿ ಸೂಚಿಸಲಾಗಿತ್ತು. ಆದಾಗ್ಯೂ ವಾಹನದ ಮಾಲೀಕರು ದಿ:21–11–11 ರಂದು ಹಾಜರಿದ್ದು, ವಾಹನವನ್ನು ಹಾಜರುಪಡಿಸಿರುವುದಿಲ್ಲ ಮತ್ತು ಅವರ ಪರ ವಕೀಲರು ಹಾಜರಿರುವುದಿಲ್ಲ. ವಾಹನದ ಮಾಲೀಕರಿಗೆ ಅಬಕಾರಿ ಕಾನೂನಿನ ಅರಿವಿದ್ದು, ತನ್ನ ಸ್ವಂತ ಲಾಭಕ್ಕಾಗಿ ಸರ್ಕಾರಕ್ಕೆ ವಂಚನೆ ಮಾಡುವ ನೆಪದಲ್ಲಿ ಈ ಕೃತ್ಯವೆಸಗಿರುವುದು ಕಂಡುಬಂದಿರುತ್ತದೆ ಹಾಗೂ ಈ ಪ್ರಾಧಿಕಾರದ ದಿ:28–5–07ರ ಆದೇಶಗಳಲ್ಲಿನ ಷರತ್ತುಗಳನ್ನು ಉಲ್ಲಂಘನೆ ಮಾಡಿದ್ದು ಮತ್ತು ಈ ಪ್ರಕರಣವನ್ನು ವಿಲೇಗೊಳಿಸಲು ಅಸಹಕಾರ ನೀಡಿರುತ್ತಾರೆ.

ಮೇಲಿನ ದಿನಾಂಕಗಳಲ್ಲಿ ವಾಹನದ ಮಾಲೀಕರಿಗೆ ವಾಹನವನ್ನು ಖುದ್ದಾಗಿ ಹಾಜರುಪಡಿಸಬೇಕೆಂದು ಸೂಚಿಸಿದ್ದರೂ ಕೂಡ ಆದೇಶವನ್ನು ಉಲ್ಲಂಘನೆ ಮಾಡಿರುವುದಲ್ಲದೆ ದಿ:28–5–07ರ ಮಧ್ಯಂತರ ಆದೇಶದ ಷರತ್ತುಗಳನ್ನು ಉಲ್ಲಂಘನೆ ಮಾಡಿರುವುದು ಪ್ರಾಧಿಕಾರದಲ್ಲಿ ಕಂಡುಬಂದಿದ್ದು ವಾಹನದ ಮಾಲೀಕರಿಗೆ ವಾಹನವನ್ನು ಹಾಜರುಪಡಿಸಲು ಸಾಕಷ್ಟು ಅವಕಾಶವನ್ನು ನೀಡಿದ್ದರೂ ವಿಫಲರಾಗಿದ್ದು, ಪ್ರಕರಣವನ್ನು ವಿಲೇಗೊಳಿಸಲು ವಾಹನದ ಮಾಲೀಕರು ಹಾಗೂ ಅವರ ಪರ ವಕೀಲರು ಅಸಹಕಾರ ನೀಡಿರುವುದರಿಂದ ಸಹಾಯಕ ಅಭಿಯೋಜಕ ನಿರ್ದೇಶಕರ ವಾದಗಳನ್ನು ಆಲಿಸಿ ವಾಹನ ಸ್ಪ್ಲೆಂಡರ್ ಬೈಕ್ ಸಂ:ಕೆಎ–12–ಹೆಚ್–4340ರನ್ನು ಮತ್ತು ಈಗಾಗಲೇ ಆರ್.ಡಿ.ಖಾತೆಯಲ್ಲಿಡಲಾಗಿರುವ ಬ್ಯಾಂಕ್ ಗ್ಯಾರೆಂಟಿ ಮೊತ್ತ ರೂ.17,500/–(ಹದಿನೇಳು ಸಾವಿರದ ಐನೂರು)ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ.

**ಆದೇಶ ಸಂ:ಇಎಕ್ಸ್ಇ:ಡಿಟಿಸಿಆರ್ಎಂ:102:2006–07, ದಿ:25–11–2011.**

ಹೆಚ್.ಎನ್.ಆನಂದ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು 43ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, 43ಬಿ ರಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿ, ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಸೋಮವಾರಪೇಟೆ ರವರ ಪ್ರ.ವ.ವ.ಸಂ:17/06–07, ದಿ:30–1–07ರಲ್ಲಿ ವಶಪಡಿಸಿಕೊಂಡ ವಾಹನ ಸ್ಪ್ಲೆಂಡರ್ ಬೈಕ್ ಸಂ:ಕೆಎ–12–

ಹೆಚ್–4340 ರನ್ನು ನ್ಯಾಯಾಲಯಕ್ಕೆ ಹಾಜರುಪಡಿಸದೇ ಮಧ್ಯಂತರ ಆದೇಶದ ಷರತ್ತುಗಳನ್ನು ಉಲ್ಲಂಘನೆ ಮಾಡಿರುವುದರಿಂದ ವಾಹನವನ್ನು ಮತ್ತು ಈಗಾಗಲೇ ಆರ್.ಡಿ.ಖಾತೆಯಲ್ಲಿಡಲಾಗಿರುವ ಬ್ಯಾಂಕ್ ಗ್ಯಾರೆಂಟಿ ಮೊತ್ತ ರೂ.17,500/–(ಹದಿನೇಳು ಸಾವಿರದ ಐನೂರು)ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿದೆ.

ಈ ಆದೇಶವನ್ನು ದಿ:25–11–11ರಂದು ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

**ಪಿ.ಆರ್. ನಂ. 1297**

## ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ.

**ಸಂ:ಇಎಕ್ಸ್ಇ:3:ಡಿಟಿಸಿಆರ್ಎಂ:43:2008–09, ದಿ:21–11–2011**

ಉಪಸ್ಥಿತರು : **ಹೆಚ್.ಎನ್.ಆನಂದ್,**
ಅಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಉಪ ಆಯುಕ್ತರು,
ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, | | ಎ.ಪಿ.ಗಿರೀಶ್ ಬಿನ್ ಎ.ಸಿ.ಪೊನ್ನಪ್ಪ, |
| ಕುಶಾಲನಗರ ಪೊಲೀಸ್ ಠಾಣೆ, | | ಆಟೋ ಡ್ರೈವರ್, ಚಿಕ್ಕಬೆಟ್ಟಗೇರಿ ಗ್ರಾಮ, |

**ಪ್ರಕರಣದ ಮುಖ್ಯಾಂಶಗಳು:–**

ದಿ:15–12–2008ರಂದು ಆರಕ್ಷಕ ಉಪ ನಿರೀಕ್ಷಕರು, ಕುಶಾಲನಗರ ಠಾಣೆ ಇವರು ಕರ್ತವ್ಯದ ಮೇರೆಗೆ ಕುಶಾಲನಗರದಿಂದ ಸಿದ್ಧಾಪುರಕ್ಕೆ ಭೇಟಿ ನೀಡಿ ಸಿದ್ಧಾಪುರದಿಂದ ಕುಶಾಲನಗರಕ್ಕೆ ಬರುತ್ತಿರುವಾಗ ದೊರೆತ ದೂರವಾಣಿ ಮಾಹಿತಿಯಂತೆ ವಾಹನ ಸಂ; ಕೆಎ–12–8625ರ ಆಟೋರಿಕ್ಷಾದಲ್ಲಿ ಗುಡ್ಡೆಹೊಸೂರಿನಿಂದ ಚಿಕ್ಕಬೆಟ್ಟಗೇರಿ ಕಡೆಗೆ ಅಕ್ರಮವಾಗಿ ಮದ್ಯವನ್ನು ಸಾಗಾಟ ಮಾಡುತ್ತಿರುವುದಾಗಿ ತಿಳಿಸಿದ ಮಾಹಿತಿ ಮೇರೆಗೆ ದೊಡ್ಡಬೆಟ್ಟಗೇರಿ ಗ್ರಾಮದ ಮುಖ್ಯರಸ್ತೆಯ ಬದಿಯಲ್ಲಿ ಇಲಾಖಾ ಜೀಪನ್ನು ನಿಲ್ಲಿಸಿಕೊಂಡಿರುವಾಗ ಸಮಯ 4.30ಗಂಟೆಗೆ ಗುಡ್ಡೆಹೊಸೂರು ಕಡೆಯಿಂದ ಸಂ;ಕೆಎ–12–8625ರ ಆಟೋ ರಿಕ್ಷಾ ಬರುತ್ತಿದ್ದು, ಸದರಿ ಆಟೋ ರಿಕ್ಷಾವನ್ನು ತಡೆದು ನಿಲ್ಲಿಸಿ ಪರಿಶೀಲಿಸಲಾಗಿ ಚಾಲಕ ಕುಳಿತ್ತಿದ್ದ ಸೀಟಿನ ಕೆಳಭಾಗದಲ್ಲಿ ಒಂದು ಮದ್ಯದ ಕಾರ್ಡ್‌ಬೋರ್ಡ್ ಬಾಕ್ಸ್ ಇದ್ದು, ಅವುಗಳ ಬಗ್ಗೆ ಚಾಲಕನನ್ನು ಕೇಳಲಾಗಿ ರಂಗಸಮುದ್ರದ ಮಾವಿನಹಳ್ಳದ ವಾಸಿ ಪ್ರಕಾಶ್ ಇವರಿಗೆ ಗುಡ್ಡೆಹೊಸೂರು ಗ್ರಾಮದ ಲಕ್ಷ್ಮೀ ಬಾರ್ ಮಾಲೀಕರಿಂದ ಖರೀದಿ ಮಾಡಿಕೊಂಡು ಹೋಗುತ್ತಿರುವುದಾಗಿ ತಿಳಿಸಿದ ಮೇರೆಗೆ ಪಂಚರನ್ನು ಸ್ಥಳಕ್ಕೆ ಬರಮಾಡಿಕೊಂಡು ಕೃತ್ಯದ ಬಗ್ಗೆ ಕೂಲಂಕುಶವಾಗಿ ತಿಳಿಸಿದ್ದು, ಪಂಚರಾಗುವಂತೆ ಕೋರಿಕೊಂಡ ಮೇರೆಗೆ ಒಪ್ಪಿಕೊಂಡು ಆಟೋ ಚಾಲಕನ ಹೆಸರು ವಿಳಾಸ ಕೇಳಲಾಗಿ ಎ.ಪಿ.ಗಿರೀಶ್ ಬಿನ್ ಎ.ಸಿ.ಪೊನ್ನಪ್ಪ, ವಾಸ ಚಿಕ್ಕಬೆಟ್ಟಗೇರಿ ಗ್ರಾಮ, ಸೋಮವಾರಪೇಟೆ ತಾಲ್ಲೂಕು ಎಂದು ತಿಳಿಸಿರುತ್ತಾರೆ. ಆಟೋದಲ್ಲಿದ್ದ ಎರಡು ಮದ್ಯದ ಕಾರ್ಡ್‌ಬೋರ್ಡ್ ಬಾಕ್ಸ್ ನಲ್ಲಿ ಪಂಚರ ಸಮಕ್ಷಮ ಅಜಮಾಯಿಸಿ ನೋಡಲಾಗಿ ಸದರಿ ಬಾಕ್ಸ್‌ಗಳ ಮೇಲೆ 7 Years Old Blended Old Monk Very old Vatted XXX Rum, Shashi Distillaries, Private Ltd., 48x180ml ಇತ್ಯಾದಿಯಾಗಿ ಕಾರ್ಡ್‌ಬೋರ್ಡ್ ಬಾಕ್ಸ್‌ಗಳ ಮೇಲೆ ಬರೆದಿದ್ದು, ಬಾಕ್ಸನ ಮೇಲೆ Mohan Meakin Quality Liquor ಎಂಬ ಅಕ್ಷರದ ಲೇಬಲ್‌ನಲ್ಲಿ ಸೀಲು ಮಾಡಿರುವುದಾಗಿದೆ. ಎರಡು ಬಾಕ್ಸ್ ಒಳಗಡೆ 48+48ರಂತೆ ಒಟ್ಟು 96 ಮದ್ಯ ತುಂಬಿದ ಕ್ವಾರ್ಟರ್ ಬಾಟಲಿಗಳಿದ್ದು, ಅವುಗಳನ್ನು ಅಜಮಾಯಿಸಲಾಗಿ ಕ್ವಾರ್ಟರ್ ಬಾಟಲಿನ ಮೇಲೆ ಕಪ್ಪು ಬಣ್ಣದ ಲೇಬಲ್ ಅಂಟಿಸಿದ್ದು, ಸದರಿ ಲೇಬಲ್‌ನಲ್ಲಿ 7 Years Old Blended Old Monk Very old Vatted XXX Rum, 180ml MRP Rs.38.47 ಎಂಬುದಾಗಿ ಮುದ್ರಿಸಿದ್ದು, ಮುಚ್ಚಳದ ಮೇಲ್ಭಾಗದಲ್ಲಿ ಕರ್ನಾಟಕ ಅಬಕಾರಿ ಆಯುಕ್ತರ ಸಹಿ ಇರುವ ಲೇಬಲ್ ಅಂಟಿಸಲಾಗಿರುತ್ತದೆ. ಸದರಿ ಮಾಲನ್ನು ಸ್ವಾಧೀನಕ್ಕೆ ತೆಗೆದುಕೊಂಡು ಬಾಕ್ಸ್‌ಗಳಿಂದ ಒಂದೊಂದು ಕ್ವಾರ್ಟರ್ ಮಾದರಿಯಾಗಿ ತೆಗೆದು ಮತ್ತು ಮದ್ಯ ಸಾಗಾಟ ಮಾಡುತ್ತಿದ್ದ ಆಟೋ ರಿಕ್ಷಾ ಸಂ; ಕೆಎ–12–8625ರನ್ನು ವಶಕ್ಕೆ ತೆಗೆದುಕೊಂಡು ಸರ್ಕಾರದ ಯಾವುದೇ ಪರವಾನಗಿ ಇಲ್ಲದೆ ಸಾಗಾಣಿಕೆ ಮಾಡುತ್ತಿದ್ದುದು ಅಕ್ರಮ ಮದ್ಯ ಸಾಗಾಣಿಕೆ ಎಂದು ಅಭಿಪ್ರಾಯ ಪಟ್ಟು ಆಟೋ ಚಾಲಕನ ವಿರುದ್ಧ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 13, 14, 32, 34, ಪ್ರ.ವ.ಸಂ:208/08–09, ದಿ:15–12–08 ರಂತೆ ಪ್ರಕರಣವನ್ನು ದಾಖಲಿಸಿಕೊಳ್ಳಲಾಗಿರುತ್ತದೆ. ತದನಂತರ ಮುಂದಿನ ಕ್ರಮದ ಬಗ್ಗೆ ಅಬಕಾರಿ ನಿರೀಕ್ಷಕರು, ಸೋಮವಾರಪೇಟೆ ವಲಯ ಇವರಿಗೆ ವಾಹನ ಮತ್ತು ಮದ್ಯವನ್ನು ಹಸ್ತಾಂತರಿಸಿರುತ್ತಾರೆ.

ನಂತರ ಸದರಿ ವಾಹನಕ್ಕೆ ಸಂಬಂಧಿಸಿದಂತೆ ವಾಹನದ ಅಧಿಕೃತ ಮಾಲೀಕರನ್ನು ತಿಳಿಯುವ ಸಂಬಂಧವಾಗಿ ದಿ:26-12-08ರಂದು ಪ್ರಾದೇಶಿಕ ಸಾರಿಗೆ ಇಲಾಖೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ಇವರಿಗೆ ಪತ್ರ ಬರೆದು 'ಬಿ' ಎಕ್ಸ್‌ಟ್ರಾಕ್ಟ್ ಕೋರಲಾಗಿತ್ತು. ಈ ಸಂಬಂಧ ಪ್ರಾದೇಶಿಕ ಸಾರಿಗೆ ಇಲಾಖೆ ಅಧಿಕಾರಿಗಳ ಕಛೇರಿಯಿಂದ ದಿ:1-1-09ರಂದು 'ಬಿ' ಎಕ್ಸ್‌ಟ್ರಾಕ್ಟ್‌ನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಅದರಲ್ಲಿ ನಾಗರಾಜು ಬಿನ್ ಪುಟ್ಟಮಾದಪ್ಪ, ಗುಡ್ಡೆಹೊಸೂರು, ಕುಶಾಲನಗರ, ಸೋಮವಾರಪೇಟೆ ತಾಲ್ಲೂಕು ಎಂದು ನಮೂದಿಸಿದ್ದು, ಇವರು ವಾಹನದ ಅಧಿಕೃತ ಮಾಲೀಕರೆಂದು ಕಂಡುಬಂದಿದ್ದರಿಂದ ಸದರಿಯವರಿಗೆ ದಿ:15-1-09ರಂದು ಈ ಪ್ರಾಧಿಕಾರದಿಂದ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ 43ಬಿರ ಅನ್ವಯ ಕಾರಣ ಕೇಳಿ ನೋಟೀಸನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿತ್ತು. ಅಂಚೆ ಇಲಾಖೆಯ ಮೂಲ ಸ್ವೀಕೃತಿಯು ದಿ:17-1-09ರಂದು ಈ ಪ್ರಾಧಿಕಾರಕ್ಕೆ ಬಂದಿರುತ್ತದೆ.

ಸದರಿ ನೋಟೀಸಿಗೆ ದಿ:2-2-09ರಂದು ವಾಹನದ ಮಾಲೀಕರ ಪರ ವಕೀಲರು ಅರ್ಜಿಯನ್ನು ಸಲ್ಲಿಸಿ, ಸದರಿ ವಾಹನದ ಮಾಲೀಕರು ಡ್ರೈವರನ್ನು ನೇಮಿಸಿ ಆಟೋ ರಿಕ್ಷಾವನ್ನು ಓಡಿಸುತ್ತಿದ್ದು, ಬಂದ ಪ್ರಯಾಣಿಕರು ತಂದಂತಹ ಸಾಗಾಣಿಕೆ ವಸ್ತುಗಳಲ್ಲಿ ಮದ್ಯವನ್ನು ತಂದಿದ್ದು, ಮದ್ಯವನ್ನು ಆಟೋ ರಿಕ್ಷಾದಲ್ಲಿ ಸಾಗಾಣಿಕೆ ಮಾಡಬಾರದೆಂಬ ಅರಿವು ಚಾಲಕನಿಗೆ ಇಲ್ಲದಿದ್ದ ಕಾರಣ ಮತ್ತು ಆಟೋ ರಿಕ್ಷಾದಲ್ಲಿ ಬಾಡಿಗೆಗೆ ಬರುವಂತಹ ವ್ಯಕ್ತಿಗಳು ಅಕ್ರಮ ವ್ಯವಹಾರದಲ್ಲಿ ತೊಡಗುವುದಿಲ್ಲವೆಂಬ ನಂಬಿಕೆಯಿಂದ ಬಾಡಿಗೆಗಾಗಿ ಜನರನ್ನು ಹತ್ತಿಸಿರುವನು. ವಾಹನದ ಮಾಲೀಕರಿಂದ ಸಂಬಳವನ್ನು ಪಡೆದು ರಿಕ್ಷಾ ಚಾಲಕನು ಜೀವನ ನಡೆಸುತ್ತಿರುವನು. ವಾಹನದ ಮಾಲೀಕರು ಸದರಿ ಆಟೋ ರಿಕ್ಷಾವನ್ನು ಕೊಡಗು ಚಿಕ್ಕಮಗಳೂರು ಗ್ರಾಮೀಣ ಬ್ಯಾಂಕ್, ಗುಡ್ಡೆಹೊಸೂರು ಇವರಿಂದ ರೂ.60,000/-(ಅರವತ್ತು ಸಾವಿರ) ಲೋನ್ ಪಡೆದು ಖರೀದಿಸಿದ್ದು, ಈಗಾಗಲೇ ರೂ.15,000/-(ಹದಿನೈದು ಸಾವಿರ)ಗಳನ್ನು ಪಾವತಿಸಿದ್ದು, ಇನ್ನುಳಿದಂತೆ ರೂ.45,000/-(ನಲವತ್ತೈದು ಸಾವಿರ)ಗಳನ್ನು ಪಾವತಿಸಲು ಬಾಕಿ ಇರುತ್ತದೆ. ಆಟೋ ರಿಕ್ಷಾ ಓಡಿಸಿ ಬಂದ ಹಣದಿಂದ ಬ್ಯಾಂಕ್ ಸಾಲವನ್ನು ತೀರಿಸಬೇಕಾಗಿದ್ದು, ವಾಹನ ಜಪ್ತುಪಡಿಸಿಕೊಂಡಂದಿನಿಂದ ಇಂದಿನವರೆಗೆ ಬ್ಯಾಂಕ್ ಸಾಲ ತುಂಬುವುದು ತುಂಬಾ ಕಷ್ಟಕರವಾಗಿರುತ್ತದೆ. ಆದುದರಿಂದ ಪ್ರಾಧೀಕೃತ ಅಧಿಕಾರಿಗಳು ವಾಹನವನ್ನು ಮಧ್ಯಂತರಿಕವಾಗಿ ಬಿಡುಗಡೆಗೊಳಿಸಿ ಕೊಡಬೇಕಾಗಿ ಪ್ರಾರ್ಥಿಸಿದ್ದರು.

ಈ ಹಿನ್ನಲೆಯಲ್ಲಿ ಆಟೋ ರಿಕ್ಷಾ ಸಂ; ಕೆಎ-12-8625ಕ್ಕೆ ಇಂದಿನ ಮಾರ್ಕೆಟ್ ಮೌಲ್ಯವನ್ನು ನಿಗಧಿಪಡಿಸಲು ದಿ:9-2-09ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ಇವರಿಗೆ ಇದೇ ಸಮ ಸಂಖ್ಯೆ ಪತ್ರದಲ್ಲಿ ಕೋರಲಾಗಿತ್ತು. ಅದರಂತೆ ಕೊಡಗು ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಯ ಹಿರಿಯ ಮೋಟಾರು ವಾಹನ ನಿರೀಕ್ಷಕರು ವಾಹನವನ್ನು ಪರಿಶೀಲಿಸಿ ಅದರ ಸ್ಥಿತಿಗತಿಗಳನ್ನು ಗಮನಿಸಿ ರೂ.20,000/-(ಇಪ್ಪತ್ತೈದು ಸಾವಿರ) ಬೆಲೆಯನ್ನು ನಿಗಧಿಪಡಿಸಿ ದಿ:5-3-09ರಂದು ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ. ಸದರಿ ವಾಹನದ ಮೌಲ್ಯವನ್ನು ರೂ.22,000/-(ಇಪ್ಪತ್ತೆರಡು ಸಾವಿರ)ಗಳಿಗೆ ಹೆಚ್ಚಿಸಿ ಸದರಿ ಹಣಕ್ಕೆ ಸಮನಾದ ಭದ್ರತೆಯನ್ನು ಬ್ಯಾಂಕ್ ಗ್ಯಾರೆಂಟಿ ಮೂಲಕ ಇಲಾಖಾ ಷರತ್ತುಗಳಿಗೆ ಬದ್ಧರಾಗಿ ಸಲ್ಲಿಸಿದಲ್ಲಿ ವಾಹನವನ್ನು ಮಧ್ಯಂತರವಾಗಿ ಬಿಡುಗಡೆಗೊಳಿಸುವುದಾಗಿ ಸೂಚಿಸಿ ವಾಹನದ ಮಾಲೀಕರಿಗೆ ಆದೇಶ ಸಂ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:43:08-09, ದಿ:30-3-09ರಂದು ಪತ್ರ ನೀಡಲಾಗಿರುತ್ತದೆ. ಈ ಹಿನ್ನಲೆಯಲ್ಲಿ ವಾಹನದ ಮಾಲೀಕರಾದ ನಾಗರಾಜು ಬಿನ್ ಪುಟ್ಟಮಾದಪ್ಪ, ಗುಡ್ಡೆಹೊಸೂರು, ಕುಶಾಲನಗರ, ಸೋಮವಾರಪೇಟೆ ತಾಲ್ಲೂಕು ಇವರು ಇಲಾಖೆ ವಿಧಿಸುವ ಎಲ್ಲಾ ಷರತ್ತುಗಳಿಗೆ ತಾನು ಬದ್ಧನಾಗಿರುವುದಾಗಿ ಮತ್ತು ವಿಧಿಸುವ ಮೊಬಲಗಿಗೆ ಸಮನಾದ ಬ್ಯಾಂಕ್ ಗ್ಯಾರೆಂಟಿ ನೀಡಲು ಒಪ್ಪಿಕೊಂಡು ದಿ:22-5-09 ರಂದು ರೂ.50/-ರ ಮೌಲ್ಯದ ಛಾಪಾ ಕಾಗದದಲ್ಲಿ ಸಲ್ಲಿಸಿರುತ್ತಾರೆ ಮತ್ತು ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಕುಶಾಲನಗರ ಶಾಖೆ, ಕುಶಾಲನಗರ ಇವರಿಂದ ದಿ:11-6-2014ರ ವರೆಗೆ ಅವಧಿ ಇರುವ ಬ್ಯಾಂಕ್ ಗ್ಯಾರೆಂಟಿ ಸಂ:2/09-10, ದಿ:12-6-09 ರಂದು ಪಡೆದ ಬ್ಯಾಂಕ್ ಗ್ಯಾರೆಂಟಿಯನ್ನು ದಿ:26-6-09ರಂದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಸರ್ಕಾರದ ಆದಾಯದ ದೃಷ್ಟಿಯಿಂದ ಮತ್ತು ಕೊಡಗಿನ ಹವಾಮಾನದ ವೈಪರೀತ್ಯದಿಂದ ವಾಹನದ ಬಿಡಿಭಾಗಗಳು ಹಾಳಾಗಿ ಸರ್ಕಾರಕ್ಕೆ ಬರುವ ಆದಾಯವು ಕೈತಪ್ಪುವ ಸಾಧ್ಯತೆ ಇರುವುದರಿಂದ ಸದರಿಯವರು ನೀಡಿರುವ ರೂ.22,000/-(ಇಪ್ಪತ್ತೆರಡು ಸಾವಿರ)ಗಳ ಬ್ಯಾಂಕ್ ಗ್ಯಾರೆಂಟಿಯನ್ನು ಸ್ವೀಕರಿಸಿ ಆದೇಶ ಸಂ:ಇಎಕ್ಸ್‌ಇ:3:ಡಿಟಿಸಿಆರ್‌ಎಂ:43:08-09, ದಿ:29-6-09ರಂದು ಷರತ್ತುಬದ್ಧವಾಗಿ ವಾಹನವನ್ನು ಮಾಲೀಕರ ವಶಕ್ಕೆ ಬಿಡುಗಡೆ ಮಾಡಲಾಗಿರುತ್ತದೆ.

ತದನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ದಿ:12-7-11, 26-8-11, 19-9-11, 21-11-11ಗಳಂದು ವಿಚಾರಣೆಗಾಗಿ ಸಮನ್ಸ್ ನೀಡಲಾಗಿದ್ದು, ದಿ:12-7-11ರಂದು ವಾಹನದ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಹಾಜರಾಗಿರುವುದಿಲ್ಲ ಮತ್ತು 26-8-11, 19-9-11ಗಳಂದು ವಾಹನದ ಮಾಲೀಕರು ಹಾಜರಿದ್ದು, ವಾಹನವನ್ನು ಹಾಜರುಪಡಿಸಿರುವುದಿಲ್ಲ. ಸದರಿ ದಿನಾಂಕಗಳಲ್ಲಿ ವಾಹನದ ಮಾಲೀಕರಿಗೆ ಸೂಚಿಸಿ ದಿ:21-11-11ರಂದು ಖಡ್ಡಾಯವಾಗಿ ವಾಹನವನ್ನು ಹಾಜರುಪಡಿಸಬೇಕಾಗಿ ಸೂಚಿಸಲಾಗಿತ್ತು. ಆದರೆ ಸದರಿ ವಾಹನದ ಮಾಲೀಕರು ದಿ:21-11-11ರಂದು ವಾಹನದ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಹಾಜರಾಗಿರುವುದಿಲ್ಲ ಹಾಗೂ ವಾಹನವನ್ನು ಹಾಜರುಪಡಿಸಿರುವುದಿಲ್ಲ. ವಾಹನದ ಮಾಲೀಕರಿಗೆ ಅಬಕಾರಿ ಕಾನೂನಿನ ಅರಿವಿದ್ದು, ತನ್ನ ಸ್ವಂತ ಲಾಭಕ್ಕಾಗಿ ಸರ್ಕಾರಕ್ಕೆ ವಂಚನೆ ಮಾಡುವ ನೆಪದಲ್ಲಿ ಈ ಕೃತ್ಯವೆಸಗಿರುವುದು ಕಂಡುಬಂದಿರುತ್ತದೆ ಹಾಗೂ ಈ ಪ್ರಾಧಿಕಾರದ ದಿ:29-6-09ರ ಆದೇಶಗಳಲ್ಲಿನ ಷರತ್ತುಗಳನ್ನು ಉಲ್ಲಂಘನೆ ಮಾಡಿರುತ್ತಾರೆ.

ಮೇಲಿನ ದಿನಾಂಕಗಳಲ್ಲಿ ವಾಹನದ ಮಾಲೀಕರಿಗೆ ವಾಹನವನ್ನು ಖುದ್ದಾಗಿ ಹಾಜರುಪಡಿಸಬೇಕೆಂದು ಸೂಚಿಸಿದ್ದರೂ ಕೂಡ ಆದೇಶವನ್ನು ಉಲ್ಲಂಘನೆ ಮಾಡಿರುವುದಲ್ಲದೆ ದಿ:29-06-09ರ ಮಧ್ಯಂತರ ಆದೇಶದ ಷರತ್ತುಗಳನ್ನು ಉಲ್ಲಂಘನೆ ಮಾಡಿರುವುದು ಪ್ರಾಧಿಕಾರದಲ್ಲಿ ಕಂಡುಬಂದಿದ್ದು ವಾಹನದ ಮಾಲೀಕರಿಗೆ ವಾಹನವನ್ನು ಹಾಜರುಪಡಿಸಲು ಸಾಕಷ್ಟು ಅವಕಾಶವನ್ನು ನೀಡಿದ್ದರೂ ವಿಫಲರಾಗಿದ್ದು, ಪ್ರಕರಣವನ್ನು ವಿಲೇಗೊಳಿಸಲು ಅಸಹಕಾರ ನೀಡಿರುವುದರಿಂದ ಸಹಾಯಕ ಅಭಿಯೋಜಕರ ವಾದಗಳನ್ನು ಆಲಿಸಿ ವಾಹನ ಆಟೋ ರಿಕ್ಷಾ ಸಂ;ಕೆಎ-12-8625ರನ್ನು ಮತ್ತು ಬ್ಯಾಂಕ್ ಗ್ಯಾರೆಂಟಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ತೀರ್ಮಾನಿಸಿ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ವಾಹನದ ಮಾಲೀಕರು

ಸಲ್ಲಿಸಿರುವ ಬ್ಯಾಂಕ್ ಗ್ಯಾರೆಂಟಿ ಮೊತ್ತ ರೂ.22,000/–(ಇಪ್ಪತ್ತೆರಡು ಸಾವಿರ)ಗಳ ಬ್ಯಾಂಕ್ ಗ್ಯಾರೆಂಟಿ ಸಂ:2/09–10ರನ್ನು ಇನ್‌ವೋಕ್ ಮಾಡಿ ಅದರ ಮೊತ್ತವನ್ನು ಕಂದಾಯ ಖಾತೆಯಲ್ಲಿಡಲು (ಆರ್.ಡಿ ಖಾತೆ) ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ.

**ಆದೇಶ ಸಂ:ಇಎಕ್ಸ್‌ಇ:ಡಿಟಿಸಿಆರ್‌ಎಂ:43:2008–09, ದಿ:21–11–2011.**

ಹೆಚ್.ಎನ್.ಆನಂದ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು 43ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, 43ಬಿ ರಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿ, ಆರಕ್ಷಕ ಉಪ ನಿರೀಕ್ಷಕರು, ಕುಶಾಲನಗರ ಪೊಲೀಸ್ ಠಾಣೆ, ಕುಶಾಲನಗರ ರವರ ಪ್ರ.ವ.ವ.ಸಂ:208/08, ದಿ:15–12–08ರಲ್ಲಿ ವಶಪಡಿಸಿಕೊಂಡ ವಾಹನ ಆಟೋ ರಿಕ್ಷಾ ಸಂ; ಕೆಎ–12–8625ರನ್ನು ನ್ಯಾಯಾಲಯಕ್ಕೆ ಹಾಜರುಪಡಿಸದೇ ಮಧ್ಯಂತರ ಆದೇಶದ ಷರತ್ತುಗಳನ್ನು ಉಲ್ಲಂಘನೆ ಮಾಡಿರುವುದರಿಂದ ವಾಹನವನ್ನು ಮತ್ತು ಬ್ಯಾಂಕ್ ಗ್ಯಾರೆಂಟಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿದೆ ಮತ್ತು ಬ್ಯಾಂಕ್ ಗ್ಯಾರೆಂಟಿ ರೂ.22,000/–(ಇಪ್ಪತ್ತೆರಡು ಸಾವಿರ)ಗಳ ಬ್ಯಾಂಕ್ ಗ್ಯಾರೆಂಟಿ ಸಂ:2/09–10ರನ್ನು ಇನ್‌ವೋಕ್ ಮಾಡಿ ಅದರ ಮೊತ್ತವನ್ನು ಕಂದಾಯ ಖಾತೆಯಲ್ಲಿಡಲು(ಆರ್.ಡಿ ಖಾತೆ) ಆದೇಶಿಸಲಾಗಿದೆ.

ಈ ಆದೇಶವನ್ನು ದಿ:21–11–11ರಂದು ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

**ಪಿ.ಆರ್. ನಂ. 1296**

## OFFICE OF THE DEPUTY COMMISSIONER, DAVANAGERE DISTRICT, DAVANGERE

### NOTIFICATION

**No. SEC.CR/02/2011-12, Dated : 04-10-2011**

In exercise of the powers delegated by Government in their Notification No. RDP 29 SJY 2011(A1) dated: 22.9.2011, the undersigned hereby appoints the Officers noted in col.3 with Designation noted in col.4 for the jurisdiction noted in col.5 of the table given below for the purpose of 2011 Socio Economic & Caste Census.

| Sl. No. | Administrative Unit | Designation | Appointed as | Jurisdiction |
|---|---|---|---|---|
| 1 | 2 | 3 | 4 | 5 |
| 5 | Harihar City Municipal council | Commissioner, City Municipal council | City SECC 2011 Officer | Entire Harihar City Municipal council area |
| 6 | Davangere Taluk | Tahasildar, Davangere | SECC 2011 Charge Officer | Entire Taluk Excluding Davangere City Coporation Limit |
| 7 | Harihar Taluk | Tahasildar, Harihar | SECC 2011 Charge Officer | Entire Taluk Excluding Harihar City Municipal Limit |
| 8 | Channagiri Taluk | Tahasildar, Channagiri | SECC 2011 Charge Officer | Entire Taluk Excluding Channagiri Town Panchayth Limit |
| 9 | Honnali Taluk | Tahasildar, Honnali | SECC 2011 Charge Officer | Entire Taluk Excluding Honnali Town Panchayth Limit |
| 10 | Harapanahalli Taluk | Tahasildar, Harapanahalli | SECC 2011 Charge Officer | Entire Taluk Excluding Harapanahalli Town Municipal Council Limit |
| 11 | Jagalur Taluk | Tahasildar, Jagalur | SECC 2011 Charge Officer | Entire Taluk Excluding Jagalur Town Panchayath Limit |
| 12 | Harihar City Municipal Council | Revenue Officer, City Municipal Council, Harihar | SECC 2011 Charge Officer | Ward No.1 to 15 |
| 13 | Harihar City Municipal Council | Assistant Executive Engineer, City Municipal Council Harihar | SECC 2011 Charge Officer | Ward No. 16 to 31 and Guttur |

| Sl. No. | Administrative Unit | Designation | Appointed as | Jurisdiction |
|---|---|---|---|---|
| 14 | Channagiri Town | Chief Officer, Channagiri | SECC 2011 Charge Officer | Channagiri Town Panchayth Limit |
| 15 | Honnali Town | Chief Officer, Honnali | SECC 2011 Charge Officer | Honnali Town Panchayth Limit |
| 16 | Harapanahalli Town Municipal Council | Commissioner, Harapanahalli | SECC 2011 Charge Officer | Harapanahalli Town Municipal Council Limit |
| 17 | Jagalur Town | Chief Officer, Harapanahalli | SECC 2011 Charge Officer | Jagalur Town Panchayth Limit |
| 18 | Harlapura City Town | Tahsildar, Harihar | SECC 2011 Charge Officer | Entire Haralapura area |
| 19 | Amaravathi City Town | Tahsildar, Harihar | SECC 2011 Charge Officer | Entire Amaravathi area |
| 20 | Davangere Taluk | ADM Shirestedar Taluk Office, Davanagere | SECC 2011 Addl., Charge Officer | Entire Taluk Excluding Davangere City Coporation Limit |
| 21 | Hariahar Taluk | ADM Shirestedar Taluk Office, Harihar | SECC 2011 Addl. Charge Officer | Harihar Taluk (Excluding Harihar CMC limit) |
| 22 | Honnali Taluk | ADM Shirestedar, Taluk Office, Honnali | SECC 2011 Addl. Charge Officer | Entire Taluk Excluding Honnali Town Panchayth Limit |
| 23 | Channagiri Taluk | RRT Shirestedar, Taluk Office, Channagiri | SECC 2011 Addl. Charge Officer | Entire Taluk Excluding Channagiri Town Panchayth Limit |
| 24 | Harapanahalli Taluk | ADM Shirestedar, Taluk Office, Harapanahalli | SECC 2011 Addl. Charge Officer | Entire Taluk Excluding Harapanahalli Town Municipal Council Limit |
| 25 | Jagalur Taluk | ADM Shirestedar, Taluk Office, Jagalur | SECC 2011 Addl. Charge Officer | Entire Taluk Excluding Jagalur Town Panchayath Limit |

**S.S.PATTANASHETTI**
Principal SECC-2011 Officer & Deputy Commissioner
Davanagere District.

**P.R. No. 1067**

## IN THE COURT OF COMMISSIONER FOR WORKMEN`S COMPENSATION BIDAR

**NO. LOB/WCA/Cr-F 54/2011**

**Applicants:-**

1. Yadullah S/o Sadaq Sab, Didegiwali age: 50 yrs, Occup: Labour
2. Fatima Begum W/o Yadullah Sab, Age: 45 Yrs. Occup: Household, R/o Chitta, Tq & Dist. Bidar.

**V/S**

**Respondents:-**

1. Khaja Waris Khan
   Cosmo Carrying Pvt. Ltd.,
   Vasanthalipuram (A.P.)
2. The Manager,
   ICICI Limbard, G.I.Co. Ltd., Hyderabad

## PROCLAIMATION

Sri/Smt Yadullah W/o Sadaq Sab Didagiwale, R/o Chitta, Tq. & Dist. Bidar, have has filed application in this court claiming compensation stating that Late Mahefooz was working as Cleaner under the Respondent No. I he met with an accident arising out of and during the course of employment as a result he died on : 22-04-2010.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclaimation, if no applications on objections are received within the specified date the court will proceeded further in the matter.

**COMMISSIONER FOR WORKMEN`S COMPENSATION, BIDAR**

**P.R. 1187**

## ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

**ಉಪ ಆಯುಕ್ತರು (ಭೂಸ್ವಾಧೀನ) ರವರ ಕಛೇರಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಕೇಂದ್ರ ಕಛೇರಿ, ಮೊದಲನೇ ಮಹಡಿ, ಹೊಸ ಕಟ್ಟಡ (ಮೇಜರ್ ರೋಡ್ಸ್) ಅನೆಕ್ಸ್ ಬಿಲ್ಡಿಂಗ್ ಹಿಂಭಾಗ, ಎನ್.ಆರ್. ವೃತ್ತ, ಬೆಂಗಳೂರು–02.**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ಎಲ್ಎಕ್ಯೂ/ಸಿಆರ್/58/2010–11, ಬೆಂಗಳೂರು, ದಿನಾಂಕ: 28.12.2011**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುವ ಚಿಕ್ಕಲಸಂದ್ರ ವಾರ್ಡ್ ನಂ–183 (ಹಳೆ ವಾರ್ಡ್ ನಂ–55) ಇಟ್ಟುಮಡು 2ನೇ ಮುಖ್ಯ ರಸ್ತೆ, ಬನಶಂಕರಿ 3ನೇ ಹಂತ ರಸ್ತೆ, ವಿಸ್ತರಣೆ ಮಾಡುವ ಸಂಬಂಧ ಇಟ್ಟುಮಡು ಗ್ರಾಮದ ಸ್ವತ್ತಿನ ಸಂಖ್ಯೆ : 2, 2/ಎ (ಹಳೆ ಸರ್ವೆ ನಂ–6/1, 6/2) ರಲ್ಲಿ ಬರುವ ವಿಸ್ತೀರ್ಣ 620.60 ಚ.ಅ. ಜಾಗವನ್ನು ರಸ್ತೆ ಅಗಲೀಕರಣಕ್ಕೆ ಭೂಸ್ವಾಧೀನ ಪಡಿಸಿಕೊಳ್ಳಲು ಭೂಸ್ವಾಧೀನ ಕಾಯ್ದೆಯ ಕಲಂ 4(1) ರನ್ವಯ ಅಧಿಸೂಚನೆಯನ್ನು ದಿನಾಂಕ : 27–8–2011 ರಂದು ಹೊರಡಿಸಲಾಗಿದ್ದು. ಸದರಿ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 20–10–2011 ರಂದು ಭಾಗ–3, ಪುಟ ಸಂಖ್ಯೆ–3557 ರಲ್ಲಿ ಪ್ರಕಟವಾಗಿದ್ದು, ಈ ಅಧಿಸೂಚನೆಯಲ್ಲಿ ಶ್ರೀಮತಿ ಉಷಾ ಶ್ರೀಕಂಠನ್ ಬದಲಿಗೆ ಶ್ರೀಮತಿ ಉಷಾ ಶ್ರೀಕಾಂತನ್ ಎಂದೂ ಹಾಗೂ ಶ್ರೀ ಪ್ರದೀಪ್ ಶ್ರೀಕಂಠನ್ ಬದಲಿಗೆ ಶ್ರೀ ಪ್ರದೀಪ್ ಶ್ರೀಕಾಂತನ್ ಎಂದೂ ದಿನಾಂಕ : 29–11–2011 ತಿದ್ದುಪಡಿ ಮಾಡಲಾಗಿದೆ. ಈ ತಿದ್ದುಪಡಿ ಅಧಿಸೂಚನೆಯು ದಿನಾಂಕ : 15–12–2011 ರ ಕರ್ನಾಟಕ ರಾಜ್ಯಪತ್ರದಲ್ಲಿ (ಭಾಗ–3, ಪುಟ–4236, ಪಿ.ಡಿ. 177) ಪ್ರಕಟವಾಗಿದ್ದು, ಇದರ ನಾಲ್ಕನೇ ಸಾಲಿನಲ್ಲಿ ಅಂತಿಮ ಅಧಿಸೂಚನೆಯನ್ನು ಎಂದು ಪ್ರಕಟಿಸಲಾಗಿದ್ದು, ಇದನ್ನು ಪ್ರಾರಂಭಿಕ ಎಂದು ಓದಿಕೊಳ್ಳತಕ್ಕದ್ದು ಎಂದು ಈ ಮೂಲಕ ತಿಳಿಯಪಡಿಸಿದೆ. ಉಳಿದಂತೆ ಇನ್ನಾವುದೇ ಬದಲಾವಣೆಗಳು ಇರುವುದಿಲ್ಲ.

**ಉಪ ಆಯುಕ್ತರು (ಭೂಸ್ವಾಧೀನ)**
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ.

**ಪಿ.ಡಿ. 197**

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಬೃಹತ್ ಕಾಮಗಾರಿ ವಿಭಾಗ, ತುಮಕೂರು

**ಸಂಖ್ಯೆ : ಕಾನಿಇಂ/ಬೃಕಾವಿ/ತು/11–12/2952–54, ದಿನಾಂಕ : 2–12–2011**

**ಕ.ವಿ.ಪ್ರ.ನಿ.ನಿ. 2003 ರ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮ ಪ್ರಕರಣ 67 ಅನ್ವಯ ಈ ಕೆಳಗೆ ತಿಳಿಸಿರುವ ಯೋಜನೆಗಳನ್ನು ರೂಪಿಸಿದೆ. ಹಾಗೂ ಸದರಿ ಯೋಜನೆಗಳನ್ನು ಲೈಸೆನ್ಸ್‌ದಾರರು ಮತ್ತು ಆಸಕ್ತರು ಯಾವುದೇ ಇತರ ವ್ಯಕ್ತಿಗಳ ತಿಳುವಳಿಕೆಗಾಗಿ ಮೂಲಕ ಪ್ರಕಟಿಸಲಾಗಿದೆ. ಯೋಜನೆಗಳ ವಿವರ ಈ ಕೆಳಕಂಡಂತಿವೆ.**

| ಕ್ರ. ಸಂ. | ಯೋಜನೆಯ ಹೆಸರು | ಯೋಜನೆಯ ಪ್ರಮುಖ ಲಕ್ಷಣಗಳು | ಯೋಜನೆಯ ಅಂದಾಜು ವೆಚ್ಚ (ಲಕ್ಷ ರೂ.ಗಳಲ್ಲಿ) | ಹಾದು ಹೋಗುವ ಪ್ರದೇಶ |
|---|---|---|---|---|
| 1 | ಪಾವಗಡ ತಾಲ್ಲೂಕು, ಪಾವಗಡ (ಕೋಟಗುಡ್ಡ) ಗ್ರಾಮದಲ್ಲಿ (ಸರ್ವೆ ನಂ. 155/1, 155/2, 155/5 ಕೋಟಗುಡ್ಡ ಗ್ರಾಮದಲ್ಲಿ) 2* 100 ಎಂ ವಿ ಎ, 220/66/11 ಕೆ.ವಿ. ವಿದ್ಯುತ್ ಉಪ ಸ್ಥಾವರವನ್ನು ಸ್ಥಾಪಿಸುವುದು ಮತ್ತು ಅದಕ್ಕೆ ಸಂಬಂಧಿಸಿದಂತೆ ಕೆಳಕಂಡ ಪ್ರಸರಣಾ ಮಾರ್ಗಗಳನ್ನು ನಿರ್ಮಿಸುವುದು | 1. ಪಾವಗಡ ಮತ್ತು ಸುತ್ತ ಮುತ್ತಲಿನ ಗ್ರಾಮಗಳಲ್ಲಿ ವಿದ್ಯುತ್ ವೋಲ್ಟೇಜ್ ಉತ್ತಮಪಡಿಸುವುದು.<br>2. ಹಾಲಿ 66/11 ಕೆ.ವಿ. ಪಾವಗಡ, ಶೈಲಾಪುರ, ವೈ.ಎನ್. ಹೊಸಕೋಟೆ, ನಾಗಲಮಡಿಕೆ, ವೆಂಕಟಾಪುರ, ಮಿಡಿಗೇಶಿ, ಐ.ಡಿ. ಹಳ್ಳಿ ವಿದ್ಯುತ್ ಉಪ ಸ್ಥಾವರಗಳಿಗೆ ಸಂಪರ್ಕ ಕಲ್ಪಿಸುವುದು.<br>3. ವಿದ್ಯುತ್ ಸರಬರಾಜಿನ ಗುಣಮಟ್ಟ ಉತ್ತಮ ಪಡಿಸುವುದು ಮತ್ತು ಸ್ಥಿರತೆ ಕಾಪಾಡುವುದು.<br>4. ಮಧುಗಿರಿ, ಗೌರಿಬಿದನೂರು ವಿದ್ಯುತ್ ಸ್ಥಾವರದ ಮೇಲಿನ ಒತ್ತಡವನ್ನು ಕಡಿಮೆ ಮಾಡುವುದು.<br>5. ಮುಂಬರುವ ವಿದ್ಯುತ್ ಬೇಡಿಕೆಯನ್ನು ಕಲ್ಪಿಸುವುದು<br>6. ವಾರ್ಷಿಕ 81.5 ಮಿಲಿಯನ್ ಯೂನಿಟ್‌ಗಳ ವಿದ್ಯುತ್ ಉಳಿತಾಯ 21 ಮೆ.ವ್ಯಾ. ನಷ್ಟ ಕಡಿಮೆಗೊಳಿಸುವುದು. | 3569.05 | |
| | ಅ) ಹಾಲಿ ಮಧುಗಿರಿ 220/66 ಕೆ.ವಿ. ವಿದ್ಯುತ್ ಸ್ವೀಕರಣಾ ಕೇಂದ್ರದಿಂದ ಪಾವಗಡ ಉದ್ದೇಶಿತ ಉಪ ಸ್ಥಾವರದ ವರೆಗೆ 60.494 ಕಿ.ಮೀ. ಉದ್ದದ ಜೋಡಿ ಪ್ರಸರಣಾ ಮಾರ್ಗವನ್ನು ನಿರ್ಮಿಸುವುದು ಮತ್ತು 220 ಕೆವಿ ಹಿರಿಯೂರು–ಗೌರಿಬಿದನೂರು ಜೋಡಿ ಪ್ರಸರಣಾ ಮಾರ್ಗದಿಂದ ಮಧುಗಿರಿ ವಿದ್ಯುತ್ ಉಪ ಸ್ಥಾವರಕ್ಕೆ ಒಂದು ಸರ್ಕಿಟ್ ಅನ್ನು ಲಿಲೋ ಮಾಡುವುದು | | 2649.91 | ಮಧುಗಿರಿ, ಬಿಜವಾರ, ತವಕದಹಳ್ಳಿ, ಗೋಪಗೊಂಡನಹಳ್ಳಿ, ವೆಂಕಟಾಪುರ, ಕಲ್ಲನಹಳ್ಳಿ, ಚಿಕ್ಕನಹಳ್ಳಿ, ಗೊಲ್ಲರಟ್ಟಿ, ಹೊಸಪಾಳ್ಯ, ಬಸವನಹಳ್ಳಿ, ಹೊಸಕೆರೆ, ಗಾಳಿಹಳ್ಳಿ, ವತು, ನೆಲಹಳ್ಳಿ, ಕೃಷ್ಣಾಪುರ, ನೆರಕಲ್ಲು, ಹನುಮನಹಳ್ಳಿ, ಹನುಮಂತಾಪುರ, ಗೊಲ್ಲರಹಟ್ಟಿ, ನಲ್ಲೇಕಾಮನಹಳ್ಳಿ, ಬೇಡತ್ತೂರು, ಬಿದರಹಳ್ಳಿ, ಬಿದರೇಕೆರೆ, ಗೋವಿಂದಾಪುರ, ಮೆಳವಾಯಿ, ಗುರುಪುಕೊಂಡ, ಶಂಕರಕಲ್ಲು, ಕನ್ನಮೇಡಿ, ಕೃಷ್ಣಗಿರಿ, ಎರ್ರಂಪಲ್ಲಿ |

<table>
<tr><td></td><td>ಆ) ಉದ್ದೇಶಿತ ಪಾವಗಡ 220/66 ಕೆ.ವಿ. ವಿದ್ಯುತ್ ಸ್ವೀಕರಣಾ ಕೇಂದ್ರದಿಂದ ಇರುವ ಕಾರಿಡಾರಿನಲ್ಲಿ ಶೈಲಾಪುರ ಮತ್ತು ವೈ.ಎನ್. ಹೊಸಕೋಟೆ ಉಪ ಸ್ಥಾವರಗಳ ಪ್ರಸರಣಾ ಮಾರ್ಗಕ್ಕೆ 8.626 ಕಿ.ಮೀ. ಉದ್ದದ ಜೋಡಿ ಪ್ರಸರಣಾ ಮಾರ್ಗ ನಿರ್ಮಿಸಿ ಸಂಪರ್ಕ ಕಲ್ಪಿಸುವುದು</td><td rowspan="3">1. ಪಾವಗಡ ಮತ್ತು ಸುತ್ತ ಮುತ್ತಲಿನ ಗ್ರಾಮಗಳಲ್ಲಿ ವಿದ್ಯುತ್ ವೋಲ್ಟೇಜ್ ಉತ್ತಮಪಡಿಸುವುದು.<br>2. ಹಾಲಿ 66/11 ಕೆ.ವಿ. ಪಾವಗಡ, ಶೈಲಾಪುರ, ವೈ.ಎನ್. ಹೊಸಕೋಟೆ, ನಾಗಲಮಡಿಕೆ, ವೆಂಕಟಾಪುರ, ಮಿಡಿಗೇಶಿ, ಐ.ಡಿ. ಹಳ್ಳಿ ವಿದ್ಯುತ್ ಉಪ ಸ್ಥಾವರಗಳಿಗೆ ಸಂಪರ್ಕ ಕಲ್ಪಿಸುವುದು.<br>3. ವಿದ್ಯುತ್ ಸರಬರಾಜಿನ ಗುಣಮಟ್ಟ ಉತ್ತಮ ಪಡಿಸುವುದು ಮತ್ತು ಸ್ಥಿರತೆ ಕಾಪಾಡುವುದು.<br>4. ಮಧುಗಿರಿ, ಗೌರಿಬಿದನೂರು ವಿದ್ಯುತ್ ಸ್ಥಾವರದ ಮೇಲಿನ ಒತ್ತಡವನ್ನು ಕಡಿಮೆ ಮಾಡುವುದು.<br>5. ಮುಂಬರುವ ವಿದ್ಯುತ್ ಬೇಡಿಕೆಯನ್ನು ಕಲ್ಪಿಸುವುದು.<br>6. ವಾರ್ಷಿಕ 81.5 ಮಿಲಿಯನ್ ಯೂನಿಟ್‌ಗಳ ವಿದ್ಯುತ್ ಉಳಿತಾಯ 21 ಮೆ.ವ್ಯಾ. ನಷ್ಟ ಕಡಿಮೆಗೊಳಿಸುವುದು.</td><td>184.16</td><td>ಎರ್ರಂಪಲ್ಲಿ, ಕೋಟಗುಡ್ಡ, ಶೈಲಾಪುರ</td></tr>
<tr><td></td><td>ಇ) ಉದ್ದೇಶಿತ ಪಾವಗಡ 220/66 ಕೆ.ವಿ. ವಿದ್ಯುತ್ ಸ್ವೀಕರಣಾ ಕೇಂದ್ರದಿಂದ ಹಾಲಿ ಇರುವ ಪಾವಗಡ–ನಾಗಲಮಡಿಕೆ–ಶೈಲಾಪುರ ಪ್ರಸರಣಾ ಮಾರ್ಗಕ್ಕೆ 0.425 ಕಿ.ಮೀ. ಉದ್ದದ ಒಂಟಿ ಪ್ರಸರಣಾ ಮಾರ್ಗ ನಿರ್ಮಿಸಿ ಸಂಪರ್ಕ ಕಲ್ಪಿಸುವುದು</td><td>19.16</td><td>ಎರ್ರಂಪಲ್ಲಿ</td></tr>
<tr><td></td><td>ಈ) ಉದ್ದೇಶಿತ ಪಾವಗಡ 220/66 ಕೆ.ವಿ. ವಿದ್ಯುತ್ ಸ್ವೀಕರಣಾ ಕೇಂದ್ರದಿಂದ ಹಾಲಿ ಇರುವ ಪಾವಗಡ ಸರ್ಕೀಟ್ 1 ಮತ್ತು 2 ಹಾಗೂ ಮಿಡಿಗೇಶಿ ಸರ್ಕೀಟ್ 1 ಮತ್ತು 2 ಪ್ರಸರಣಾ ಮಾರ್ಗಗಳಿಗೆ 12.892 ಕಿ.ಮೀ. ಉದ್ದದ ಮಲ್ಟಿ ಸರ್ಕೀಟ್ ಪ್ರಸರಣಾ ಮಾರ್ಗ ನಿರ್ಮಿಸಿ ಸಂಪರ್ಕ ಕಲ್ಪಿಸುವುದು</td><td>738.09</td><td>ಎರ್ರಂಪಲ್ಲಿ, ಗೊರಸಮಾವು, ಬೊಮ್ಮಜ್ಜನಹಳ್ಳಿ, ಪಾವಗಡ</td></tr>
</table>

ಕ.ವಿ.ಪ್ರ.ನಿ.ನಿ. ಮೇಲೆ ತಿಳಿಸಿರುವ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಅಧಿನಿಯಮ ಭಾಗ–111ರ (ಕೇಂದ್ರ ಕಾಯ್ದೆ 1886ರ 13 ಅನ್ವಯ) ಅಧಿನಿಯಮ ಟೆಲಿಗ್ರಾಫ್ ಹೊಂದಿರುವ ಎಲ್ಲಾ ಅಧಿಕಾರಿಗಳನ್ನು ಹೊಂದಿರುತ್ತದೆ ಹಾಗೂ ಚಲಾಯಿಸುತ್ತದೆ. ಸದರಿ ಯೋಜನೆಗಳಿಗೆ ಅಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಪರಿಗಣನೆಗಾಗಿ ಅಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 60 ದಿನಗಳ ಒಳಗಾಗಿ ಕಾರ್ಯನಿರ್ವಾಹಕ ಅಬಿಯಂತರರು (ವಿ) ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಕೋತಿತೋಪು, ತುಮಕೂರು–02 ಇವರಿಗೆ ಕಳುಹಿಸುವುದು.

**ಕಾರ್ಯ ನಿರ್ವಾಹಕ ಇಂಜಿನಿಯರ್ (ವಿ)**

**ಪಿ.ಡಿ. 186** ಬೃಹತ್ ಕಾಮಗಾರಿ ವಿಭಾಗ, ತುಮಕೂರು.

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಬೃಹತ್ ಕಾಮಗಾರಿ ವಿಭಾಗ, ತುಮಕೂರು

**ಸಂಖ್ಯೆ : ಕಾನಿಇಂ/ಬೃಕಾವಿ/ತು/11-12/3232-33, ದಿನಾಂಕ : 22-12-2011**

**ಕ.ವಿ.ಪ್ರ.ನಿ.ನಿ. 2003 ರ ವಿದ್ಯುಚಕ್ತಿ ಸರಬರಾಜು ಅಧಿನಿಯಮ ಪ್ರಕರಣ 67 ಅನ್ವಯ ಈ ಕೆಳಗೆ ತಿಳಿಸಿರುವ ಯೋಜನೆಗಳನ್ನು ರೂಪಿಸಿದೆ. ಹಾಗೂ ಸದರಿ ಯೋಜನೆಗಳನ್ನು ಲೈಸೆನ್ಸ್‌ದಾರರು ಮತ್ತು ಆಸಕ್ತರು ಯಾವುದೇ ಇತರ ವ್ಯಕ್ತಿಗಳ ತಿಳುವಳಿಕೆಗಾಗಿ ಈ ಮೂಲಕ ಪ್ರಕಟಿಸಲಾಗಿದೆ. ಯೋಜನೆಗಳ ವಿವರ ಈ ಕೆಳಕಂಡಂತಿವೆ.**

| ಕ್ರ. ಸಂ. | ಯೋಜನೆಯ ಹೆಸರು | ಯೋಜನೆಯ ಪ್ರಮುಖ ಲಕ್ಷಣಗಳು | ಯೋಜನೆಯ ಅಂದಾಜು ವೆಚ್ಚ (ಲಕ್ಷ ರೂ.ಗಳಲ್ಲಿ) | ಹಾದು ಹೋಗುವ ಪ್ರದೇಶ |
|---|---|---|---|---|
| 1 | ತಿಪಟೂರು ತಾಲ್ಲೂಕು, ಗುಂಗುರಮಳೆ ಗ್ರಾಮದಲ್ಲಿ, ಸರ್ವೆ ನಂ. 89/16 (33 ಗುಂಟೆ), 89/2 (1 ಎಕರೆ, 27 ಗುಂಟೆ) 1*10 ಎಂ ವಿ ಎ ವಿದ್ಯುತ್ ಉಪ ಸ್ಥಾವರವನ್ನು ಸ್ಥಾಪಿಸುವುದು ಮತ್ತು ಉದ್ದೇಶಿಸಿರುವ 110/11 ಕೆ.ವಿ. ಉಪಸ್ಥಾವರಕ್ಕೆ ಹಾಲಿ ಇರುವ ಕೆಬಿಕ್ರಾಸ್-ನೊಣವಿನಕೆರೆ 110 ಕೆ.ವಿ. ಪ್ರಸರಣಾ ಮಾರ್ಗದಿಂದ 8.6 ಕಿ.ಮೀ. ಉದ್ದದ 110 ಕೆ.ವಿ. ಒಂಟಿ ಪ್ರಸರಣಾ ಮಾರ್ಗವನ್ನು ನಿರ್ಮಿಸುವುದು. | 1. ಗುಂಗುರಮಳೆ ಮತ್ತು ಸುತ್ತ ಮುತ್ತಲಿನ ಗ್ರಾಮಗಳಲ್ಲಿ ವಿದ್ಯುತ್ ವೋಲ್ಟೇಜ್ ಉತ್ತಮಪಡಿಸುವುದು.<br>2. ಮಾರ್ಗವ್ಯವಸ್ಥೆಯಲ್ಲಿ ನಷ್ಟವನ್ನು ಕಡಿಮೆಗೊಳಿಸುವುದು.<br>3. ವಿದ್ಯುತ್ ಸರಬರಾಜಿನ ಗುಣಮಟ್ಟ ಉತ್ತಮ ಪಡಿಸುವುದು ಮತ್ತು ಸ್ಥಿರತೆ ಕಾಪಾಡುವುದು.<br>4. ನೊಣವಿನಕೆರೆ ಉಪ ಸ್ಥಾವರದ ಮೇಲಿನ ಒತ್ತಡವನ್ನು ಕಡಿಮೆ ಮಾಡುವುದು.<br>5. ಮುಂಬರುವ ವಿದ್ಯುತ್ ಬೇಡಿಕೆಯನ್ನು ಕಲ್ಪಿಸುವುದು | 703.92 | ಬಸವನಹಳ್ಳಿ, ವಡ್ಡರಹಟ್ಟಿ, ರಂಗನಹಳ್ಳಿ, ಕಸವನಹಳ್ಳಿ, ಮೇಲನಹಳ್ಳಿ, ಹೊಸೂರು, ಕೆಳಗಲಕೊಪ್ಪಲು, ಗುಂಗುರಮಳೆ |

ಕ.ವಿ.ಪ್ರ.ನಿ.ನಿ. ಮೇಲೆ ತಿಳಿಸಿರುವ ಯೋಜನೆಗಳನ್ನು ಕಾರ್ಯಗತಗೊಳಿಸಲು 1885 ರ ಭಾರತೀಯ ಟೆಲಿಗ್ರಾಫ್ ಅಧಿನಿಯಮ ಭಾಗ- III ರ (ಕೇಂದ್ರ ಕಾಯ್ದೆ 1886ರ 13 ಅನ್ವಯ) ಅಧಿನಿಯಮ ಟೆಲಿಗ್ರಾಫ್ ಹೊಂದಿರುವ ಎಲ್ಲಾ ಅಧಿಕಾರಿಗಳನ್ನು ಹೊಂದಿರುತ್ತದೆ ಹಾಗೂ ಚಲಾಯಿಸುತ್ತದೆ. ಸದರಿ ಯೋಜನೆಗಳಿಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಪರಿಗಣನೆಗಾಗಿ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 60 ದಿನಗಳ ಒಳಗಾಗಿ ಕಾರ್ಯನಿರ್ವಾಹಕ ಅಭಿಯಂತರರು (ವಿ) ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಕೋತಿತೋಪು, ತುಮಕೂರು-02 ಇವರಿಗೆ ಕಳುಹಿಸುವುದು.

**ಪಿ.ಡಿ. 4**

**ಕಾರ್ಯ ನಿರ್ವಾಹಕ ಇಂಜಿನಿಯರ್ (ವಿ)**
ಬೃಹತ್ ಕಾಮಗಾರಿ ವಿಭಾಗ, ತುಮಕೂರು.

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತರವರ ಕಛೇರಿ, ಕಾರ್ಯನಿರ್ವಾಹಕ ಇಂಜಿನಿಯರ್ (ವಿ), ಬೃಹತ್ ಕಾಮಗಾರಿ ವಿಭಾಗ, 3636, ಮೊದಲನೆ ಮಹಡಿ, ಕೆ.ಎಸ್.ಆರ್.ಟಿ.ಸಿ. ಡಿಪೊ, ರಸ್ತೆ, ಚಿತ್ರದುರ್ಗ

### ಪ್ರಕಟಣೆ

**ಸಂಖ್ಯೆ: ಕಾನಿಇಂ/ಸಇಂ(ವಿ)/ಬೃಕಾವಿ/ಚಿ/11-12/ಕ-/2536-37, ದಿನಾಂಕ: 5.12.2011.**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮವು ವಿದ್ಯುತ್ ಸರಬರಾಜು ಕಾಯ್ದೆ 2003 ರ ಸೆಕ್ಷನ್ 67 ರಡಿಯಲ್ಲಿ ಯೋಜನೆಯನ್ನು ರೂಪಿಸಿದೆ ಮತ್ತು ಇದೇ ಕಾಯ್ದೆ ಸೆಕ್ಷನ್ 67(2) ಅನ್ವಯ ಸಾರ್ವಜನಿಕರಿಗೆ ಯೋಜನೆಗಳ ಮಾಹಿತಿ ನೀಡುವ ದೃಷ್ಟಿಯಿಂದ ಈ ಪ್ರಕಟಣೆಯನ್ನು ಇಲ್ಲಿ ಪ್ರಕಟಿಸಲಾಗಿದೆ. ಯೋಜನೆಗಳ ವಿವರಗಳು ಈ ಕೆಳಕಂಡಂತಿವೆ.

1. ಕೆಲಸದ ಹೆಸರು : ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕು ಉದ್ದೇಶಿತ ವಾಣಿವಿಲಾಸಪುರ (ಭರಮಗಿರಿ) 66/11 ಕೆವಿ ಉಪಕೇಂದ್ರಕ್ಕೆ ಹಾಲಿ ಇರುವ 66 ಕೆವಿ ಹಿರಿಯೂರು-ಮತ್ತೋಡು ಡಿ.ಸಿ ಮಾರ್ಗದಿಂದ ಡಿಸಿ ಟವರ್‌ಗಳ ಮೇಲೆ ಉದ್ದೇಶಿತ 66 ಕೆವಿ ಡಿ.ಸಿ ಮಾರ್ಗದ ನಿರ್ಮಾಣ.

ಪ್ರಮುಖ ಲಕ್ಷಣಗಳು : ವಿದ್ಯುತ್ ಮಾರ್ಗಗಳ ನಷ್ಟದಲ್ಲಿ ಇಳಿಕೆ, ವೋಲ್ಟೇಜ್ ಸುಧಾರಣೆ ಮತ್ತು ವಾಣಿವಿಲಾಸಪುರ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸಲು ಮತ್ತು ವಾಣಿವಿಲಾಸಪುರ ಸಮೀಪದ ಹಳ್ಳಿಗಳಿಗೆ ವಿದ್ಯುತ್ ಹೊರೆ ಕಡಿಮೆ ಮಾಡುವುದು.

ವಿದ್ಯುತ್ ಮಾರ್ಗಹಾದು ಹೋಗುವ ಪ್ರದೇಶಗಳು : ಅಮ್ಮನಹಟ್ಟಿ, ಕಂಬದ ಗುಡ್ಡ ಭರಮಗಿರಿ ಮತ್ತು ವಿವಿಪುರ

ವಿದ್ಯುತ್ ಮಾರ್ಗದ ಅಂದಾಜು ಉದ್ದ : 3.585 ಕಿ.ಮೀ.

ಯೋಜನೆಯ ಅಂದಾಜು ವೆಚ್ಚ : ರೂ. 85.42 ಲಕ್ಷಗಳು

2. ಕೆಲಸದ ಹೆಸರು : ಹಾಲಿ ಇರುವ 66 ಕೆವಿ ಒಂಟಿ ಮಾರ್ಗದ ಕಾರಿಡಾರ್‌ನಲ್ಲಿ 66 ಕೆವಿ ಜೋಡಿ ಪ್ರಸರಣ ಮಾರ್ಗವನ್ನು ಹಾಲಿ ಇರುವ 220/66 ತಳಕ್ ಉಪಕೇಂದ್ರದಿಂದ ಹಾಲಿ ಇರುವ 66/11 ಕೆವಿ ಹಾನಗಲ್ ಉಪಕೇಂದ್ರಕ್ಕೆ ಡಿಸಿ ಟವರ್‌ಗಳ ಮೇಲೆ ಉದ್ದೇಶಿತ 66 ಕೆವಿ ಡಿ.ಸಿ. ಮಾರ್ಗದ ನಿರ್ಮಾಣ.

ಪ್ರಮುಖ ಲಕ್ಷಣಗಳು : ವಿದ್ಯುತ್ ಮಾರ್ಗಗಳ ನಷ್ಟದಲ್ಲಿ ಇಳಿಕೆ, ವೋಲ್ಟೇಜ್ ಸುಧಾರಣೆ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸಲು.

ವಿದ್ಯುತ್ ಮಾರ್ಗಹಾದು ಹೋಗುವ ಪ್ರದೇಶಗಳು : ತಳಕ್, ಹೊಸಹಳ್ಳಿ, ಕೊಡಿಹಳ್ಳಿ, ಹಿರೇಹಳ್ಳಿ, ಬಿಜಿಕೆರೆ, ಮುತ್ತಿಗರಹಳ್ಳಿ, ತುಮಕೂರಹಳ್ಳಿ ಎರನಹಳ್ಳಿ ರಾಯಪುರ, ಮಾಯಗಾರಹಟ್ಟಿ, ಹಾನಗಲ್,

ವಿದ್ಯುತ್ ಮಾರ್ಗದ ಅಂದಾಜು ಉದ್ದ : 33.52 ಕಿ.ಮೀ.

ಯೋಜನೆಯ ಅಂದಾಜು ವೆಚ್ಚ ರೂ. 506.10 ಲಕ್ಷಗಳು.

3. ಕೆಲಸದ ಹೆಸರು : ಹಾಲಿ ಇರುವ 66 ಕೆವಿ ಒಂಟಿ ಮಾರ್ಗದ ಕಾರಿಡಾರ್‌ನಲ್ಲಿ 66 ಕೆವಿ ಒಂಟಿ ಪ್ರಸರಣ ಮಾರ್ಗವನ್ನು ಹಾಲಿ ಇರುವ 220/66 ತಳಕ್ ಉಪಕೇಂದ್ರದಿಂದ ಹಾಲಿ ಇರುವ 66/11 ಕೆವಿ ಪರಶುರಾಂಪುರ ಉಪಕೇಂದ್ರಕ್ಕೆ ಡಿಸಿ ಟವರ್‌ಗಳ ಮೇಲೆ ಉದ್ದೇಶಿತ 66 ಕೆವಿ ಎಸ್.ಸಿ. ಮಾರ್ಗದ ನಿರ್ಮಾಣ.

ಪ್ರಮುಖ ಲಕ್ಷಣಗಳು : ವಿದ್ಯುತ್ ಮಾರ್ಗಗಳ ನಷ್ಟದಲ್ಲಿ ಇಳಿಕೆ, ವೋಲ್ಟೇಜ್ ಸುಧಾರಣೆ ಮತ್ತು ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸಲು.

ವಿದ್ಯುತ್ ಮಾರ್ಗಹಾದು ಹೋಗುವ ಪ್ರದೇಶಗಳು : ತಳಕ್, ಗಿರಿಯಮ್ಮನಹಳ್ಳಿ, ಚಿಕ್ಕಉಳ್ಳಾರ್ತಿ, ದೊಡ್ಡಉಳ್ಳಾರ್ತಿ, ರಂಗನಹಳ್ಳಿ, ಕರೀಕೆರೆ, ಚನ್ನಮ್ಮನಾಗತಿಹಳ್ಳಿ, ತಿಮ್ಮನಹಳ್ಳಿ, ಜುಂಜರಗುಂಟೆ, ಅಲ್ಲಾಪುರ, ಪರಶುರಾಂಪುರ.

ವಿದ್ಯುತ್ ಮಾರ್ಗದ ಅಂದಾಜು ಉದ್ದ : 33.572 ಕಿ.ಮೀ.

ಯೋಜನೆಯ ಅಂದಾಜು ವೆಚ್ಚ ರೂ. 442.25 ಲಕ್ಷಗಳು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮವು ಮೇಲೆ ತಿಳಿಸಿದ ಯೋಜನೆಗಳನ್ನು 2003 ಭಾರತೀಯ ಟೆಲಿಗ್ರಾಫ್ ಅಧಿನಿಯಮದ ಅನುಬಂಧ 164ರ ಭಾರತೀಯ ಟೆಲಿಗ್ರಾಫ್ ಅಧಿನಿಯಮದ ಭಾಗ–IIIನ್ನು (1885ರ 13 ಅನ್ವಯ) ಅನುಷ್ಠಾನಕ್ಕೆ ತರಲು ಪ್ರಾಧಿಕಾರವು ಹೊಂದಿರುವ ಎಲ್ಲಾ ಅಧಿಕಾರವನ್ನು ಹೊಂದಿರುತ್ತದೆ. ಹಾಗೂ ಚಲಾಯಿಸುತ್ತದೆ. ಮೇಲ್ಕಂಡ ಯೋಜನೆಗಳಿಗೆ ಸಂಬಂಧಿಸಿದಂತೆ ಆಕ್ಷೇಪಣೆ/ಏರುಪೇರುಗಳೇನಾದರೂ ಇದ್ದಲ್ಲಿ ನಿಗಮದ ಪರಿಗಣನೆಗಾಗಿ ಕೆಳಸಹಿದಾರರಿಗೆ ಈ ಪ್ರಕಟಣೆಯ ಪ್ರಕಟವಾದ ದಿನಾಂಕದಿಂದ ಒಂದು ತಿಂಗಳೊಳಗಾಗಿ ಆಕ್ಷೇಪಣೆಗಳನ್ನು ಸಲ್ಲಿಸುವುದು.

**ಕಾರ್ಯನಿರ್ವಾಹಕ ಇಂಜಿನಿಯರ್ (ವಿ),**

**ಪಿ.ಡಿ. 185** ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಚಿತ್ರದುರ್ಗ.

**FORM NO. 151**

(See Rule 315)

The Companies Act, 1956

Members' voluntary Winding-up

Notice of appointment of liquidator pursuant to Section 516

| | |
|---|---|
| Name of Company ; | Amber Networks (India) Private Limited |
| Nature of Business : | To operate & render Services as a consultant in all kinds of software, hardware, system integration, software and engineering processes |
| Address of Registered Office : | Broadband Hub, No. 50, Brigade Mlr Cent, Ropad Basavagudi, Bangalore, Karnataka-560004 |
| Name and address of Liquidator : | Mr. Pramod S. Shah,<br>For Pramod S. Shah & Associates,<br>(Practising Company Secretaries)<br>Office No. 5, Mani Bhuvan,<br>54, Hughes Road,<br>Next to Ghanasingh Jewellers,<br>Opp. Dharam Palace, Mumbai-400007 |
| Date of Appointment | 16-12-2011 |

| | |
|---|---|
| By whom appointed : | Members by Passing a Special Resolution at the Extra Ordinary General Meeting held on 16-12-2011. |

For Amber networks (India) Private Limited.

**Mr. Pramod S. Shah,**

Voluntary Liquidator

For Pramod S. Shah & Associates,

(Practising Company Secretaries).

## PUBLIC NOTICE

## AMBER NETWORKS (INDIA) PRIVATE LIMITED

**BROADBAND HUB, NO. 50, BRIGADE MLR CENT, ROPAD, BASAVANGUDI, BANGALORE, KARNATAKA-560004.**

Notice is hereby given pursuant to Section 485 (1) of the Companies Act, 1956, for general Information that the members of the Amber Networks (India) Private Limited at the Extra-ordinary General Meeting of the Company held on 16th December, 2011 at its registered office, have unanimously passed the following Special Resolution to wind up the above Company voluntarily.

"RESOLVED THAT pursuant to the provisions of Section 492 of the Companies Act, 1956 and in supersession of all earlier resolutions passed the consent of the members he and is hereby accorded to appoint Mr. Pramod S. Shah, Company Secretary in Whole Time practice as the Voluntary Liquidator of the Company in place of Mr. Venkatesh Prabhu who was appointed as the volunatary liquidator by the members vide resolution passed in the meeting held on March 28, 2003.

RESOLVED FURTHER THAT the consent of the members of the company be and is hereby accorded to pay the remuneration of Rs. 20,000/- (Rupees Twenty Thousand only) excluding service tax at the rate applicable to the voluntary liquidator.

RESOLVED FURTHER THAT Mr. Pramod S. Shah, the Liquidator be and is hereby authorised to exercise such powers as provided under the provisions of the Companies Act, 1956 for effectively winding up the affairs of the Company.

For Amber networks (India) Private Limited.

**PD - 10**

**Mr. Pramod S. Shah,**

Voluntary Liquidator

## OFFICE OF THE SPECIAL ADDITIONAL LAND ACQUISITION OFFICER BANGALORE DEVELOPMENT AUTHORITY, BANGALORE

**Notification Under Section 16(2) of the LA Act 1894, No. BDA/SALAO/C4/PR/910/2011-12, Dated : 28-12-2011.**

The Lands mentioned below have been acquired for Formation of Further Extention of East of NGEF Layout under FINAL NOTIFICATION NO. HUD/357/MNX/90, dt. 12-10-1990 which was published in the Karnataka Gazette dt : 22-10-1990. The Possession of the lands of the following survey numbers have been taken on the dates mentioned against each survey number below. The facts of the same is published under section 16(2) of the Land Acquisition Act (Karnataka Extension Amendment Act 17 of 1961) and Under Section 36 of the BDA Act 1976 for the information of public.

### SCHEDULE

District : Bangalore Taluk : Bangalore South Now called East Hobli : KR Pura Village : Banasawadi

| Sl. No. | LAC NO. | Sy. No. | Total Extent Notified A-G | Extent Acquired A-G | Date of Taking over Possession |
|---|---|---|---|---|---|
| 1 | 16/1988-89 | 108/2 | 0-24 | 0-24 | 25-9-1993 |
| 2 | 17/1988-89 | 113 | 3-24 | 1-14 | 29-9-1993 |
| 3 | 19/1988-89 | 147 | 1-05 | 1-05 | 25-9-1993 |

**P.D. No. 01**

Special Additional Land Acquisition Officer

Bangalore Development Authority, Bangalore

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ,**

**ಕಾರ್ಯನಿರ್ವಾಹಕ ಇಂಜಿನಿಯರ್ (ವಿದ್ಯುತ್) ರವರ ಕಛೇರಿ, ಬೃಹತ್ ಕಾಮಗಾರಿ ವಿಭಾಗ, ಮಂಗಳೂರು. ಕವಿಪ್ರನಿನಿ, ಕಾವೂರು, ಮಂಗಳೂರು–15.**

**ಸಂಖ್ಯೆ: ಕಾನಿಇಂ/ಬೃಕಾವಿ/ಉಡುಪಿ/ಸಕಾನಿಇಂ(ಕ)/4918–22, ಬೆಂಗಳೂರು, ದಿನಾಂಕ: 22.12.2011.**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು, 2003ರ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮದ ಸೆಕ್ಷನ್ 67(2)(ಸಿ) ರ ಅನ್ವಯ ಈ ಕೆಳಕಂಡ ಯೋಜನೆಯನ್ನು ರೂಪಿಸಿರುತ್ತದೆ ಮತ್ತು ಅದನ್ನು ಮೇಲೆ ತಿಳಿಸಿರುವ ಕಾಯ್ದೆಯ ಸೆಕ್ಷನ್ 67(2)ರ ಅನ್ವಯ ಸಂಬಂಧಪಟ್ಟ ವ್ಯಕ್ತಿಗಳ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ. ಯೋಜನೆಯ ವಿವರಗಳು ಈ ಕೆಳಕಂಡಂತಿವೆ.

| | | |
|---|---|---|
| 1. | ಯೋಜನೆಯ ಹೆಸರು | ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ತಾಲ್ಲೂಕಿನ ಪ್ರಸ್ತಾವಿತ 220/110/11 ಕೆವಿ ಎಂ.ಎಸ್.ಇ.ಝಡ್, ಬಜ್ಪೆ ವಿದ್ಯುತ್ ಉಪಕೇಂದ್ರದಿಂದ ಜೋಕಟ್ಟೆಯಲ್ಲಿರುವ 110 ಕೆವಿ ಎಂ.ಆರ್.ಪಿ.ಎಲ್. ಮೀಟರಿಂಗ್ ಬೇ ವರೆಗೆ 110 ಕೆವಿ ಬಹುಮಂಡಲ ವಿದ್ಯುತ್ ಪ್ರಸರಣಾ ಮಾರ್ಗವನ್ನು ನಿರ್ಮಿಸುವುದು. |
| 2. | ಪ್ರಮುಖ ಲಕ್ಷಣಗಳು | ಸಾಂಪ್ರದಾಯಿಕವಾದ ಜಿ.ಐ. ಲ್ಯಾಟೀಸ್ ಮಾದರಿಯ ಗೋಪುರಗಳ ಮೇಲೆ ಲಿಂಕ್ಸ್ ಎ.ಸಿ.ಎಸ್.ಆರ್. ವಾಹಕವನ್ನು ಉಪಯೋಗಿಸಿ, ಸುಮಾರು 2.648 ಕಿ.ಮೀ. ಉದ್ದದ 110 ಕೆವಿ ಬಹುಮಂಡಲ ವಿದ್ಯುತ್ ಪ್ರಸರಣಾ ಮಾರ್ಗದ ನಿರ್ಮಾಣ |
| 3. | ಹಾದು ಹೋಗುವ ಪ್ರದೇಶಗಳು | ಮಂಗಳೂರು ಹಾಗೂ ಸುತ್ತಮುತ್ತಲಿನ ಪ್ರದೇಶಗಳಿಗೆ ಉತ್ತಮ ಗುಣಮಟ್ಟದ ಮತ್ತು ನಿರಂತರ ವಿದ್ಯುತ್ ಸರಬರಾಜಿನೊಂದಿಗೆ ಬೆಳೆಯುತ್ತಿರುವ ವಿದ್ಯುತ್ ಬೇಡಿಕೆಯನ್ನು ಪೂರೈಸುವ ಸಲುವಾಗಿ ಕೈಗೊಳ್ಳಲಾದ ಈ ಪ್ರಸ್ತಾವಿತ ವಿದ್ಯುತ್ ಮಾರ್ಗವು 22 ಮೀಟರ್ ಕಾರಿಡಾರ್ ಅಗಲವನ್ನು ಹೊಂದಿದ್ದು, ಮಂಗಳೂರು ತಾಲ್ಲೂಕಿನ ಈ ಗ್ರಾಮಗಳ ಮಿತಿಯಲ್ಲಿ ಹಾದುಹೋಗುತ್ತದೆ. ಪ್ರಸ್ತಾವಿತ ವಿದ್ಯುತ್ ಪ್ರಸರಣಾ ಮಾರ್ಗವು ಬಜ್ಪೆ, ಕಳವಾರು, ಜೋಕಟ್ಟೆ ಗ್ರಾಮಗಳ ಮಿತಿಯಲ್ಲಿ ಹಾದು 110 ಕೆವಿ ಎಂ.ಆರ್.ಪಿ.ಎಲ್. ಮೀಟರಿಂಗ್ ಬೇಯ ಹತ್ತಿರ ಅಂತ್ಯಗೊಳ್ಳಲಿದೆ. |
| 4. | ವಿದ್ಯುತ್ ಪ್ರಸರಣ ಮಾರ್ಗದ ಅಂದಾಜು ಮೌಲ್ಯ | ಸಾಮಗ್ರಿ, ಲೇಬರ್ ಹಾಗೂ ಸಿವಿಲ್ ವೆಚ್ಚ ಸೇರಿಸಿ ಅಂದಾಜು 468.48 ಲಕ್ಷ ರೂಪಾಯಿಗಳು. |

ಮೇಲೆ ತಿಳಿಸಿರುವ ಯೋಜನೆಯನ್ನು ಕಾರ್ಯಗತಗೊಳಿಸಲು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು, ಭಾರತೀಯ ಟೆಲಿಗ್ರಾಫಿಕ್ ಕಾಯಿದೆ 1885 ಅಧಿನಿಯಮ ಭಾಗ–III ರ ಅನ್ವಯ ಟೆಲಿಗ್ರಾಫ್ ಪ್ರಾಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ ಹಾಗೂ ಚಲಾಯಿಸುತ್ತದೆ. ಮೇಲಿನ ಪ್ರಸ್ತಾವಿತ ಯೋಜನೆಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ನಿಗಮದ ಪರಿಗಣನೆಗಾಗಿ/ಅವುಗಳ ನಿವಾರಣೆಗಾಗಿ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ ಒಂದು ತಿಂಗಳೊಳಗಾಗಿ ಈ ಕೆಳಗಿನ ಕಛೇರಿಗೆ ಕಳುಹಿಸುವುದು.

**ಕಾರ್ಯನಿರ್ವಾಹಕ ಇಂಜಿನಿಯರ್ (ವಿದ್ಯುತ್),**

**ಪಿ.ಡಿ. 199** ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಕಾವೂರು, ಮಂಗಳೂರು–15.

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**

**ಕಾರ್ಯನಿರ್ವಾಹಕ ಇಂಜಿನಿಯರ್ (ವಿ), ಬೃಹತ್ ಕಾಮಗಾರಿ ರಾಮನಗರ ವಿಭಾಗ, ಕ.ವಿ.ಪ್ರ.ನಿ.ನಿ. ರಾಮನಗರ**

**ಯೋಜನಾ ಪ್ರಕಟಣೆ**

**ಸಂಖ್ಯೆ: ಕಾಇಂ(ವಿ)/ಬೃಕಾರಾವಿ/ಸ.ಕಾ.ನಿ.ಇಂ. (1)/11–12/983, ದಿನಾಂಕ: 29.12.2011.**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ವಿದ್ಯುತ್ ಸರಬರಾಜು ಕಾಯ್ದೆ 2003 ರ ಸೆಕ್ಷನ್ 67(2) ಸಿ 176 ರನ್ವಯ ಸಾರ್ವಜನಿಕರಿಗೆ ಯೋಜನೆಗಳ ಮಾಹಿತಿ ನೀಡುವ ದೃಷ್ಟಿಯಿಂದ ಈ ಯೋಜನೆಯನ್ನು ಪ್ರಕಟಿಸಲಾಗುತ್ತಿದೆ. ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು ಮತ್ತು ಇನ್ನು ಇತರೆ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ.

**ಯೋಜನೆಯ ವಿವರ :**

(ಎ) ರಾಮನಗರ ತಾಲ್ಲೂಕಿನ ಬಿಡದಿ ಹೋಬಳಿಯ ರಂಗೇಗೌಡನದೊಡ್ಡಿಯಲ್ಲಿ ಪಿ.ಜಿ.ಸಿ.ಐ.ಎಲ್. ನಿರ್ಮಾಣ ಮಾಡುತ್ತಿರುವ 400/220 ಕೆ.ವಿ. ವಿದ್ಯುತ್ ಕೇಂದ್ರದಿಂದ ಕವಿಪ್ರನಿನಿಯು 220 ಕೆವಿ ಡಿಸಿ ಮಾರ್ಗವನ್ನು ಹಾಲಿ ಇರುವ ಕವಿಪ್ರನಿನಿಯ 220/66/11 ಕೆವಿ ವಿದ್ಯುತ್ ಉಪಕೇಂದ್ರ ಜೋಗರದೊಡ್ಡಿ, ಕೆ.ಐ.ಎ.ಡಿ.ಬಿ. ಕೈಗಾರಿಕಾ ಪ್ರದೇಶ, ಬಿಡದಿದವರೆಗೆ ಸುಮಾರು 3.385 ಕಿ.ಮೀ. ಉದ್ದದ ಮಾರ್ಗವನ್ನು ನಿರ್ಮಿಸಲು ಉದ್ದೇಶಿಸಿದೆ. ಈ ಉದ್ದೇಶಿತ ಮಾರ್ಗವು ರಂಗೇಗೌಡನದೊಡ್ಡಿ, ಬಿಲ್ಲಕೆಂಪನಹಳ್ಳಿ, ಈಗಲ್ ಟನ್, ಕೆ.ಐ.ಎ.ಡಿ.ಬಿ. ಕೈಗಾರಿಕಾ ಪ್ರದೇಶ ಹಂತ–1, ಶಾನಮಂಗಲ, ಅಬ್ಬನ ಕುಪ್ಪೆ, ಬಾನಂದೂರು ಮುಂತಾದ ಗ್ರಾಮಗಳಿಗೆ ಸೇರಿದ ಕೃಷಿ ಮತ್ತು ಕೃಷೇತರ ಜಮೀನಿನ ಸರಹದ್ದಿನ ಮೂಲಕ ಹಾದು ಹೋಗುವುದು.

(ಬಿ) ರಾಮನಗರ ತಾಲ್ಲೂಕಿನ ಬಿಡದಿ ಹೋಬಳಿಯ ರಂಗೇಗೌಡನದೊಡ್ಡಿಯಲ್ಲಿ ಪಿ.ಜಿ.ಸಿ.ಐ.ಎಲ್ ನಿರ್ಮಾಣ ಮಾಡುತ್ತಿರುವ 400/220 ಕೆ.ವಿ. ವಿದ್ಯುತ್ ಕೇಂದ್ರದಿಂದ ಕವಿಪ್ರನಿನಿಯು 220/220 ಕೆವಿ Multicircuit ಮಾರ್ಗವನ್ನು ಉದ್ದೇಶಿತ ಬಿಡದಿ–ಮಾಗಡಿ ಮಾರ್ಗಕ್ಕೆ ಸಂಪರ್ಕ

ಕಲ್ಪಿಸುವಂತೆ ಸುಮಾರು 1.705 ಕಿ.ಮೀ. ಉದ್ದದ ವಿದ್ಯುತ್ ಮಾರ್ಗ ನಿರ್ಮಾಣ ಮಾಡಲು ಉದ್ದೇಶಿಸಿದೆ. ಈ ಉದ್ದೇಶಿತ ಮಾರ್ಗವು ರಂಗೇಗೌಡನದೊಡ್ಡಿ, ಬಿಲ್ಲಕೆಂಪನಹಳ್ಳಿ ಗ್ರಾಮಗಳಿಗೆ ಸೇರಿದ ಕೃಷಿ ಮತ್ತು ಕೃಷೇತರ ಜಮೀನು, ಬಿ.ಎಂ.ಆರ್.ಡಿ.ಎ. ಹಾಗೂ ಮಂಚನಾಯಕನಹಳ್ಳಿ ಪಂಚಾಯತಿ ಭೂ ಪರಿವರ್ತಿತ ಬಡಾವಣೆ ಸರಹದ್ದಿನ ಮೂಲಕ ಹಾದು ಹೋಗುವುದು.

(ಸಿ) ಹಾಲಿ ಇರುವ ಕವಿಪ್ರನಿನಿಯ 220/66/11 ಕೆವಿ ವಿದ್ಯುತ್ ಉಪಕೇಂದ್ರದಲ್ಲಿ 220 ಕೆವಿ ಟರ್ಮಿನಲ್ ಬೇ–2 Nos ನಿರ್ಮಾಣ ಮಾಡುವುದು

**ಅಂದಾಜು ವೆಚ್ಚ : 1076 ಲಕ್ಷಗಳು :**

ಮೇಲ್ಕಂಡ ಯೋಜನೆಯನ್ನು ಅನುಷ್ಠಾನಗೊಳಿಸಲು ನಿಗಮವು ಭಾರತೀಯ ಟೆಲಿಗ್ರಾಫ್ ಕಾಯ್ದೆ 1885(13) ಅನ್ನು ಅಳವಡಿಸಿಕೊಂಡಿರುವ ಭಾರತೀಯ ವಿದ್ಯುತ್ ಕಾಯಿದೆ ನಿಯಮ 2003 (164)ರ ಅನ್ವಯ ಟೆಲಿಗ್ರಾಫ್ ಅಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರವನ್ನು ಕವಿಪ್ರನಿನಿ ಹೊಂದಿರುವುದು ಮತ್ತು ಅಧಿಕಾರವನ್ನು ಕವಿಪ್ರನಿನಿ ಚಲಾಯಿಸುತ್ತದೆ. ಸದರಿ ಯೋಜನೆಗಳಿಗೆ ಆಕ್ಷೇಪಣೆಗಳೇನಾದರು ಇದ್ದಲ್ಲಿ ಈ ಅಧಿಸೂಚನೆ ಪ್ರಕಟಿಸಿದ ಒಂದು ತಿಂಗಳೊಳಗೆ ಕಾರ್ಯನಿರ್ವಾಹಕ ಅಭಿಯಂತರು (ವಿದ್ಯುತ್). ಬೃಹತ್ ಕಾಮಗಾರಿ ರಾಮನಗರ ವಿಭಾಗ, ಕ.ವಿ.ಪ್ರ.ನಿ.ನಿ., ರಾಮನಗರಂ ಇವರಿಗೆ ಕಳುಹಿಸತಕ್ಕದ್ದು.

**ಕಾರ್ಯನಿರ್ವಾಹಕ ಇಂಜಿನಿಯರ್ (ವಿ),**

**ಪಿ.ಡಿ. 9** ಬೃಹತ್ ಕಾಮಗಾರಿ ರಾಮನಗರ ವಿಭಾಗ, ಕವಿಪ್ರನಿನಿ, ರಾಮನಗರ.

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ

## ಕಾರ್ಯನಿರ್ವಾಹಕ ಇಂಜಿನಿಯರ್ (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಪಿ.ಬಿ. ರೋಡ್, ಆರ್.ಹೆಚ್. ಬಿಲ್ಡಿಂಗ್, 2ನೇ ಮಹಡಿ, ದಾವಣಗೆರೆ

### ಪ್ರಕಟಣೆ

**ಸಂಖ್ಯೆ: ಕಾಇಂ(ವಿ)/ಬೃಕಾವಿ/ಸ.ಕಾ.ಇ(ವಿ)/ಕಿ.ಇಂ(ವಿ)/ದಾ/11–12/3286–87, ದಿನಾಂಕ: 28.12.2011.**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ವಿದ್ಯುತ್ ಸರಬರಾಜು ಕಾಯ್ದೆ 2003 ರ ಸೆಕ್ಷನ್ 67 ರಡಿಯಲ್ಲಿ ಯೋಜನೆಗಳನ್ನು ರೂಪಿಸಿದೆ ಮತ್ತು ಇದೇ ಕಾಯಿದೆ ಸೆಕ್ಷನ್ 67(2) ರನ್ವಯ ಸಾರ್ವಜನಿಕರಿಗೆ ಯೋಜನೆಗಳ ಮಾಹಿತಿ ನೀಡುವ ದೃಷ್ಟಿಯಿಂದ ಈ ಪ್ರಕಟಣೆಯನ್ನು ಇಲ್ಲಿ ಪ್ರಕಟಿಸಲಾಗಿದೆ.

1) **ಯೋಜನೆಯ ಹೆಸರು :** ಉದ್ದೇಶಿತ ಹೊನ್ನಾಳಿ ತಾಲ್ಲೂಕು ಸವಳಂಗದಲ್ಲಿ 66/11 ಕೆವಿ ವಿದ್ಯುತ್ ಉಪಕೇಂದ್ರಕ್ಕೆ 66 ಕೆವಿ ಒಂಟಿ ಕವಲು ಮಾರ್ಗ ಮತ್ತು ಡಿ.ಸಿ ಗೋಪುರಗಳ ನಿರ್ಮಾಣ ನ್ಯಾಮತಿಯಿಂದ ಸವಳಂಗದವರೆಗೆ 7.070 ಕಿ.ಮೀ. ವಿದ್ಯುತ್ ಮಾರ್ಗ ನಿರ್ಮಿಸುವುದು.

**ಉದ್ದೇಶಿತ ಮಾರ್ಗದ ಉದ್ದ :–** 7.070 ಕಿ.ಮಿ.

**ಅಂದಾಜು ವೆಚ್ಚ ರೂ :–** 434.96 ಲಕ್ಷಗಳು

**ಹಾದುಹೋಗುವ ಹಳ್ಳಿಗಳು :** ನ್ಯಾಮತಿ, ದೇವಿಕೊಪ್ಪ, ಸಲಬಾಲ, ಕೊಡ್ತು ಮತ್ತು ಸವಳಂಗ ಸರಹದ್ದಿನಲ್ಲಿ ಹಾದುಹೋಗುವುದು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಮೇಲೆ ತಿಳಿಸಿದ ಯೋಜನೆಗಳನ್ನು ಕಾರ್ಯಗತಗೊಳಿಸಲು 1885 ರ ಭಾರತೀಯ ಟೆಲಿಗ್ರಾಫ್ ಭಾಗ– III (ಕೇಂದ್ರಿಯ ಕಾಯ್ದೆ 1885ರ 13 ಅನ್ವಯ) ಅಧಿನಿಯಮ, ಟೆಲಿಗ್ರಾಫ್ ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ ಹಾಗೂ ಚಲಾಯಿಸುತ್ತದೆ. ಸದರಿ ಯೋಜನೆಗಳಿಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಪರಿಗಣನೆಗಾಗಿ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 30 ದಿನಗಳ ಒಳಗಾಗಿ ಕಾರ್ಯನಿರ್ವಾಹಕ ಅಭಿಯಂತರರು (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಆರ್.ಹೆಚ್. ಬಿಲ್ಡಿಂಗ್, ಎರಡನೇ ಮಹಡಿ, ಪಿ.ಬಿ. ರಸ್ತೆ, ದಾವಣಗೆರೆ–2 ಇವರಿಗೆ ಕಳುಹಿಸುವುದು.

**ಕಾರ್ಯನಿರ್ವಾಹಕ ಇಂಜಿನಿಯರ್ (ವಿ),**

**ಪಿ.ಡಿ. 8** ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ದಾವಣಗೆರೆ.

## KARNATAKA POWER TRANSMISSION CORPORATION LIMITED

## OFFICE OF THE EXECUTIVE ENGINEER ELECL, Tr. (Works) DIVISION, KPTCL, N.R. MOHALLA, MYSORE

### NOTIFICATION

**No. EEE/AEE(O)/MWD/MYS/2011-12/F-523/4414-18, Dated : 24-12-2011.**

Karnataka Power Transmission Corporation Limited has formulated a scheme under Section 67 of the Electricity act 2003 and the scheme is herewith published in pursuance of section 67(2) of the said Act, for information of the General public. Particulars of the scheme are as follows.

| | | |
|---|---|---|
| Name of the work | : | Construction of new 66 KV DC line from 66/11KV S/s D.K. Maidana to Chamundihill foot for a distance of 2.081 KMs and reconstruction of existing 66KV Kadakola to Chamundi hill Foot for a distance of 11.553 kms in Mysore Tq. & District. |
| Salient Features | : | To reduce line losses, Improvement of Voltage and meet future load growth in and around D.K. Maidana, Mysore city and to improve the redundancy. |
| Areas Passing through | : | D.K. Maidana, Sante maidana, chamundi hill foot limits. |
| Approximate length of the line | : | 2.081 Km. |
| Approximate Cost | : | 50.00 Lakhs. |

KPTCL shall have and exercise all powers under the section 164 of Indian Electricity Act 2003 read with para-(III) of the Indian Telegraph Act 1885 (10 to 19 & 19A of 1885) for implementation of the above said scheme. Objections if any regarding the above scheme shall be sent to the office of the undersigned within 15 days from the date of Publication of this notification for consideration by the corporation.

Executive Engineer Elecl.,
Tr (Works) Division, KPTCL
Mysore.

**P.D. No. 05**

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ,**

**ಕಾರ್ಯನಿರ್ವಾಹಕ ಅಭಿಯಂತರರು (ವಿ), ಬೃಹತ್ ಕಾಮಗಾರಿ ವಿಭಾಗ, ಕ.ವಿ.ಪ್ರ.ನಿ.ನಿ. ರಾಯಚೂರು**

**ಸಂಖ್ಯೆ : ಕಾನಿಅ(ವಿ) ಬೃಕಾವಿ/ರಾ/11–12/661–664, ದಿನಾಂಕ : 26–12–2011**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ವಿದ್ಯುತ್ ಸರಬರಾಜು ಕಾಯ್ದೆ 2003 ರ ಸೆಕ್ಷನ್ 67ರ ಅಡಿಯಲ್ಲಿ ಯೋಜನೆಗಳನ್ನು ರೂಪಿಸಿದೆ ಮತ್ತು ಇದೇ ಕಾಯ್ದೆ ಸೆಕ್ಷನ್ 67(2) ರನ್ವಯ ಸಾರ್ವಜನಿಕರಿಗೆ ಯೋಜನೆಗಳ ಮಾಹಿತಿ ನೀಡುವ ದೃಷ್ಟಿಯಿಂದ ಈ ಪ್ರಕರಣೆಯನ್ನು ಇಲ್ಲಿ ಪ್ರಕಟಿಸಲಾಗಿದೆ. ಯೋಜನೆಯ ವಿವರಗಳು ಈ ಕೆಳಕಂಡಂತಿವೆ.

| ಕ್ರ. ಸಂ. | ಕೆಲಸದ ಹೆಸರು | ಉದ್ದೇಶ | ಹಾದುಹೋಗುವ ಪ್ರದೇಶ | ಅಂದಾಜು ವೆಚ್ಚ (ರೂ. ಲಕ್ಷಗಳಲ್ಲಿ) |
|---|---|---|---|---|
| 1 | ಮುದ್ದಾಪೂರ : ಉದ್ದೇಶಿತ 110/11 ಕೆ.ವಿ. ಮುದ್ದಾಪೂರ ಉಪ ಕೇಂದ್ರಕ್ಕೆ ಪ್ರಸ್ತುತ ಸಿಂದನೂರು–ಹಟ್ಟಿ ಪ್ರಸರಣ ಮಾರ್ಗದಿಂದ 110 ಕೆವಿ ಒಂಟಿ ವಿದ್ಯುತ್ ಮಾರ್ಗದ ನಿರ್ಮಾಣ. | ಮುದ್ದಾಪೂರ ಹಾಗೂ ಸುತ್ತ ಮುತ್ತಲ ಪ್ರದೇಶದ ವೋಲ್ಟೇಜ್ ಸ್ಥಿತಿ ಉತ್ತಮ ಪಡಿಸಲು ಮತ್ತು ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸುವ ಸಲುವಾಗಿ | ಮುದ್ದಾಪೂರ, ಎಸ್.ಎನ್. ಕ್ಯಾಂಪ್ ವರಗೆ | 500.00 |
| 2 | ಬಲಟ್ಟಿಗಿ : ಉದ್ದೇಶಿತ 110/11 ಕೆವಿ ಬಲಟ್ಟಿಗೆ ಉಪ ಕೇಂದ್ರಕ್ಕೆ ಉದ್ದೇಶಿತ 220 ಕೆವಿ ಸ್ವೀಕರಣ ಕೇಂದ್ರ ಮಲ್ಲಟದಿಂದ 110 ಕೆವಿ ಒಂಟಿ ವಿದ್ಯುತ್ ಮಾರ್ಗದ ನಿರ್ಮಾಣ. | ಬಲಟ್ಟಿಗಿ ಹಾಗೂ ಸುತ್ತ ಮುತ್ತಲ ಪ್ರದೇಶದ ವೋಲ್ಟೇಜ್ ಸ್ಥಿತಿ ಉತ್ತಮ ಪಡಿಸಲು ಮತ್ತು ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸುವ ಸಲುವಾಗಿ | ಮಲ್ಲಟ, ನಿಗದೋಣಿ ಬಲಟ್ಟಿಗಿ ವರಗೆ | 600.00 |
| 3 | ಸಿರವಾರ–ಆಲ್ದೂಡ್ : ಉದ್ದೇಶಿತ 220/110/11 ಕೆವಿ ಮಲ್ಲಟ ವಿದ್ಯುತ್ ವಿತರಣ ಕೇಂದ್ರದಿಂದ ಪ್ರಸ್ತುತವಿರುವ 110 ಕೆವಿ ಸಿರವಾರ–ಆಲ್ದೂಡ್ : ಒಂಟಿ ಮಾರ್ಗಕ್ಕೆ 110 ಕೆವಿ ಜೋಡಣೆ ಮಾರ್ಗದ ನಿರ್ಮಾಣ. | ಸಿರವಾರದಿಂದ ಆಲ್ದೂಡ್ ರವರೆಗೆ ಹಾಗೂ ಸುತ್ತ ಮುತ್ತಲ ಪ್ರದೇಶದ ವೋಲ್ಟೇಜ್ ಸ್ಥಿತಿ ಉತ್ತಮ ಪಡಿಸಲು ಮತ್ತು ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸುವ ಸಲುವಾಗಿ | ನವಲಕಲ್, ಮಲ್ಲಟ್ ರವರಗೆ | 350.00 |
| 4 | ಬ್ಯಾಗವಾಟ : ಉದ್ದೇಶಿತ 220/110/11 ಕೆವಿ ಮಲ್ಲಟ ವಿದ್ಯುತ್ ವಿತರಣ ಕೇಂದ್ರದಿಂದ | ಬ್ಯಾಗವಾಟ ಹಾಗೂ ಸುತ್ತ ಮುತ್ತಲ ಪ್ರದೇಶದ ವೋಲ್ಟೇಜ್ ಸ್ಥಿತಿ ಉತ್ತಮ | ಬ್ಯಾಗವಾಟ, ನಕ್ಕುಂದಿ | 350.00 |

| | | | | |
|---|---|---|---|---|
| | ಪ್ರಸ್ತುತವಿರುವ 110/11 ಕೆವಿ ವಿದ್ಯುತ್ ಕೇಂದ್ರ ಬ್ಯಾಗವಾಟಕ್ಕೆ 110 ಕೆವಿ ಜೋಡಣೆ ಮಾರ್ಗದ (ಜೋಡಿ ಮಾರ್ಗ) ನಿರ್ಮಾಣ | ಪಡಿಸಲು ಮತ್ತು ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸುವ ಸಲುವಾಗಿ | ಬಾಗಲವಾಡ, ಹಿರೇಬದ್ದುರುದಿನ್ನಿ, ದೇವತಕಲ್, ಗುಡ್‌ದಿನ್ನಿ, ಮಲ್ಲಟ | |
| 5. | ಕವತಾಳ್ : ಉದ್ದೇಶಿತ 220/110/11 ಕೆವಿ ಮಲ್ಲಟ್ ವಿದ್ಯುತ್ ವಿತರಣ ಕೇಂದ್ರದಿಂದ ಪ್ರಸ್ತುತವಿರುವ 110/11 ಕೆವಿ ವಿದ್ಯುತ್ ಕೇಂದ್ರ ಕವತಳಕ್ಕೆ 110 ಕೆವಿ ಒಂಟಿ ಜೋಡಣೆ ಮಾರ್ಗದ ನಿರ್ಮಾಣ | ಕವತಾಳ್ ಹಾಗೂ ಸುತ್ತ ಮುತ್ತಲ ಪ್ರದೇಶದ ವೋಲ್ಟೇಜ್ ಸ್ಥಿತಿ ಉತ್ತಮ ಪಡಿಸಲು ಮತ್ತು ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸುವ ಸಲುವಾಗಿ | ಕವತಾಳ್, ಹೀರೇಹಣಿಗಿ, ಪತಾಪೂರ, ಗೋವಾಲದಿನ್ನಿ, ಮಲ್ಲಟವರಗೆ | 400.00 |

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಮೇಲೆ ತಿಳಿಸಿದ ಯೋಜನೆಗಳನ್ನು ಅಧಿನಿಯಮ ಟೆಲಿಗ್ರಾಫ್ ಹೊಂದಿರುವ 1885 ರ ಭಾರತೀಯ ಟೆಲಿಗ್ರಾಫ್ ಭಾಗ-3 (ಕೇಂದ್ರಿಯ ಕಾಯ್ದೆ 1885ರ 13 ಅನ್ವಯ) ಯೋಜನೆಗಳಿಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಪರಿಗಣನಿಗಾಗಿ ಆಕ್ಷೇಪಣೆಗಳನ್ನು ಈ ಪ್ರಕರಣೆ ಪ್ರಕಟವಾದ ಎರಡು ತಿಂಗಳ ಒಳಗಾಗಿ ಕಾರ್ಯನಿರ್ವಾಹಕ ಅಭಿಯಂತರರು (ವಿ) ಬೃಹತ್ ಕಾಮಗಾರಿ ವಿಭಾಗ ಕವಿಪ್ರನಿನಿ. ರಾಯಚೂರು ಇವರಿಗೆ ಲಿಖಿತ ರೂಪದಲ್ಲಿ ಸಲ್ಲಿಸಬೇಕಾಗಿ ವಿನಂತಿ ಹಾಗೂ ತದ ನಂತರ ಬರುವ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲವೆಂದು ಈ ಮೂಲಕ ತಿಳಿಯಪಡಿಸುತ್ತಿದ್ದೇವೆ.

**ಕಾರ್ಯ ನಿರ್ವಾಹಕ ಇಂಜಿನಿಯರ್ (ವಿ)**

**ಪಿ.ಡಿ. 6** ಬೃಹತ್ ಕಾಮಗಾರಿ ವಿಭಾಗ, ಕ.ವಿ.ಪ್ರ.ನಿ.ನಿ. ರಾಯಚೂರು.

## ಕೃಷಿ ಮಾರಾಟ ಇಲಾಖೆ

## ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 2ನೇ ರಾಜಭವನ ರಸ್ತೆ, ಬೆಂಗಳೂರು

### ಅಧಿಸೂಚನೆ

**ಸಂ: ಕೃಮಾಇ/28/ನಿಯವಿ/2011, ಬೆಂಗಳೂರು, ದಿ:29/12/2011**

ಸವದತ್ತಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಯರಗಟ್ಟಿ ಗ್ರಾಮದ ಪರಿಮಿತಿಯೊಳಗಿನ ಪ್ರದೇಶವನ್ನು ಉಪ ಮಾರುಕಟ್ಟೆ ಎಂದು ಹಾಗೂ ಯರಗಟ್ಟಿ ಗ್ರಾಮದ ಬ್ಲಾಕ್ ನಂ.3ರ ಕ್ಷೇತ್ರ 2 ಎಕರೆ ಪ್ರದೇಶವನ್ನು ಉಪ ಮಾರುಕಟ್ಟೆ ಪ್ರಾಂಗಣವೆಂದು ಘೋಷಿಸಲಾಗಿದೆ.

ಪ್ರಸ್ತುತ ಸವದತ್ತಿ ಮಾರುಕಟ್ಟೆ ಸಮಿತಿಯು ಯರಗಟ್ಟಿ ಗ್ರಾಮದ ಬ್ಲಾಕ್ ನಂ.2/1ರ ಕ್ಷೇತ್ರ 6 ಎಕರೆ 19 ಗುಂಟೆ 6.5 ಆಣೆ, ಬ್ಲಾಕ್ ನಂ.9ರ 3 ಎಕರೆ 31 ಗುಂಟೆ, ಬ್ಲಾಕ್ ನಂ.10ರ 6 ಎಕರೆ 8 ಗುಂಟೆ, ಬ್ಲಾಕ್ ನಂ.8/1ರ 6 ಎಕರೆ 17 ಗುಂಟೆ ಹಾಗೂ ಬ್ಲಾಕ್ ನಂ.8/2ರ ಕ್ಷೇತ್ರ 6 ಎಕರೆ 16 ಗುಂಟೆ, ಒಟ್ಟು 29 ಎಕರೆ 11 ಗುಂಟೆ 6.5 ಆಣೆ ಜಮೀನನ್ನು ಭೂಸ್ವಾಧೀನ ಮೂಲಕ ಪಡೆದು ಮಾರುಕಟ್ಟೆ ಸೌಲಭ್ಯಗಳನ್ನು ಒದಗಿಸಿ ಅಭಿವೃದ್ಧಿಪಡಿಸಿರುವುದರಿಂದ ಹಾಲಿ ವ್ಯಾಪಾರ ವಹಿವಾಟು ನಡೆಯುತ್ತಿರುವ ಉಪ ಮಾರುಕಟ್ಟೆ ಪ್ರಾಂಗಣವನ್ನು ಅಪವರ್ಜಿಸಿ ಅಭಿವೃದ್ಧಿಪಡಿಸಿದ ಪ್ರದೇಶದ ವಿವರವನ್ನು ಅನುಸೂಚಿಯಲ್ಲಿ ನೀಡಿ ಅದನ್ನು ಉಪ ಮಾರುಕಟ್ಟೆ ಪ್ರಾಂಗಣವೆಂದು ಘೋಷಿಸಲು ಅಧಿಸೂಚನೆ ಸಂ:ಕೃಮಾಇ/28/ನಿಯವಿ/2011, ದಿ:30/07/2011 ರಲ್ಲಿ ಉದ್ದೇಶವನ್ನು ಪ್ರಕಟಿಸಿ ಆಕ್ಷೇಪಣೆ ಹಾಗೂ ಸಲಹೆಗಳನ್ನು ಆಹ್ವಾನಿಸಲಾಗಿತ್ತು. ಸದರಿ ಅಧಿಸೂಚನೆಯನ್ನು ಕನ್ನಡಪ್ರಭ ದಿನ ಪತ್ರಿಕೆಯಲ್ಲಿ ದಿ:03/08/2011 ಹಾಗೂ ಕರ್ನಾಟಕ ರಾಜ್ಯ ಪತ್ರದಲ್ಲಿ ದಿ:20/10/2011 ರಲ್ಲಿ ಪ್ರಕಟಗೊಳಿಸಲಾಗಿತ್ತು. ಸದರಿ ಅಧಿಸೂಚನೆಗೆ ಸಂಬಂಧಿಸಿದಂತೆ ಯಾವುದೇ ಆಕ್ಷೇಪಣೆ, ಸಲಹೆಗಳು ಸ್ವೀಕೃತವಾಗಿರುವುದಿಲ್ಲ.

ಆದ್ದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 6(3)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೃಷಿ ಮಾರಾಟ ನಿರ್ದೇಶಕನಾದ ವಿ.ಬಿ.ಪಾಟೀಲ್ ಆದ ನಾನು ಯರಗಟ್ಟಿ ಗ್ರಾಮದಲ್ಲಿ ಹಾಲಿ ವ್ಯಾಪಾರ ನಡೆಯುತ್ತಿರುವ ಉಪ ಮಾರುಕಟ್ಟೆ ಪ್ರಾಂಗಣವನ್ನು ಅಪವರ್ಜಿಸಿ ಈ ಕೆಳಕಂಡ ಅನುಸೂಚಿಯಲ್ಲಿ ನಿಗಧಿಪಡಿಸಿದ ಪ್ರದೇಶವನ್ನು **ಉಪ ಮಾರುಕಟ್ಟೆ ಪ್ರಾಂಗಣ**ವೆಂದು ಘೋಷಿಸಿದ್ದೇನೆ.

### ಅನುಸೂಚಿ

ಯರಗಟ್ಟಿ ಗ್ರಾಮದ ಬ್ಲಾಕ್ ನಂ.2/1ರ ಕ್ಷೇತ್ರ 6 ಎಕರೆ 19 ಗುಂಟೆ 6.5 ಆಣೆ, ಬ್ಲಾಕ್ ನಂ.9ರ 3 ಎಕರೆ 31 ಗುಂಟೆ, ಬ್ಲಾಕ್ ನಂ.10ರ 6 ಎಕರೆ 8 ಗುಂಟೆ, ಬ್ಲಾಕ್ ನಂ.8/1ರ 6 ಎಕರೆ 17 ಗುಂಟೆ ಹಾಗೂ ಬ್ಲಾಕ್ ನಂ.8/2ರ ಕ್ಷೇತ್ರ 6 ಎಕರೆ 16 ಗುಂಟೆ ಒಟ್ಟು 29 ಎಕರೆ 11 ಗುಂಟೆ 6.5 ಆಣೆ ಜಮೀನಿನ ಈ ಕೆಳಕಂಡ ಸೀಮಾಬದ್ದ ಸ್ಥಳ.

| | | |
|---|---|---|
| ಪೂರ್ವಕ್ಕೆ | : | ಮುಸ್ಲಿಂ ಸಮಾಜದ ಸ್ಮಶಾನ, ಸವದತ್ತಿ ಗೋಕಾಕ್ ರಾಜ್ಯ ಹೆದ್ದಾರಿ. |
| ಪಶ್ಚಿಮಕ್ಕೆ | : | ಯರಗಟ್ಟಿ ಗ್ರಾಮದ ವಿವಿಧ ರೈತರ ಜಮೀನುಗಳು. |

| | | |
|---|---|---|
| ಉತ್ತರಕ್ಕೆ | : | ಯರಗಟ್ಟಿ ಗ್ರಾಮದ ವಿವಿಧ ಸಾರ್ವಜನಿಕರ ನಿವೇಶನಗಳು ಹಾಗೂ ಮನೆಗಳು. |
| ದಕ್ಷಿಣಕ್ಕೆ | : | ಯರಗಟ್ಟಿ ಗ್ರಾಮದ ವಿವಿಧ ರೈತರ ಜಮೀನುಗಳು. |

**ವಿ.ಬಿ.ಪಾಟೀಲ್**

ಪಿ.ಆರ್. ನಂ. 1414 ನಿರ್ದೇಶಕರು

## ಕೃಷಿ ಮಾರಾಟ ಇಲಾಖೆ

## ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 2ನೇ ರಾಜಭವನ ರಸ್ತೆ, ಬೆಂಗಳೂರು

### ಅಧಿಸೂಚನೆ

**ಸಂ:ಕೃಮಾಇ/190/ನಿಯವಿ/2009, ಬೆಂಗಳೂರು, ದಿನಾಂಕ:29/12/2011**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 145(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಅಧಿಸೂಚನೆ ಸಂ:ಸಇ/56/ಎಂಆರ್ಇ(1)/2010, ದಿನಾಂಕ:16/12/2011ರ ಮೂಲಕ ಜೇವರ್ಗಿ ತಾಲ್ಲೂಕು ಒಳಗೊಂಡ ಜೇವರ್ಗಿ ಮಾರುಕಟ್ಟೆ ಕ್ಷೇತ್ರಕ್ಕೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯನ್ನು ಸ್ಥಾಪಿಸಿದೆ.

ಮತ್ತು ಆ ಕಾರಣ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ(ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 6(2)ರಲ್ಲಿನ ವಿಧಾನವನ್ನು ಅನುಸರಿಸಿ ಅಧಿಸೂಚನೆ ಸಂ (1)ಎಂಡಿ/ಇಎಂ/ಸಿಆರ್-320/ಆರ್&ಇ/78-79,ದಿ:30/09/1978 (2)ಕೃಮಾಇ/15/ನಿಯವಿ/89, ದಿ:25/08/1989ನ್ನು ಮಾರ್ಪಡಿಸಿ, ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ವಿ.ಬಿ.ಪಾಟೀಲ್ ಆದ ನಾನು, ಜೇವರ್ಗಿ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟ ಈ ಕೆಳಗೆ ನಮೂದಿಸಿದ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಜೇವರ್ಗಿ ನಗರಸಭಾ ಪರಿಮಿತಿಯೊಳಗಿನ ಪ್ರದೇಶವನ್ನು **ಮಾರುಕಟ್ಟೆ**'ಎಂದು ಮತ್ತು ಈ ಕೆಳಗಿನ ಅನುಸೂಚಿ ಎ ಯಲ್ಲಿ ನಿರ್ಧಿಷ್ಟಪಡಿಸಿದ ಸ್ಥಳವನ್ನು **ಮಾರುಕಟ್ಟೆ ಪ್ರಾಂಗಣ** ಎಂದು, ಯಡ್ರಾಮಿ ಗ್ರಾಮದ ಪರಿಮಿತಿಯೊಳಗಿನ ಪ್ರದೇಶವನ್ನು "**ಉಪ ಮಾರುಕಟ್ಟೆ**" ಎಂದು ಹಾಗೂ ಅನುಸೂಚಿ-ಬಿ ಯಲ್ಲಿ ನಿರ್ಧಿಷ್ಟಪಡಿಸಿದ ಸ್ಥಳವನ್ನು "**ಉಪ ಮಾರುಕಟ್ಟೆ ಪ್ರಾಂಗಣ**" ವೆಂದು ಈ ಮೂಲಕ ಘೋಷಿಸಿದ್ದೇನೆ.

### ಕೃಷಿ ಉತ್ಪನ್ನಗಳು

**1. ಜಾನುವಾರುಗಳು, 2. ಮೇಕೆಗಳು, 3.ಕುರಿಗಳು, 4.ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), 5. ಎಲ್ಲಾ ಹೂ.ಗಳು, 6.ಸಜ್ಜೆ, 7.ಜವೆ ಗೋಧಿ, 8.ಜೋಳ, 9.ಕಂಬು, 10.ಮೆಕ್ಕೆಜೋಳ, 11.ನವಣೆ, 12.ಭತ್ತ, 13.ರಾಗಿ, 14.ಅಕ್ಕಿ 15.ಸಾಮೆ (ಸಾವೆ), 16.ಗೋಧಿ, 17.ಅಂಟುವಾಳ, 18.ಬೊಂಬು, 19.ಬೆತ್ತ, 20.ಹಿಪ್ಪೆಬೀಜ, 21.ಹೊಂಗೇಬೀಜ, 22.ಬೇವಿನಬೀಜ, 23.ಸೀಗೇಕಾಯಿ, 24.ಹುಣಸೇಹಣ್ಣು, 25.ಹುಣಸೇಬೀಜ, 26.ಸೇಬು, 27.ಬಾಳೆಹಣ್ಣು, 28.ಬೋರೆಹಣ್ಣು, 29.ಹುಳಿಹಣ್ಣುಗಳು, 30.ಚಕ್ಕೋತನ ಹಣ್ಣು, 31.ಪೇರಲೆಹಣ್ಣು (ಸೀಬೆಹಣ್ಣು), 32.ದ್ರಾಕ್ಷಿ, 33.ಹಲಸಿನಹಣ್ಣು, 34.ಜಂಬುನೇರಳೆಹಣ್ಣು, 35.ನಿಂಬೆಹಣ್ಣು, 36.ಕರಬೂಜ, 37.ಮಾವಿನಹಣ್ಣು, 38.ಮೂಸಂಬಿ, 39.ಮರಸೇಬು, 40.ಪೈನಾಪಲ್ (ಅನಾನಸ್), 41.ಪಪ್ಪಾಯಿಹಣ್ಣು (ಪರಂಗಿಹಣ್ಣು), 42.ದಾಳಿಂಬೆಹಣ್ಣು, 43.ಸಪೋಟಾ, 44.ಸಿದ್ದೋಟ, 45.ಕಿತ್ತಳೆ, 46.ಕಲ್ಲಂಗಡಿ, 47.ನೆಲಗಡಲೆ(ಶೇಂಗಾ) (ಕಾಯಿ ಮತ್ತು ಬೀಜ), 48.ಹರಳುಬೀಜ, 49.ಹತ್ತಿಬೀಜ, 50.ಅಗಸೆಬೀಜ, 51.ಸಾಸುವೆ, 52.ಹುಚ್ಚೆಳ್ಳು, 53.ಕುಸುಬೆ, 54.ಎಳ್ಳು, 55.ಸೂರ್ಯಕಾಂತಿಬೀಜ, 56.ಸೋಯಾಬಿನ್, 57.ಅಡಿಕೆ, 58.ಗೋಡಂಬಿಬೀಜ, 59.ಒಣಮೆಣಸಿನಕಾಯಿ, 60.ತೆಂಗಿನಕಾಯಿ, 61.ಕೊಬ್ಬರಿ, 62.ಕೊತ್ತಂಬರಿಬೀಜ (ಧನಿಯಾ), 63.ಬೆಳ್ಳುಳ್ಳಿ, 64.ಶುಂಠಿ, 65.ಮೆಂತ್ಯ, 66.ಕಾಳುಮೆಣಸು, 67.ಅರಿಶಿನ, 68.ಅಲಸಂದೆ(ಇಡೀ ಮತ್ತು ಒಡೆದ), 69.ಅವರೆ (ಇಡೀ ಮತ್ತು ಒಡೆದ), 70.ಕಡಲೆ (ಇಡೀ ಮತ್ತು ಒಡೆದ), 71.ಉದ್ದು (ಇಡೀ ಮತ್ತು ಒಡೆದ), 72.ಬುಲ್ಲರ್ (ಇಡೀ ಮತ್ತು ಒಡೆದ), 73.ಹೆಸರು (ಇಡೀ ಮತ್ತು ಒಡೆದ), 74.ಹುರುಳಿ, 75.ಲಾಕ್ (ಇಡೀ ಮತ್ತು ಒಡೆದ), 76.ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), 77.ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), 78.ಬಟಾಣಿ, 79.ತೊಗರಿ (ಇಡೀ ಮತ್ತು ಒಡೆದ), 80.ಮೋತ್ (ಇಡೀ ಮತ್ತು ಒಡೆದ), 81.ಎಲ್ಲಾ ತರಕಾರಿಗಳು (ಸೊಪ್ಪುಗಳು ಸೇರಿಸಿ)(ಗರ್ಕಿನ್ ಹೊರತುಪಡಿಸಿ), 82.ಕಾಯಿಗಳು, 83.ಹಸಿರುಮೆಣಸಿನಕಾಯಿ, 84.ಈರುಳ್ಳಿ, 85.ಆಲೂಗಡ್ಡೆ, 86.ಸುವರ್ಣಗೆಡ್ಡೆ, 87.ಸಿಹಿಗೆಣಸು (ಗೆಣಸು), 88.ಟೊಮ್ಯಾಟೋ, 89.ವೀಳ್ಯೆದೆಲೆ, 90.ಬೆಲ್ಲ, 91.ತೆಂಗಿನಕಡ್ಡಿ, 92.ಒಣದ್ರಾಕ್ಷಿ.**

### ಅನುಸೂಚಿ-ಎ

ಜೇವರ್ಗಿ ನಗರಸಭಾ ಪರಿಮಿತಿಯೊಳಗೆ ಮುಖ್ಯ ರಸ್ತೆಯ ಪ್ರದೇಶದ ಈ ಕೆಳಗಿನ ಸೀಮಾಬದ್ಧ ಸ್ಥಳ:-

| | | |
|---|---|---|
| ಪೂರ್ವಕ್ಕೆ | : | ಅಂಚೆ ಕಛೇರಿ ಮತ್ತ ಪೋಲಿಸ್ ಠಾಣೆ. |
| ಪಶ್ಚಿಮಕ್ಕೆ | : | ಲಕ್ಷ್ಮೀ ದೇವಸ್ಥಾನ ಹಾಗೂ ಶಂಕರಸ್ವಾಮಿ ಮಾತಾ. |
| ಉತ್ತರಕ್ಕೆ | : | ವಸತಿ ಪ್ರದೇಶ ಮತ್ತು ಅಂಗಡಿಗಳು. |
| ದಕ್ಷಿಣಕ್ಕೆ | : | ಅಂಗಡಿ ಮತ್ತು ವಸತಿ ಪ್ರದೇಶ. |

ಅನುಸೂಚಿ–ಬಿ

ಯಡ್ರಾಮಿ ಗ್ರಾಮದ ಪರಿಮಿತಿಯೊಳಗೆ ಸಂತೆ ನಡೆಯುವ ಈ ಕೆಳಗಿನ ಸೀಮಾಬದ್ಧ ಸ್ಥಳ:–

| | | |
|---|---|---|
| ಪೂರ್ವಕ್ಕೆ | : | ಅಂಗಡಿಗಳು, ಮರಗಮ್ಮನ ಗುಡಿ ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರ. |
| ಪಶ್ಚಿಮಕ್ಕೆ | : | ಅಂಗಡಿಗಳು, ಮರಗಮ್ಮನ ಗುಡಿ, ಸಿನಿಮಾ ಮಂದಿರ, ಪೋಲಿಸ್ ವಸತಿ ಗೃಹ, ಪೋಲಿಸ್ ಠಾಣೆ, ಸರ್ಕಾರಿ ರಸ್ತೆ, ಎಸ್.ಆರ್.ಡಬ್ಲ್ಯೂ.ಇ ವಾಟರ್ ಟ್ಯಾಂಕ್ ಮತ್ತು ನಾಡ ತಹಸೀಲ್ ಕಛೇರಿ. |
| ಉತ್ತರಕ್ಕೆ | : | ಹನುಮಾನ್ ಮಂದಿರ, ಟಾಕಿಯಾ ಜಿನ್ನಿಂಗ್ ಫ್ಯಾಕ್ಟರಿ. |
| ದಕ್ಷಿಣಕ್ಕೆ | : | ಬಸ್ ನಿಲ್ದಾಣ ಮತ್ತು ಸಿಂಡಿಕೇಟ್ ಬ್ಯಾಂಕ್. |

**ವಿ.ಬಿ.ಪಾಟೀಲ್**

ಪಿ.ಆರ್. ನಂ. **1415** ನಿರ್ದೇಶಕರು

## ಕೃಷಿ ಮಾರಾಟ ಇಲಾಖೆ

## ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 2ನೇ ರಾಜಭವನ ರಸ್ತೆ, ಬೆಂಗಳೂರು

### ಅಧಿಸೂಚನೆ

**ಸಂ:ಕೃಮಾಇ/190/ನಿಯವಿ/2009, ಬೆಂಗಳೂರು, ದಿನಾಂಕ:29/12/2011**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 145(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಅಧಿಸೂಚನೆ ಸಂ:ಸಇ/56/ಎಂಆರ್ಇ(1)/2010, ದಿನಾಂಕ:16/12/2011ರ ಮೂಲಕ ಗುಲ್ಬರ್ಗಾ, ಅಫಜಲಪುರ, ಅಳಂದ ತಾಲ್ಲೂಕು ಒಳಗೊಂಡ ಗುಲ್ಬರ್ಗಾ ಮಾರುಕಟ್ಟೆ ಕ್ಷೇತ್ರಕ್ಕೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯನ್ನು ಸ್ಥಾಪಿಸಿದೆ.

ಮತ್ತು ಆ ಕಾರಣ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ(ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 6(2)ರಲ್ಲಿನ ವಿಧಾನವನ್ನು ಅನುಸರಿಸಿ ಅಧಿಸೂಚನೆ ಸಂ (1)ಎಂಡಿ/32846–ಆರ್ಎಂ1/68–69, ದಿ:20/01/1969, (2)ಎಂಡಿ/ಆರ್ಜಿಎಸ್/ಸಿಆರ್–160/ಆರ್&ಇ/75–76, ದಿ:15/04/1978, (3)ಎಂಡಿ/331/77–81/ಆರ್ಎಂಐ/71–72, ದಿ:08/11/1971, (4)ಎಂಡಿ/ಇಎಂ/ಸಿಆರ್320/ಆರ್&ಇ/78–79, ದಿ:30/09/1978, (5)ರಾಮಾಇ/202/ನಿಯವಿ/88, ದಿ:01–04/03/1989, (6)ಕೃಮಾಇ/307/ನಿಯವಿ/88, ದಿ:25/08/1989, (7)ಎಂಡಿ/ಇಎಂ/ಸಿಆರ್–460/ಆರ್&ಇ/79–80, ದಿ:–/08/1979 (ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕ:20/09/1979), (8)ಕೃಮಾಇ/325/ನಿಯವಿ/2006, ದಿ:07/05/2007ನ್ನು ಮಾರ್ಪಡಿಸಿ, ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ವಿ.ಬಿ.ಪಾಟೀಲ್ ಆದ ನಾನು, ಗುಲ್ಬರ್ಗಾ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟ ಈ ಕೆಳಗೆ ನಮೂದಿಸಿದ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಗುಲ್ಬರ್ಗಾ ನಗರಸಭಾ ಪರಿಮಿತಿಯೊಳಗಿನ ಪ್ರದೇಶವನ್ನು **ಮಾರುಕಟ್ಟೆ**'ಎಂದು ಮತ್ತು ಈ ಕೆಳಗಿನ ಅನುಸೂಚಿ ಎ ಯಲ್ಲಿ ನಿರ್ಧಿಷ್ಟಪಡಿಸಿದ ಸ್ಥಳವನ್ನು **ಮಾರುಕಟ್ಟೆ ಪ್ರಾಂಗಣ** ಎಂದು, ಅನುಸೂಚಿ ಬಿ ಯಲ್ಲಿ ನಿರ್ಧಿಷ್ಟಪಡಿಸಿದ ಸ್ಥಳವನ್ನು **ಮಾರುಕಟ್ಟೆ ಉಪ ಪ್ರಾಂಗಣ**ವೆಂದು ಹಾಗೂ ಅಳಂದ, ಅಫಜಲಪುರ, ಕಮಲಾಪುರ, ಮಾದನಹಿಪ್ಪರಗಾ, ದೇವಲ ಗಾಣಗಾಪುರ, ಕರಜಗಿ ಪಟ್ಟಣ/ಗ್ರಾಮ ಪರಿಮಿತಿಯೊಳಗಿನ ಪ್ರದೇಶಗಳನ್ನು "**ಉಪ ಮಾರುಕಟ್ಟೆ**" ಎಂದು ಹಾಗೂ ಅನುಸೂಚಿ–ಸಿ,ಡಿ,ಇ,ಎಫ್,ಜಿ,ಹೆಚ್ ಗಳಲ್ಲಿ ನಿರ್ಧಿಷ್ಟಪಡಿಸಿದ ಸ್ಥಳಗಳನ್ನು "**ಉಪ ಮಾರುಕಟ್ಟೆ ಪ್ರಾಂಗಣ**" ಗಳೆಂದು ಈ ಮೂಲಕ ಘೋಷಿಸಿದ್ದೇನೆ.

### ಕೃಷಿ ಉತ್ಪನ್ನಗಳು

**1. ಜಾನುವಾರುಗಳು, 2. ಮೇಕೆಗಳು, 3.ಕುರಿಗಳು, 4.ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), 5. ಎಲ್ಲಾ ಹೂ.ಗಳು, 6.ಸಜ್ಜೆ, 7.ಜವೆ ಗೋಧಿ, 8.ಜೋಳ, 9.ಕಂಬು, 10.ಮೆಕ್ಕೆಜೋಳ, 11.ನವಣೆ, 12.ಭತ್ತ, 13.ರಾಗಿ, 14.ಅಕ್ಕಿ 15.ಸಾಮೆ (ಸಾವೆ), 16.ಗೋಧಿ, 17.ಅಂಟುವಾಳ, 18.ಬೊಂಬು, 19.ಬೆತ್ತ, 20.ಹಿಪ್ಪೆಬೀಜ, 21.ಹೊಂಗೇಬೀಜ, 22.ಬೇವಿನಬೀಜ, 23.ಸೀಗೇಕಾಯಿ, 24.ಹುಣಸೇಹಣ್ಣು, 25.ಹುಣಸೇಬೀಜ, 26.ಸೇಬು, 27.ಬಾಳೆಹಣ್ಣು, 28.ಬೋರೆಹಣ್ಣು, 29.ಹುಳಿಹಣ್ಣುಗಳು, 30.ಚಕ್ಕೋತನ ಹಣ್ಣು, 31.ಪೇರಲೆಹಣ್ಣು (ಸೀಬೆಹಣ್ಣು), 32.ದ್ರಾಕ್ಷಿ, 33.ಹಲಸಿನಹಣ್ಣು, 34.ಜಂಬುನೇರಳೆಹಣ್ಣು, 35.ನಿಂಬೆಹಣ್ಣು, 36.ಕರಬೂಜ, 37.ಮಾವಿನಹಣ್ಣು, 38.ಮೂಸಂಬಿ, 39.ಮರಸೇಬು, 40.ಪೈನಾಪಲ್ (ಅನಾನಸ್), 41.ಪಪ್ಪಾಯಿಹಣ್ಣು (ಪರಂಗಿಹಣ್ಣು), 42.ದಾಳಿಂಬೆಹಣ್ಣು, 43.ಸಪೋಟಾ, 44.ಸಿದ್ದೋಟ, 45.ಕಿತ್ತಳೆ, 46.ಕಲ್ಲಂಗಡಿ, 47.ನೆಲಗಡಲೆ(ಶೇಂಗಾ) (ಕಾಯಿ ಮತ್ತು ಬೀಜ), 48.ಹರಳುಬೀಜ, 49.ಹತ್ತಿಬೀಜ, 50.ಅಗಸೆಬೀಜ, 51.ಸಾಸುವೆ, 52.ಹುಚ್ಚೆಳ್ಳು, 53.ಕುಸುಬೆ, 54.ಎಳ್ಳು, 55.ಸೂರ್ಯಕಾಂತಿಬೀಜ, 56.ಸೋಯಾಬಿನ್, 57.ಅಡಿಕೆ, 58.ಗೋಡಂಬಿಬೀಜ, 59.ಒಣಮೆಣಸಿನಕಾಯಿ, 60.ತೆಂಗಿನಕಾಯಿ, 61.ಕೊಬ್ಬರಿ, 62.ಕೊತ್ತಂಬರಿಬೀಜ (ಧನಿಯಾ), 63.ಬೆಳ್ಳುಳ್ಳಿ, 64.ಶುಂಠಿ, 65.ಮೆಂತ್ಯ, 66.ಕಾಳುಮೆಣಸು, 67.ಅರಿಶಿನ, 68.ಅಲಸಂದೆ(ಇಡೀ ಮತ್ತು ಒಡೆದ), 69.ಅವರೆ (ಇಡೀ ಮತ್ತು ಒಡೆದ), 70.ಕಡಲೆ (ಇಡೀ ಮತ್ತು ಒಡೆದ), 71.ಉದ್ದು (ಇಡೀ ಮತ್ತು ಒಡೆದ), 72.ಬುಲ್ಲರ್ (ಇಡೀ ಮತ್ತು ಒಡೆದ), 73.ಹೆಸರು (ಇಡೀ ಮತ್ತು ಒಡೆದ), 74.ಹುರುಳಿ, 75.ಲಾಕ್ (ಇಡೀ ಮತ್ತು ಒಡೆದ),**

**76.ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), 77.ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), 78.ಬಟಾಣಿ, 79.ತೊಗರಿ (ಇಡೀ ಮತ್ತು ಒಡೆದ), 80.ಮೋತ್ (ಇಡೀ ಮತ್ತು ಒಡೆದ), 81.ಎಲ್ಲಾ ತರಕಾರಿಗಳು (ಸೊಪ್ಪುಗಳು ಸೇರಿಸಿ)(ಗರ್ಕಿನ್ ಹೊರತುಪಡಿಸಿ), 82.ಕಾಯಿಗಳು, 83.ಹಸಿರುಮೆಣಸಿನಕಾಯಿ, 84.ಈರುಳ್ಳಿ, 85.ಆಲೂಗಡ್ಡೆ, 86.ಸುವರ್ಣಗೆಡ್ಡೆ, 87.ಸಿಹಿಗೆಣಸು (ಗೆಣಸು), 88.ಟೊಮ್ಯಾಟೋ, 89.ವೀಳ್ಯೆದೆಲೆ, 90.ಬೆಲ್ಲ, 91.ತೆಂಗಿನಕಡ್ಡಿ, 92.ಒಣದ್ರಾಕ್ಷಿ.**

**ಅನುಸೂಚಿ–ಎ**

ಗುಲ್ಬರ್ಗಾ ನಗರಸಭಾ ಪರಿಮಿತಿಯೊಳಗೆ ನೆಹರುಗಂಜ್ ಎಂದು ಕರೆಯಲ್ಪಡುವ ಸ್ಥಳೀಯ ಪ್ರದೇಶದ ಈ ಕೆಳಗಿನ ಸೀಮಾಬದ್ಧ ಸ್ಥಳ:–

| | | |
|---|---|---|
| ಪೂರ್ವಕ್ಕೆ | : | ಮಾರ್ಗಮ್ಮ ದೇವಸ್ಥಾನದಿಂದ ಮಿಜಗುರಿ ರಸ್ತೆ. |
| ಪಶ್ಚಿಮಕ್ಕೆ | : | ಹುಮ್ನಾಬಾದ್ ರಸ್ತೆಯ ಫಿಲ್‌ಟರ್ ಬೆಡ್‌ನಿಂದ ವೇಬ್ರಿಡ್ಜ್‌ವರೆಗೆ. |
| ಉತ್ತರಕ್ಕೆ | : | ಹಾಲಿ ಇರುವ ಹುಮ್ನಾಬಾದ್ ರಸ್ತೆಯಲ್ಲಿನ ಮುನಿಸಿಪಲ್ ಆಕ್‌ಟ್ರಾಯಿ ತಡೆ ರಿಂದ ಮಿಜಗುರಿ ರಸ್ತೆಗೆ ಹತ್ತಿರದ ಮುಸ್ಲಿಂ ಸ್ಮಶಾನ. |
| ದಕ್ಷಿಣಕ್ಕೆ | : | ಮಾರ್ಗಮ್ಮ ದೇವಸ್ಥಾನದಿಂದ ಫಿಲ್‌ಟರ್ ಬೆಡ್ ರಸ್ತೆಯವರೆಗೆ. |

**ಅನುಸೂಚಿ–ಬಿ**

ಗುಲ್ಬರ್ಗಾ ನಗರಸಭಾ ಪರಿಮಿತಿಯೊಳಗೆ ಸ್ಥಳೀಯವಾಗಿ ಸಬ್ಜಿ ಮಂಡಿ ಎಂದು ಕರೆಯುವ ಪ್ರದೇಶದ ಈ ಕೆಳಗಿನ ಸೀಮಾಬದ್ಧ ಸ್ಥಳ:–

| | | |
|---|---|---|
| ಪೂರ್ವಕ್ಕೆ | : | ಷರಾಫ್ ಬಜಾರ್ ರಸ್ತೆ. |
| ಪಶ್ಚಿಮಕ್ಕೆ | : | ಹುಮ್ನಾಬಾದ್ ಮುಖ್ಯ ರಸ್ತೆ. |
| ಉತ್ತರಕ್ಕೆ | : | ಮಾರ್ಕೆಟ್ ರಸ್ತೆ. |
| ದಕ್ಷಿಣಕ್ಕೆ | : | ಕಪಡಾ ಬಜಾರ್ ರಸ್ತೆ. |

**ಅನುಸೂಚಿ–ಸಿ**

ಆಳಂದ ನಗರಸಭಾ ಪರಿಮಿತಿಯೊಳಗಿನ ಈ ಕೆಳಗಿನ ಸೀಮಾಬದ್ಧ ಸ್ಥಳ:–

| | | |
|---|---|---|
| ಪೂರ್ವಕ್ಕೆ | : | ಎಲ್‌ಐಜಿ ವಸತಿ ಗೃಹಗಳಿಗೆ ಮುನಿಸಿಫಲ್ ಆಫೀಸ್ ಮುಖಾಂತರ ಹೋಗುವ ಮುಖ್ಯ ರಸ್ತೆ. |
| ಪಶ್ಚಿಮಕ್ಕೆ | : | ದರ್ಗಾ ಬೇಸ್ ರಸ್ತೆಯಿಂದ ಎಲ್‌ಐಜಿ ವಸತಿ ಗೃಹಗಳು–ಗುಲ್ಬರ್ಗಾ ಉಮರ್ಗ ರಸ್ತೆ. |
| ಉತ್ತರಕ್ಕೆ | : | ಮುನಿಸಿಫಲ್ ಎಲ್‌ಐಜಿ ವಸತಿ ಗೃಹಗಳು, ಮಹಾಗಾವಿ ರಸ್ತೆ ಮತ್ತು ನಾಲ. |
| ದಕ್ಷಿಣಕ್ಕೆ | : | ಮಹದೇವ ದೇವಸ್ಥಾನದ ಮುಖಾಂತರ ಹೋಗುವ ಮುಖ್ಯ ರಸ್ತೆ–ದರ್ಗಾ ಬೇಸ್ ರಸ್ತೆ. |

**ಅನುಸೂಚಿ–ಡಿ**

ಅಫಜಲಪುರ ನಗರಸಭಾ ಪರಿಮಿತಿಯೊಳಗಿನ ಈ ಕೆಳಗಿನ ಸೀಮಾಬದ್ಧ ಸ್ಥಳ:–

| | | |
|---|---|---|
| ಪೂರ್ವಕ್ಕೆ | : | ಲಕ್ಷ್ಮೀ ದೇವಸ್ಥಾನ. |
| ಪಶ್ಚಿಮಕ್ಕೆ | : | ಅಫಜಲ್‌ಖಾನ್ ಮಹಲ್. |
| ಉತ್ತರಕ್ಕೆ | : | ಟಿ.ಎ.ಪಿ.ಸಿ.ಎಂ.ಎಸ್ ಗೋದಾಮು, ಬಸ್‌ನಿಲ್ದಾಣ ಮತ್ತು ವಸತಿ ಪ್ರದೇಶ. |
| ದಕ್ಷಿಣಕ್ಕೆ | : | ನಗರಸಭೆ ಕಛೇರಿ ಮತ್ತು ಹೆಣ್ಣು ಮಕ್ಕಳಿಗೆ ಮಾಡಲ್ ಪ್ರೈಮರಿ ಸ್ಕೂಲ್. |

**ಅನುಸೂಚಿ–ಇ**

ಕಮಲಾಪುರ ಗ್ರಾಮದ ಪಂಚಾಯ್ತಿ ಪರಿಮಿತಿಯೊಳಗೆ ಹಾಲಿ ಸಂತೆ ನಡೆಯುವ ಈ ಕೆಳಗಿನ ಸೀಮಾಬದ್ಧ ಸ್ಥಳ:–

| | | |
|---|---|---|
| ಪೂರ್ವಕ್ಕೆ | : | ಓಂಕಾರ ಕುಲಕರ್ಣಿಯವರ ಮನೆ. |
| ಪಶ್ಚಿಮಕ್ಕೆ | : | ಸರ್ಕಾರಿ ಮಾಧ್ಯಮಿಕ ಶಾಲೆ. |
| ಉತ್ತರಕ್ಕೆ | : | ಕಂತಿ ಮಠದ ಬೈಲು ಜಾಗ. |
| ದಕ್ಷಿಣಕ್ಕೆ | : | ಶ್ರೀ ರೇವಣ್ಣ ಸಿದ್ದೇಶ್ವರ ದೇವಸ್ಥಾನ ಅಂಗಡಿಗಳು. |

**ಅನುಸೂಚಿ–ಎಫ್**

ಮಾದನಹಿಪ್ಪರಗ ಗ್ರಾಮದ ಮಂಡಲ ಪಂಚಾಯ್ತಿ ಪರಿಮಿತಿಯೊಳಗೆ ಸಂತೆ ನಡೆಯುವ ಈ ಕೆಳಗಿನ ಸೀಮಾಬದ್ಧ ಸ್ಥಳ:–

| | | |
|---|---|---|
| ಪೂರ್ವಕ್ಕೆ | : | ಉಪಹಾರ ಗೃಹಗಳು, ಅಂಗಡಿಗಳು, ಮಾಂಗವಾಡರ ಮನೆಗಳು. |
| ಪಶ್ಚಿಮಕ್ಕೆ | : | ಶ್ರೀ ಅಂಬಾಬಾಯಿ ಗುಡಿ ಮತ್ತು ಬಸವನಗುಡಿ. |

ಉತ್ತರಕ್ಕೆ : ಬಸ್ ನಿಲ್ದಾಣ ಮತ್ತು ಉಪಹಾರ ಗೃಹಗಳು.

ದಕ್ಷಿಣಕ್ಕೆ : ಊರೊಳಗೆ ಹೋಗುವ ಹೆಬ್ಬಾಗಿಲು

**ಅನುಸೂಚಿ–ಜಿ**

ದೇವಲಗಾಣಗಾಪುರ ಗ್ರಾಮ ಪಂಚಾಯ್ತಿ ಪರಿಮಿತಿಯೊಳಗೆ ಮುಖ್ಯ ರಸ್ತೆಯಲ್ಲಿ ವ್ಯಾಪಾರ ವಹಿವಾಟು ನಡೆಯುವ ಈ ಕೆಳಗಿನ ಸೀಮಾಬದ್ಧ ಸ್ಥಳ:–

ಪೂರ್ವಕ್ಕೆ : ಭೀಮಾ ನದಿಗೆ ರಸ್ತೆ.

ಪಶ್ಚಿಮಕ್ಕೆ : ಮಾಲೀಪಾಟೀಲ್ ಗಲ್ಲಿ.

ಉತ್ತರಕ್ಕೆ : ಬಲೆಗಾರ ಗಲ್ಲಿ.

ದಕ್ಷಿಣಕ್ಕೆ : ಭೀಮಾ ನದಿ.

**ಅನುಸೂಚಿ–ಹೆಚ್**

ಅಫಜಲಪುರ ತಾಲ್ಲೂಕಿನ ಕರಜಗಿ ಗ್ರಾಮದಲ್ಲಿನ ಈ ಕೆಳಗಿನ ಸೀಮಾಬದ್ಧ ಸ್ಥಳ:–

ಪೂರ್ವಕ್ಕೆ : ಖಾಲಿ ಜಾಗ.

ಪಶ್ಚಿಮಕ್ಕೆ : ಮಶಾಳ ರಸ್ತೆ.

ಉತ್ತರಕ್ಕೆ : ಖಾಲಿ ಜಾಗ.

ದಕ್ಷಿಣಕ್ಕೆ : ಬಸ್ ನಿಲ್ದಾಣ.

**ವಿ.ಬಿ.ಪಾಟೀಲ್**

ಪಿ.ಆರ್. ನಂ. 1416 ನಿರ್ದೇಶಕರು.

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್ : 473/2010–11, ದಿನಾಂಕ : 10–08–2011.**

**ಉಪಸ್ಥಿತರು: ಡಾ॥ ವೈ. ಮಂಜುನಾಥ್,** ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ, ನಂಜನಗೂಡು. | | ಪರಾರಿ |

**ಪ್ರಕರಣದ ಮುಖ್ಯಾಂಶಗಳು :**

ದಿನಾಂಕ : 07–03–2011 ರಂದು ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ ಇವರು ಮಾರ್ಗ ಸಂ–3 ರಲ್ಲಿ ಗಸ್ತು ಕಾರ್ಯ ನಡೆಸುತ್ತಿರುವಾಗ ಬಂದ ದೂರವಾಣಿ ಭಾತ್ಮಿ ಮೇರೆಗೆ ನಂಜನಗೂಡು ತಾಲ್ಲೂಕು, ಕಸಬಾ ಹೋಬಳಿ, ಕಸುವಿನ ಹಳ್ಳಿ–ಹಲ್ಲರೆ ರಸ್ತೆ, ಮಾರ್ಗದಲ್ಲಿ ಬರುವ ಮಾಕನಪುರ ಗೇಟ್ ಬಸ್ ನಿಲ್ದಾಣದ ಬಳಿ ರಸ್ತೆ ಕಾವಲು ನಡೆಸುತ್ತಿದ್ದಾಗ ಒಬ್ಬ ವ್ಯಕ್ತಿಯು ಹಸಿರು ಬಣ್ಣದ ಟಿ.ವಿ.ಎಸ್–50 ವಾಹನದಲ್ಲಿ ಬರುತ್ತಿದ್ದನು ಸದರಿ ಆಸಾಮಿಯು ಸಮವಸ್ತ್ರಧಾರಿಗಳಾದ ನಮ್ಮನ್ನು ನೋಡಿ, ಸುಮಾರು 100 ಮೀ. ದೂರದಲ್ಲಿ ವಾಹನವನ್ನು ನಿಲ್ಲಿಸಿ, ಓಡಿಹೋಗಲು ಪ್ರಯುತ್ನಿಸಿದನು ಆತನನ್ನು ಹಿಂಬಾಲಿಸಿದರೂ ಸಹ ಆತನನ್ನು ಹಿಡಿಯಲು ಸಾಧ್ಯವಾಗಿರುವುದಿಲ್ಲ. ಆತನ ಪರಾರಿಯಾದ ಕಾರಣ ವಾಹನವನ್ನು ಪರಿಶೀಲಿಸಲಾಗಿ, ಕೆಎ–0/ಕೆ–9627 ನೋಂದಣಿ ಸಂಖ್ಯೆಯ ಟಿ.ವಿ.ಎಸ್–50 ವಾಹನದಲ್ಲಿ ಅಕ್ರಮವಾಗಿ 20 ಲೀ. ಸೇಂದಿ ಮತ್ತು 1.800 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದು, ಕಂಡುಬಂದಿರುತ್ತದೆ. ಈ ಆರೋಪಕ್ಕಾಗಿ ವಾಹನ, ಮದ್ಯ ಮತ್ತು ಸೇಂದಿಯನ್ನು ವಶಪಡಿಸಿಕೊಂಡು ಆರೋಪಿ ಪರಾರಿಯಾಗಿರುತ್ತಾನೆಂದು ಪ್ರಕರಣ ಸಂ: 20/2010–11 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13 ಮತ್ತು 32, 38(ಎ) ಮತ್ತು 43ರ ರೀತ್ಯಾ ಮೊಕದಮೆಯನ್ನು ದಾಖಲುಪಡಿಸಿರುತ್ತಾರೆ.

ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮಾದಕ ದ್ರವ್ಯಗಳ ಪೈಕಿ ಮಾದರಿ ತೆಗೆಯಲಾದ ವಸ್ತುಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ, ವರದಿ ಪಡೆಯಲಾಗಿ, ಮದ್ಯದ ಬಾಟಲಿಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡುಬಂದಿದ್ದು, ಅವು ಮಾನವನ ಸೇವನೆಗೆ ಯೋಗ್ಯವಾಗಿರುತ್ತವೆಂದು ರಾಸಾಯನಿಕ ತಜ್ಞರು ವರದಿ ನೀಡಿರುತ್ತಾರೆ.

ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರು ದಿನಾಂಕ : 19–05–2011ರಂದು ವರದಿಯನ್ನು ಸಲ್ಲಿಸಿ, ಈ ಮೊಕದ್ದಮೆಗೆ ಸಂಬಂಧಿಸಿದಂತೆ, ಜಪ್ತುಪಡಿಸಲಾದ ವಾಹನದ ಬಗ್ಗೆ ತನಿಖೆ ನಡೆಸಲಾಗಿ, ನೋಂದಣಿ ಸಂ : ಕೆಎ–0/ಕೆ–9267 ಆಗಿದ್ದು, ಯಾವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಸಂಬಂಧಿಸಿದ್ದು ಹಾಗೂ ಸದರಿ ವಾಹನದ ಮಾಲೀಕತ್ವದ ವಿವರವುಳ್ಳ ಬಿ ವರದಿಯನ್ನು ಪಡೆಯಲು ಸಾಧ್ಯವಾಗಿರುವುದಿಲ್ಲ. ಹಾಗೂ ಆರೋಪಿಯ ಬಗ್ಗೆಯೂ ಸಹ ಯಾವುದೇ ಸುಳಿವು ಸಿಕ್ಕಿರುವುದಿಲ್ಲ. ವಾಹನವನ್ನು ಜಪ್ತುಪಡಿಸಿ ಸುಮಾರು 70 ದಿನಗಳು ಕಳೆದಿದ್ದು, ಯಾವುದೇ ವ್ಯಕ್ತಿಗಳು ವಲಯ ಕಚೇರಿಗೆ ಬಂದು ವಾಹನ ತನ್ನದೆಂದು ಪ್ರತಿಪಾದಿಸಿರುವುದಿಲ್ಲ. ಅಲ್ಲದೇ ಈ ರೀತಿ ನೋಂದಣಿ ಸಂಖ್ಯೆ ಹಾಕಿಕೊಂಡು ಅಕ್ರಮ ಚಟುವಟಿಕೆಯಲ್ಲಿ ವಾಹನವನ್ನು ಬಳಸಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಆದ ಕಾರಣ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ರೀತ್ಯಾ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ಶಿಫಾರಸ್ಸು ಮಾಡುತ್ತಾ, ಈ ಕೃತ್ಯಕ್ಕೆ ಸಂಬಂಧಿಸಿದಂತೆ ಯಾವುದೇ ಆರೋಪಿಯ ಸುಳಿವು ಪತ್ತೆಯಾಗಿರುವುದಿಲ್ಲ. ಇನ್ನು ಮುಂದೆಯೂ ಸಹ ಆರೋಪಿ ಪತ್ತೆಯಾಗದ ಸಾಧ್ಯತೆಗಳು ಇರುವುದರಿಂದ 'ಸಿ' ಅಂತಿಮ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಲು ಇಲಾಖಾ ಅನುಮತಿ ನೀಡಬೇಕೆಂದು ಕೋರಿರುತ್ತಾರೆ. ಈ ಬಗ್ಗೆ ಮೈಸೂರು ಉಪ ವಿಭಾಗದ ಅಬಕಾರಿ ಉಪ ಅಧೀಕ್ಷಕರು ದಿನಾಂಕ : 21–05–2011ರಂದು ಶಿಫಾರಸ್ಸು ಮಾಡಿರುತ್ತಾರೆ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ: 07–03–2011 ರಂದು ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ, ನಂಜನಗೂಡು ಇವರು ಗಸ್ತು ನಿರತ ಸಮಯದಲ್ಲಿ ನಂಜನಗೂಡು ತಾಲ್ಲೂಕು, ಕಸಬಾ ಹೋಬಳಿ, ಕಸುವಿನ ಹಳ್ಳಿ–ಹಲ್ಲರೆ ರಸ್ತೆ, ಮಾರ್ಗದಲ್ಲಿ ಬರುವ ಮಾಕನಪುರ ಗೇಟ್ ಬಸ್ ನಿಲ್ದಾಣದ ಬಳಿ ಕೆಎ–0/ಕೆ–9627 ನೋಂದಣಿ ಸಂಖ್ಯೆಯ ಟಿ.ವಿ.ಎಸ್ – 50 ವಾಹನದಲ್ಲಿ ಅಕ್ರಮವಾಗಿ 20 ಲೀ. ಸೇಂದಿ ಮತ್ತು 1.800 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 38(ಎ)ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ವಾಹನದ ಮಾಲೀಕರಾದ ಮೈಲಾರಪ್ಪ ಬಿನ್ ಕರಿಮಲ್ಲಯ್ಯ, ಕೆರೆಯಾಗಳಹಳ್ಳಿ, ಹಂಚಹಳ್ಳಿ ಪೋಸ್ಟ್, ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ ಇವರು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಈ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಿರುವುದಿಲ್ಲ ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (4) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮಿಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ : ಡಿಟಿಸಿಆರ್/473/2010–11, ದಿನಾಂಕ : 10–08–2011.**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ, ನಂಜನಗೂಡು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 20/2010–11, ದಿನಾಂಕ: 07–03–2011 ರಂದು ವಶಪಡಿಸಿಕೊಂಡ **ಕೆಎ–0/ಕೆ–9627 ನೋಂದಣಿ ಸಂಖ್ಯೆಯ ಟಿ.ವಿ.ಎಸ್ – 50** ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2011ನೇ ಇಸವಿ ಆಗಸ್ಟ್ ತಿಂಗಳ 10ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ.ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

**ಪಿ.ಆರ್. ನಂ. 938**

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್ : 359/2010–11, ದಿನಾಂಕ : 18–08–2011.**

**ಉಪಸ್ಥಿತರು:** **ಡಾ॥ ವೈ. ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು,<br>ಪಿರಿಯಾಪಟ್ಟಣ ವಲಯ,<br>ಪಿರಿಯಾಪಟ್ಟಣ. | | ಪರಾರಿ |

**ಪ್ರಕರಣದ ಮುಖ್ಯಾಂಶಗಳು :**

ತಾಲ್ಲೂಕು ಪಂಚಾಯಿತಿ / ಜಿಲ್ಲಾ ಪಂಚಾಯಿತಿ ಹಿನ್ನೆಲೆಯಲ್ಲಿ ಹುಣಸೂರು ಉಪ ವಿಭಾಗದ ಅಬಕಾರಿ ಉಪ ಅಧೀಕ್ಷಕರ ಮಾರ್ಗದರ್ಶನದಂತೆ ದಿನಾಂಕ : 27–12–2010ರಂದು ಸಂಜೆ 6–35 ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷರು, ಪಿರಿಯಾಪಟ್ಟಣ ವಲಯ ಇವರು ಮತ್ತು ಸಿಬ್ಬಂದಿಯೊಂದಿಗೆ ಬೆಟ್ಟದಪುರ ಗ್ರಾಮದಲ್ಲಿ ಇದ್ದಾಗ ಕೊಣಸೂರು ರಸ್ತೆಯಲ್ಲಿ ಚುನಾವಣೆಗೆ ಮದ್ಯ ಸರಬರಾಜಾಗುತ್ತಿದೆ ಎಂದು ಬಂದ ಖಚಿತ ವರ್ತಮಾನದ ಮೇರೆಗೆ ಸಹ ಸಿಬ್ಬಂದಿಯೊಂದಿಗೆ ತಕ್ಷಣ ಬೆಟ್ಟದಪುರದಿಂದ ಪೂನಾಡಹಳ್ಳಿ ರಸ್ತೆ ಕಡೆಗೆ ತೆರಳಿದೆವು. ಹೊಸಹಳ್ಳಿ ಗೇಟ್ ಬಳಿ ಬಂದಾಗ ದೂರದಿಂದ ಒಂದು ವಾಹನ ಬರುತ್ತಿದ್ದು, ಸಿಬ್ಬಂದಿಯವರು ಅದನ್ನು ನಿಲ್ಲಿಸಲು ಸೂಚಿಸಿದಾಗ ವಾಹನ ಚಾಲಕನು ವಾಹನವನ್ನು ನಿಲ್ಲಿಸದೇ ಮುಂದಕ್ಕೆ ವೇಗವಾಗಿ ಚಲಿಸಿಕೊಂಡು ಹೋದನು. ವಾಹನವು ಮಾರುತಿ ಓಮ್ನಿ ವಾಹನವಾಗಿದ್ದು, ಅದನ್ನು ಹಿಂಬಾಲಿಸಿದೆವು. ವಾಹನ ಚಾಲಕ ವಾಹನವನ್ನು ಕೊಣಸೂರು ಗ್ರಾಮದ ಬಳಿಯಿರುವ ಬಸವನಗರ ಗ್ರಾಮದ ಒಳಗಡೆ ತೆಗೆದುಕೊಂಡು ಹೋದನು. ವಾಹನವನ್ನು ರಸ್ತೆ ಬದಿ ನಿಲ್ಲಿಸಿ ಪರಾರಿಯಾದನು. ಆತನನ್ನು ಹಿಡಿಯಲು ಪ್ರಯತ್ನಿಸಿ ವಿಫಲರಾದೆವು. ನಂತರ ವಾಹನದ ಬಳಿ ಬಂದಾಗ ತಕ್ಷಣ ಸುಮಾರು 60 ರಿಂದ 65 ಜನ ಗ್ರಾಮಸ್ಥರು ಸೇರಿದರು. ತದನಂತರ ವಾಹನವನ್ನು ಶೋಧಿಸಲು ಗ್ರಾಮಸ್ಥರನ್ನು ಪಂಚರನ್ನಾಗಲು ಕೋರಿದಾಗ ಶೇಖರ್ ಮತ್ತು ಹರೀಶ್ ಎಂಬುವವರು ಪಂಚರರಾಗಲು ಮುಂದೆ ಬಂದರು. ವಾಹನವನ್ನು ಶೋಧನೆ ನಡೆಸಲಾಗಿ, 15 ರಟ್ಟಿನ ಪೆಟ್ಟಿಗೆಗಳು ಕಂಡುಬಂದವು. ತದನಂತರ ಸ್ಥಳ ಮಹಜರ್ ಮಾಡುತ್ತಿದ್ದ ಸಮಯದಲ್ಲಿ ನೆರೆದಿದ್ದ 60 ಜನರ ಗುಂಪು ಹಠಾತ್ತನೆ ಸಿಬ್ಬಂದಿಯ ಮೇಲೆರಗಿ ಹಾಗೂ ಅಡ್ಡಕಟ್ಟಿ ಮಲ್ಲಿಕಾರ್ಜುನಪ್ಪ, ಭಾಸ್ಕರ್ ಮತ್ತು ಇತರರ ಮೇಲೆ ದೊಣ್ಣೆ ಮತ್ತು ಕಲ್ಲುಗಳಿಂದ ಹಲ್ಲೆ ನಡೆಸಿ, ವಾಹನದ ಗಾಜನ್ನು ಪುಡಿಪುಡಿಗೊಳಿಸಿ, 13 ರಟ್ಟಿನ ಪೆಟ್ಟಿಗೆ ಮದ್ಯವನ್ನು ಧ್ವಂಶ ಮಾಡಿ, ನಾಶಗೊಳಿಸಿರುತ್ತಾರೆ. ಈ ಸಂಬಂಧ ಪೋಲೀಸರಿಗೆ ಮಾಹಿತಿ ನೀಡಿದ ಸಮಯದಲ್ಲಿ ಸ್ಥಳದಲ್ಲಿ ಇದ್ದ ಗುಂಪು ಪರಾರಿಯಾಗಿರುತ್ತಾರೆ. ಆನಂತರ ಬಾಕಿ ಉಳಿದಿದ್ದ 17.280 ಲೀ. ಮದ್ಯ ಮತ್ತು **ಕೆಎ–12/ಎನ್–1023 ನೋಂದಣಿ ಸಂಖ್ಯೆಯ ಮಾರುತಿ ಓಮ್ನಿ** ವಾಹನವನ್ನು ಜಪ್ತುಗೊಳಿಸಿ, ಆರೋಪಿ ಪರಾರಿಯಾಗಿರುವುದಾಗಿ ಪ್ರಕರಣ ಸಂ: 27/10–11ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13(ಎ) ಮತ್ತು 14ರ ಪ್ರಕಾರ ಅಪರಾಧವಾಗಿದ್ದು, ಸೆಕ್ಷನ್ 32, 38(ಎ) ಮತ್ತು 43ರ ರೀತ್ಯಾ ಮೊಕದಮೆಯನ್ನು ದಾಖಲಿಸಿರುತ್ತಾರೆ.

ದಿನಾಂಕ : 29–12–2010ರಂದು ಹುಣಸೂರು ಉಪ ವಿಭಾಗದ ಉಪ ಅಧೀಕ್ಷಕರು ವರದಿಯನ್ನು ಸಲ್ಲಿಸಿ, ಆರಕ್ಷಕ ಉಪ ನಿರೀಕ್ಷಕರ ಬಳಿ ದೂರು ನೀಡಿ ಐ.ಪಿ.ಸಿ ಕಾಯ್ದೆಯಡಿಯಲ್ಲಿ ಮೊಕದ್ದಮೆಯನ್ನು ದಾಖಲಿಸಿಕೊಂಡು, ಮುಂದಿನ ಕ್ರಮ ವಹಿಸುವುದಾಗಿ ಈ ಪ್ರಕರಣದಲ್ಲಿ ಗಾಯಗೊಂಡಿದ್ದ ಸಿಬ್ಬಂದಿಗಳಿಗೆ ಪ್ರಾಥಮಿಕ ಸುಶ್ರೂಷೆ ನೀಡಿ, ವೈದ್ಯರಿಂದ ಪರೀಕ್ಷೆಗೊಳಪಡಿಸಿ, ದೃಢೀಕರಣ ಪತ್ರ ಪಡೆದಿರುವುದಾಗಿ ವರದಿ ಮಾಡಿರುತ್ತಾರೆ.

ಅಬಕಾರಿ ನಿರೀಕ್ಷಕರು, ಪಿರಿಯಾಪಟ್ಟಣ ಇವರು ಬಿ ವಹಿಯ ಪ್ರತಿಯನ್ನು ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಇದನ್ನು ಪರಿಶೀಲಿಸಲಾಗಿ, ಶ್ರೀ ಸುಮನ್‌ರಾಜ್ ಎಂ.ಎನ್ ಬಿನ್ ನಾಗರಾಜು.ಇ, ಸಂ. 03/587, 3ನೇ ಡಿವಿಷನ್, ಮುಳ್ಳುಸೋಗೆ ಗ್ರಾಮ, ಸೋಮವಾರಪೇಟೆ, ಕೊಡಗು ಜಿಲ್ಲೆ ಇವರ ಒಡೆತನದಲ್ಲಿರುವುದು ಕಂಡುಬಂದಿರುತ್ತದೆ. ಹಾಗೂ ರಾಸಾಯನಿಕ ತಜ್ಞರ ವರದಿಯಂತೆ ಈಥೈಲ್ ಆಲ್ಕೋಹಾಲ್ ಅಂಶ ಕಂಡುಬಂದಿದ್ದು, ಅವು ಮಾನವನ ಸೇವನೆಗೆ ಯೋಗ್ಯವಾಗಿರುವುದಾಗಿ ದಿನಾಂಕ : 27–01–2011ರ ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ : 27–12–2010 ರಂದು ಬೆಟ್ಟದಪುರ–ಸಂತೆಮಾಳ ಪೂನಾಡಹಳ್ಳಿ ರಸ್ತೆಯಲ್ಲಿ ರಸ್ತೆ ಗಸ್ತು ನಡೆಸುತ್ತಿದ್ದಾಗ ಎಂ.ಹೊಸಹಳ್ಳಿ ಗ್ರಾಮದ ಬಳಿ ಅಕ್ರಮವಾಗಿ ಮದ್ಯವನ್ನು **ಕೆಎ–12/ಎನ್–1023 ನೋಂದಣಿ ಸಂಖ್ಯೆಯ ಮಾರುತಿ ಓಮ್ನಿ** ವಾಹನವನ್ನು ಮದ್ಯ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಕಂಡುಬಂದಿರುತ್ತದೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 38(ಎ)ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಯು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಈ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಿರುವುದಿಲ್ಲ ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (8) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮಿಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ : ಡಿಟಿಸಿಆರ್/359/2010–11, ದಿನಾಂಕ : 18–08–2011.**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ನಿರೀಕ್ಷಕರು, ಪಿರಿಯಾಪಟ್ಟಣ ವಲಯ, ಪಿರಿಯಾಪಟ್ಟಣ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 27/2010–11, ದಿನಾಂಕ: 27–12–2010 ರಂದು ವಶಪಡಿಸಿಕೊಂಡ **ಕೆಎ–12/ಎನ್–1023 ನೋಂದಣಿ ಸಂಖ್ಯೆಯ ಮಾರುತಿ ಓಮ್ನಿ** ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2011 ನೇ ಇಸವಿ ಆಗಸ್ಟ್ ತಿಂಗಳ 18ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ.ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

**ಪಿ.ಆರ್. ನಂ. 1010**

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ.

**ಸಂಖ್ಯೆ: ಡಿಟಿಸಿಆರ್ : 150 (ಪೋಲೀಸ್)/2009–10, ದಿನಾಂಕ : 13–09–2011.**

**ಉಪಸ್ಥಿತರು:** **ಡಾ॥ ವೈ.ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ,<br>ಮೈಸೂರು ನಗರ, ಮೈಸೂರು. | | ಎಸ್. ಉಮೇಶ್ ಬಿನ್ ಲೇಟ್ ಸಣ್ಣಪ್ಪ |

**ಪ್ರಕರಣದ ಮುಖ್ಯಾಂಶಗಳು :**

ದಿನಾಂಕ : 01–04–2010 ರಂದು ಸಂಜೆ 7–00 ಗಂಟೆ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ಮೈಸೂರು ನಗರ ಇವರು ಠಾಣಾ ಉಸ್ತುವಾರಿಯಲ್ಲಿದ್ದಾಗ ಮೈಸೂರು ನಗರದ ಎನ್.ಆರ್.ಮೊಹಲ್ಲಾದ ಕೆಸರೆಯಲ್ಲಿರುವಾಗ ರಾಜೇಂದ್ರನಗರದ 2ನೇ ಮುಖ್ಯ ರಸ್ತೆಯಲ್ಲಿ ವಾಸವಾಗಿರುವ ಮರಿಯಮ್ಮ ಎಂಬುವವರಿಗೆ ಸೇರಿದ ಮಳಿಗೆಯಲ್ಲಿ ಒಬ್ಬ ಆಸಾಮಿ ಯಾವುದೇ ರಹದಾರಿಯಿಲ್ಲದೇ ಸಾರ್ವಜನಿಕರಿಗೆ ಮದ್ಯವನ್ನು ಕುಡಿಯಲು ಸರಬರಾಜು ಮಾಡುತ್ತಿದ್ದಾನೆಂಬ ಭಾತ್ಮಿಯ ಮೇರೆಗೆ ಉದ್ದೇಶಿತ ಸ್ಥಳಕ್ಕೆ ಭೇಟಿ ನೀಡಿ ಪರಿಶೀಲಿಸಲಾಗಿ, ಈ ಹಿಂದೆ ಸಾರಾಯಿ ಮಾರುತ್ತಿದ್ದ ಸ್ಥಳದಲ್ಲಿ ಸಾರ್ವಜನಿಕರಿಗೆ ಹಣ ಪಡೆದು ಮದ್ಯವನ್ನು ಸೇವಿಸಲು ಗ್ಲಾಸ್‌ನಲ್ಲಿ ಹಾಕಿ ಕೊಡುತ್ತಿದ್ದು, ಯಾವುದೇ ರಹದಾರಿ ಇಲ್ಲದೇ ಸುಮಾರು 8.190 ಲೀ. ಮದ್ಯವನ್ನು ಹಾಗೂ ಒಂದು ಕಪ್ಪು ಬಣ್ಣದ **ಕೆಎ–11/ಇ–4875 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ಸಿಟಿ – 100 ವಾಹನದಲ್ಲಿ** ಹೊಂದಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಎಸ್. ಉಮೇಶ್ ಬಿನ್ ಲೇಟ್ ಸಣ್ಣಪ್ಪ ಎಂಬುವವರನ್ನು ದಸ್ತಗಿರಿ ಮಾಡಿರುವುದಾಗಿ ಠಾಣಾ ಮೊಕದ್ದಮೆ ಸಂಖ್ಯೆ : 13/2010 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 15(ಎ)ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ: 03–04–2010 ರಲ್ಲಿ ಈ ಪ್ರಾಧಿಕಾರದ

ಅನುಮತಿಗಾಗಿ ಕೋರಿರುತ್ತಾರೆ. ಅದರಂತೆ ದಿನಾಂಕ: 06–04–2010 ರಂದು ಮೈಸೂರು ವಲಯ–1ರ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಾಹನದ ಬಿ ವಹಿ ಪ್ರತಿಯನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಡ್ಯ ಜಿಲ್ಲೆ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ : 27–04–2010ರಂದು ಪತ್ರ ಬರೆಯಲಾಗಿರುತ್ತದೆ. ಇದೂವರೆವಿಗೂ ಯಾವುದೇ ಪ್ರತಿಕ್ರಿಯೆ ಬಂದಿರುವುದಿಲ್ಲ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ: 01–04–2010 ರಂದು ಮೈಸೂರು ನಗರದ ರಾಜೇಂದ್ರನಗರದ 2ನೇ ಮುಖ್ಯ ರಸ್ತೆಯಲ್ಲಿ ವಾಸವಾಗಿರುವ ಮರಿಯಮ್ಮ ಎಂಬುವವರಿಗೆ ಸೇರಿದ ಮಳಿಗೆಯಲ್ಲಿ **ಕೆಎ–11/ಇ–4875 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ಸಿಟಿ – 100 ವಾಹನದಲ್ಲಿ** ಅಕ್ರಮವಾಗಿ 8.190 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿಯಾದ ಎಸ್.ಉಮೇಶ್ ಬಿನ್ ಲೇಟ್ ಸಣ್ಣಪ್ಪ ಎಂಬುವನನ್ನು ಸ್ಥಳದಲ್ಲಿ ದಸ್ತಗಿರಿ ಮಾಡಲಾಗಿರುತ್ತದೆ. ಈ ಬಗ್ಗೆ ಅರ್ಜಿದಾರರ ಮೇಲೆ ಕಲಂ 43(ಬಿ)(2)ರ ಅಡಿಯಲ್ಲಿ ಕಾನೂನಿನಲ್ಲಿ ವಿವಿಧ ಜವಾಬ್ಧಾರಿಗಳಿದ್ದು, ಅದನ್ನು ನಿರ್ವಹಿಸುವ ಆದ್ಯ ಕರ್ತವ್ಯ ಅರ್ಜಿದಾರರ ಮೇಲಿದ್ದು, ಈ ಕಾರಣದಿಂದಾಗಿ ಆತ ನೇರವಾಗಿ ಈ ಪ್ರಕರಣದಲ್ಲಿ ಭಾಗಿಯಾಗಿಲ್ಲದಿದ್ದರೂ ಕೂಡಾ ಪರೋಕ್ಷವಾಗಿ ಆತನೇ ಹೊಣೆಗಾರನಾಗಿರುತ್ತಾನೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (17) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/150 (ಪೋಲೀಸ್)/2009–10, ದಿನಾಂಕ : 13–09–2011.**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅರಕ್ಷಕ ಉಪ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ಮೈಸೂರು ನಗರ ಇವರು ಹೂಡಲಾದ ಪ್ರ.ಮಾ.ವರದಿ ಸಂ: 13/2010, ದಿ: 01–04–2010ರಂದು ವಶಪಡಿಸಿಕೊಂಡ **ಕೆಎ–11/ ಇ–4875 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ಸಿಟಿ–100 ವಾಹನವನ್ನು** ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2011ನೇ ಇಸವಿ ಸೆಪ್ಟೆಂಬರ್ ತಿಂಗಳ 13ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ|| ವೈ.ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

**ಪಿ.ಆರ್. ನಂ. 1011**

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್ : 621 (ಪೋಲೀಸ್)/2008–09, ದಿನಾಂಕ : 25–07–2011.**

**ಉಪಸ್ಥಿತರು:** **ಡಾ|| ವೈ.ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

**ಪಿರ್ಯಾದುದಾರರು** **ವಿರುದ್ಧ** **ಆರೋಪಿ**

ಅಬಕಾರಿ ನಿರೀಕ್ಷಕರು ಪರಾರಿ
ಹುಣಸೂರು ವಲಯ, ಹುಣಸೂರು.

**ಪ್ರಕರಣದ ಮುಖ್ಯಾಂಶಗಳು :–**

ದಿನಾಂಕ : 30–06–2009 ರಂದು ರಾತ್ರಿ 8–00 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಹುಣಸೂರು ವಲಯ ಇವರು ಗಸ್ತು ನಿರತ ಸಮಯದಲ್ಲಿ ಹುಣಸೂರು ತಾಲ್ಲೂಕು, ಕೆಚ್ಚೆಕೊಪ್ಪಲು ಗ್ರಾಮದಲ್ಲಿ **ಕೆಎ–09/ಎಸ್–4365 ನೋಂದಣಿ ಸಂಖ್ಯೆಯ ಬಜಾಜ್ ಚೇತಕ್** ವಾಹನದಲ್ಲಿ ಅಕ್ರಮವಾಗಿ 6.480 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಆರೋಪಿಗಳನ್ನು ಪತ್ತೆ ಹಚ್ಚಿ, ಬಂಧಿಸಬೇಕಾಗಿರುತ್ತದೆಂದು ಠಾಣಾ ಮೊಕದ್ದಮೆ ಸಂಖ್ಯೆ : 19/2008–09ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 13(1)(ಎ)(ಎಫ್)ರ ರೀತ್ಯಾ ಅಪರಾಧವಾಗಿದ್ದು, ವಿಧಿ 32, 38(ಎ) ಪ್ರಕಾರ ಶಿಕ್ಷಾರ್ಹವಾಗಿರುತ್ತದೆಂದು ಮೊಕದ್ದಮೆ ದಾಖಲಿಸಿ, ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮದ್ಯದ ಪೈಕಿ ಮಾದರಿ ತೆಗೆಯಲಾದ ಮದ್ಯವನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ, ವರದಿ ಪಡೆಯಲಾಗಿ, ಬಾಟಲಿಗಳಲ್ಲಿ ಈಥೈಲ್ ಆಲ್ಕೋಹಾಲ್ ಮತ್ತು ಗಸಿ ಕಂಡುಬಂದಿದ್ದು, ಅವು ನಕಲಿ ಮದ್ಯವಾಗಿದ್ದು, ಮಾನವನ ಸೇವನೆಗೆ ಯೋಗ್ಯವಾಗಿರುವುದಿಲ್ಲವೆಂದು ದಿನಾಂಕ : 20–11–2009ರ ವರದಿಯಲ್ಲಿ ರಾಸಾಯನಿಕ ತಜ್ಞರು ಅಭಿಪ್ರಾಯವನ್ನು ನೀಡಿರುತ್ತಾರೆ.

ಹುಣಸೂರು ವಲಯದ ಅಬಕಾರಿ ನಿರೀಕ್ಷಕರು ದಿನಾಂಕ : 03–05–2011ರಲ್ಲಿ ಹುಣಸೂರು ಉಪ ವಿಭಾಗದ ಅಬಕಾರಿ ಉಪ ಅಧೀಕ್ಷಕರ ಮುಖೇನ ವರದಿಯನ್ನು ಸಲ್ಲಿಸಿ ಈ ಪ್ರಕರಣದ ತನಿಖೆಯನ್ನು ಕೈಗೊಂಡು ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಪಡೆಯಲಾಗಿದ್ದು, ಅದರಂತೆ ಸದರಿ ವಾಹನವು ಎನ್.ಇ. ಗುರುಸ್ವಾಮಿ ಬಿನ್ ಲೇ॥ ಯೆಲ್ಲಪ್ಪ, ನಂಜನಗೂಡು ತಾ॥ ಇವರ ಒಡೆತನದಲ್ಲಿರುವುದು ಸ್ಪಷ್ಟವಾಗಿರುತ್ತದೆ. ಸದರಿಯವರಿಗೆ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿದ್ದು, ವಾಹನವು ತೀರಾ ಹಳೆಯದಾದ ಕಾರಣ ಗುಜರಿ ವ್ಯಾಪಾರಿಗಳಿಗೆ ಹಿಂದೆಯೇ ಮಾರಾಟ ಮಾಡಲಾಗಿದೆ ಎಂದು ಹೇಳಿಕೆ ನೀಡಿದ್ದು, ಈ ಪ್ರಕರಣಕ್ಕೂ ನನಗೂ ಯಾವುದೇ ಸಂಬಂಧವಿಲ್ಲವೆಂದು ಸದರಿ ವಾಹನವನ್ನು ಕಾನೂನು ರೀತ್ಯಾ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತನ್ನ ಅಭ್ಯಂತರ ಏನೂ ಇಲ್ಲವೆಂದು ತಿಳಿಸಿರುತ್ತಾರೆ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ : 30–06–2009 ರಂದು ಹುಣಸೂರು ತಾಲ್ಲೂಕು, ಕೆಚ್ಚೆಕೊಪ್ಪಲು ಗ್ರಾಮದಲ್ಲಿ **ಕೆಎ–09/ಎಸ್–4365 ನೋಂದಣಿ ಸಂಖ್ಯೆಯ ಬಜಾಜ್ ಚೇತಕ್** ವಾಹನದಲ್ಲಿ ಅಕ್ರಮವಾಗಿ 6.480 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 38(ಎ)ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಯು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಈ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಿರುವುದಿಲ್ಲ ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (2) ವರ್ಷಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮಿಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ : ಡಿಟಿಸಿಆರ್/621 (ಪೋಲೀಸ್)/2008–09, ದಿನಾಂಕ : 25–07–2011.**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ನಿರೀಕ್ಷಕರು, ಹುಣಸೂರು ವಲಯ, ಹುಣಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 19/2008–09, ದಿನಾಂಕ: 30–06–2009 ರಂದು ವಶಪಡಿಸಿಕೊಂಡ **ಕೆಎ–09/ಎಸ್–4365 ನೋಂದಣಿ ಸಂಖ್ಯೆಯ ಬಜಾಜ್ ಚೇತಕ್** ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2011 ನೇ ಇಸವಿ ಜುಲೈ ತಿಂಗಳ 25ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ.ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

**ಪಿ.ಆರ್. ನಂ. 809**

## ಅಧಿಕಾರಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು, ಶಿರಸಿ ವಿಭಾಗ, ಶಿರಸಿ ಇವರ ನಡಾವಳಿಗಳು

**ವಲಯ ಅರಣ್ಯಾಧಿಕಾರಿ, ಸಿದ್ದಾಪುರ ಇವರ ಅರಣ್ಯ ಮೊಕದ್ದಮೆ ಸಂಖ್ಯೆ.3/95–96/ದಿ:6–8–1995**

**ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) ಯಿಂದ (ಜಿ) ವರೆಗೆ**

**ಕ್ರ.ಸಂ. B5/FOC/CR-1/11–12, ಶಿರಸಿ, ದಿನಾಂಕ : 2–8–2011.**

**ಉಪಸ್ಥಿತಿ**

**ಶ್ರೀ ಡಿ.ಯತೀಶಕುಮಾರ, ಕ.ಅ.ಸೇ** ಅಧಿಕಾರಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿರಸಿ ವಿಭಾಗ, ಶಿರಸಿ

ವಲಯ ಅರಣ್ಯಾಧಿಕಾರಿ, ಸಿದ್ದಾಪುರ ವಲಯ, ಸಿದ್ದಾಪುರ. ಫಿರ್ಯಾದಿದಾರರು..........
(ಪ್ರತಿನಿಧಿಸಿದವರು : ಸಹಾಯಕ ಸರಕಾರಿ
ಅಭಿಯೋಜಕರು, ಜೆ.ಎಂ.ಎಫ್.ಸಿ ನ್ಯಾಯಾಲಯ,ಶಿರಸಿ)

ಶ್ರೀ ಬಾಲಕೃಷ ಶೆಟ್ಟಿ, ಬಿನ್ ಬಿರ್ಬಣ್ಣ ಶೆಟ್ಟಿ, ಕೊಡಾಚೆಮನೆ, ಮಾಣಿಗ್ರಾಮ
ಮಾಣಿ ಅಂಚೆ. ತಾ:ಬಂಟವಾಳ(ದ.ಕ) ಅರ್ಜಿದಾರರು............

**ಪ್ರಕರಣದ ಹಿನ್ನೆಲೆ/ಪಸ್ತಾವನೆ :**

ದಿನಾಂಕ:6–8–1995 ರಂದು ಸಿದ್ದಾಪುರ–ಶಿರಸಿ ಪಿ.ಡಬ್ಲು.ಡಿ ರಸ್ತೆ, ನಿಡಗೋಡ ಬಳಿ ಚೆಕ್ ಪೋಸ್ಟ್ ಸಮೀಪದ ಮಂಡ್ಲಿಕೊಪ್ಪದ ಹತ್ತಿರ ಶಿರಸಿ ಮಾರ್ಗವಾಗಿ ಹೊರಟ ಅಂಬಾಸಿಡರ್ ಕಾರೊಂದು ಚೆಕ್ ಪೋಷ್ಟ ಬಳಿ ಬಂದು ಪುನ: ವಾಪಸ್ ತಿರುಗಿಸಿಕೊಂಡು ವೇಗವಾಗಿ ಹೊರಟ್ಟಿದ್ದನ್ನು ನೋಡಿ ಚೆಕ್ ಪೋಷ್ಟ ಹತ್ತಿರ ಇದ್ದ ಶಾಖಾ ಅರಣ್ಯ ಪಾಲಕರು, ನಿಡಗೋಡ ಇವರು ಕಾವಲುಗಾರನೊಬ್ಬನನ್ನು ಕರೆದುಕೊಂಡು ಬೈಕ್ ಮೇಲೆ ಸದರ ಕಾರನ್ನು ಬೆನ್ನಟ್ಟಿದ್ದರು. ಮತ್ತು ಬಾತ್ಮೆ ಮೇರೆಗೆ ಅರಣ್ಯ ಅಧಿಕಾರಿಯವರು ಎರಡು ಜನ ಪಂಚರನ್ನು ಕರೆದುಕೊಂಡು ಇಲಾಖಾ ಸಿಬ್ಬಂದಿಗಳೊಡನೆ ಇಲಾಖಾ ಜೀಪಿನಲ್ಲಿ ಕಾರು ಹೋದ ಮಾರ್ಗದಲ್ಲಿ ಹೊರಟರು ಮತ್ತು ಹಲಗೇರಿ ಹೈಸ್ಕೂಲ್ ಮುಂದೆ ಹಲಗೇರಿ ಅಳಗೋಡಿಗೆ ಹೋಗುವ ಕಚ್ಚಾ ರಸ್ತೆಯಲ್ಲಿ ಒಂದು ಕಾರು ಅಥವಾ ಜೀಪು ಹೋದ ಅಚ್ಚು ಕಂಡು ಆ ಮಾರ್ಗದಲ್ಲಿಯೇ ಮುಂದೆ ಹೋಗಲಾಗಿ ಮುಂದೆ ಹೊಳೆಯ ಹತ್ತಿರ ಒಂದು ಕಾರು ನಿಂತಿದ್ದು ಕಂಡು ಬಂತು. ಆಗ ಇಲಾಖಾ ವಾಹನವನ್ನು ವೇಗವಾಗಿ ಕಾರಿಗಿಂತ ಮುಂದೆ ಅಡ್ಡ ನಿಲ್ಲಿಸಿ ಕಾರಿನಲ್ಲಿ ಯಾರಿದ್ದೀರಿ ಎಂದು ಕೇಳುತ್ತಾ ಕಾರನ್ನು ಸುತ್ತುವರಿಯಲಾಯಿತು. ಸದರ ಕಾರಿನಲ್ಲಿ ಯಾರೂ ಇರಲಿಲ್ಲ. ಸದರ ಕಾರು ಬಿಳಿಯಬಣ್ಣದ ಡಿಸೇಲ್ ಕಾರುಆಗಿದ್ದು ಮುಂದೆ ನಂಬರ್ ಪ್ಲೇಟ್ ಮೇಲೆ CNH –7979 ಎಂದು ಬರೆದಿದ್ದು ಕಂಡು ಬಂತು. ಕಾರಿನಲ್ಲಿ ಯಾರೂ ಇಲ್ಲದ ಕಾರಣ ಕಾರಿನ ಬಾಗಿಲನ್ನು ತೆರೆದು ನೋಡಿದಾಗ ಕಾರಿನ ಹಿಂಬದಿಯ ಸೀಟಿನಲ್ಲಿ ಕೆಲವು ಕಟ್ಟಿಗೆಯ ತುಂಡುಗಳನ್ನು ಜೋಡಿಸಿದ್ದು ಕಂಡಿತು. ಕಾರಿನ ಹಿಂಬದಿಯ ಬಾಗಿಲು ತೆಗೆದು ಕೆಲವು ಕಟ್ಟಿಗೆ ತುಂಡುಗಳನ್ನು ಹೊರತೆಗೆದು ಪರಿಶೀಲಿಸಿದಾಗ ಅವು ಶ್ರೀಗಂಧದ ತುಂಡುಗಳೆಂದು ತಿಳಿದು ಬಂತು. ಕಾರಿನ ಡಿಕ್ಕಿಯಲ್ಲಿಯೂ ಸಹ ಕೆತ್ತೆನೆಯಿಂದ ಕೂಡಿದ ಕೆಸರು ಲೇಪಿತವಾದ ಕೆಲವು ತುಂಡುಗಳಿರುವುದು ಕಂಡುಬಂತು ಅವು ಸಹ ಶ್ರೀಗಂಧದ ತುಂಡುಗಳೆಂದು ಪರಿಶೀಲನೆಯಿಂದ ತಿಳಿಯಿತು. ಸದರ ವಾಹನದಲ್ಲಿ ಶ್ರೀಗಂಧಕ್ಕೆ ಸಂಬಂಧಿಸಿದಂತೆ ಯಾವುದೇ ಪಾಸುಗಳು ಇರಲಿಲ್ಲ. ಕಾರಿನಲ್ಲಿ ಇರಬಹುದಾದ ವ್ಯಕ್ತಿಗಳಿಗಾಗಿ ಅಕ್ಕಪಕ್ಕ ಹುಡುಕಿದರೂ ಯಾರೂ ಸಿಗಲಿಲ್ಲ ಇದರಿಂದ ಕಳುವಿನ ಮಾಲು ಎಂದು ಖಾತ್ರಿ ಪಟ್ಟಿತು ಮತ್ತು ಸಿಕ್ಕ ಶ್ರೀಗಂಧದ ತುಂಡುಗಳನ್ನು ಅಳತೆ ಮಾಡಲು ಯಾವುದೇ ಸಾಮಗ್ರಿಗಳು ಇಲ್ಲದೇ ಇದ್ದುದ್ದರಿಂದ ಜಪ್ತ ಮಾಲಿನ ಜೊತೆ ಕಾರನ್ನು ಸಿದ್ದಾಪುರ ವಲಯ ಕಛೇರಿಗೆ ತಂದು ಅಳತೆ ಮಾಡಲಾಯಿತು. ಸದರ ಕೆತ್ತನೆಯಿಂದ ಕೂಡಿರುವ ಶ್ರೀಗಂಧದ ತುಂಡುಗಳು ಹಸಿಯಾಗಿದ್ದು 58 ತುಂಡುಗಳು ಮತ್ತು ಅಳತೆಗೆ ಬರದ ಚೆಕ್ಕೆ ಚೂರುಗಳು 72 ಒಟ್ಟೂ 174ಕೆ.ಜಿ ತೂಕ ಹೊಂದಿದ್ದು ಸರಕಾರಿ ಛಪ್ಪಾ ಹೊಡೆಯಲಾಯಿತು. ಮತ್ತು ಬಿಳಿ ಬಣ್ಣದ ಅಂಬಾಸಿಡರ್ ಕಾರಿನ ನಂ CNH–7979 ಇದ್ದು ಇಂಜಿನ ನಂ 6E ಆ020220, ಚಾಸಿಸ್ ನಂ.AMBOl1–762 ಆಗಿರುತ್ತದೆ. ಸದರ ಕಾರಿನಲ್ಲಿ ಶ್ರೀಗಂಧದ ತುಂಡುಗಳನ್ನು ಜೋಡಿಸಿದ ಪದ್ದತಿಯಿಂದ ಸದರ ಕಾರು ಹಿಂದಿನಿಂದಲೂ ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಿರ ಬಹುದೆಂದು ಮತ್ತು ಅಂದಾಜು ಮೌಲ್ಯ ರೂ.25000–00 ಆಗಿರಬಹುದೆಂದು ಅಂದಾಜಿಸಲಾಯಿತು. ನಂತರ ಕರ್ನಾಟಕ ಅರಣ್ಯ ಕಾಯ್ದೆ 1963ರ ಕಾಯ್ದೆ 62,80,81, 84,85, 86, 87, 71(a) to 71(g), ಕರ್ನಾಟಕ ಅರಣ್ಯ ನಿಯಮ 1969ರ ನಿಯಮ 144 ರಂತೆ ಅರಣ್ಯ ಮೊಕದ್ದಮೆ ಸಂಖ್ಯೆ.3/95–96 ರಂತೆ ಗುನ್ನೆ ದಾಖಲಿಸಿ ವಾಹನವನ್ನು ತುಂಡುಗಳ ಸಮೇತ ಮುಂದಿನ ಕ್ರಮಕೈಗೊಳ್ಳಲು ಈ ಪ್ರಾಧಿಕಾರದ ಸಮಕ್ಷಮ ಹಾಜರಪಡಿಸಲಾಯಿತು.

ಈ ಪ್ರಾಧಿಕಾರವು ಸದರ ವಾಹನ CNH–7979 ಹಾಗೂ ಶ್ರೀಗಂಧದ ತುಂಡು 174kg. ಗಳನ್ನು ಇಲಾಖಾ ಭದ್ರತೆಯಲ್ಲಿ ಸಿದ್ದಾಪುರ ವಲಯ ಕಛೇರಿಯಲ್ಲಿ ಇಡುವಂತೆ ಆದೇಶಿಸಿತು.

ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ವಾಹನದ ಮಾಲಿಕತ್ವದ ಬಗ್ಗೆ ಮಾಹಿತಿ ಕೋರಲಾಗಿ, ಸದರ CNH–7979 ವಾಹನವು ಶ್ರೀ ಕೆ.ಬಾಲಕೃಷ್ಣ ಶೆಟ್ಟಿ, ಕೊಡಚೆ ಎಸ್, ಮಾಣಿ ವಿಲೇಜ್, ಅಂಚೆ: ಬಂಟ್ವಾಳ ಎಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಗಳೂರು ಇವರಿಂದ ತಿಳಿದು ಬಂತು.

ಅದರಂತೆ, ಸಂಬಂಧಿಸಿದವರಿಗೆ ನೋಟೀಸ್ ಜ್ಯಾರಿ ಮಾಡಲಾಯಿತು. ವಾಹನ ಮಾಲೀಕರು, ತಾನು ಮುಗ್ಧನಾಗಿದ್ದು, ಸದರ ವಾಹನವು ಟೂರಿಸ್ಟ್ ವಾಹನವಾಗಿದ್ದು, ಪ್ರಕರಣದ ಅರಿವು ಇರುವುದಿಲ್ಲ. ಮತ್ತು ಸದರ ವಾಹನದಿಂದಲೇ ಜೀವನ ನಡೆಯಬೇಕೆಂದು, ಸದರ ವಾಹನವನ್ನು ಬಿಟ್ಟುಕೊಡಬೇಕಾಗಿ ತಮ್ಮ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. ಇದಕ್ಕೆ ಪ್ರತಿಯಾಗಿ, ಸಹಾಯಕ ಸರಕಾರಿ ಅಭಿಯೋಜಕರು, ಸದರ ವಾಹನವನ್ನು ಬಿಟ್ಟುಕೊಟ್ಟಲ್ಲಿ ವಾಹನ ಮಾಲಿಕನು ವಾಹನವನ್ನು ಮಾರಬಹುದಾಗಿದ್ದು ಸದರ ವಾಹನವು ಮುಂದಿನ ವಿಚಾರಣೆಗೆ ಮುಖ್ಯ ಸಾಕ್ಷಿಯಾಗಿದ್ದು, ಅದನ್ನು ಬಿಟ್ಟುಕೊಡಬಾರದಾಗಿ ವಿನಂತಿಸಿಕೊಂಡಿರುತ್ತಾರೆ.

ಅದರಂತೆ ದಿನಾಂಕ:8–12–1995 ರಂದು ಸದರ ಪ್ರಕರಣದಲ್ಲಿ ವಾಹನವನ್ನು ಅರ್ಜಿದಾರರಿಗೆ ಮಧ್ಯಂತರ ಬಿಡುಗಡೆಗೆ ಬಿಡಲಾಗುವುದಿಲ್ಲ ಎಂದು ಆದೇಶಿಸಲಾಯಿತು.

ನಂತರ ಮಾನ್ಯ ಸೇಶನ್ ಕೋರ್ಟ್, ಕಾರವಾರವು ಸದರ ಪ್ರಕರಣವನ್ನು ಮಧ್ಯಂತರ ಬಿಡುಗಡೆಗೊಳಿಸಿ ಪ್ರಕರಣವನ್ನು ನಿಖಾಲೆಗೊಳಿಸಲು ಆದೇಶಿಸಿತು.

ಅದರಂತೆ, B5/FOC/CR–6/95–96/ದಿ:30–06–1997 ರಂತೆ ಸದರ ವಾಹನವನ್ನು ಈ ಕೆಳಕಂಡ ಶರತ್ತುಗಳನ್ನು ವಿಧಿಸಿ, ಮಧ್ಯಂತರ ಕಸ್ಟಡಿಗೆ ಬಿಡುವ ಬಗ್ಗೆ ಆದೇಶಿಸಲಾಯಿತು.

**ಷರತ್ತುಗಳು:**

1. ರೂ.1,00,000–00 ದ ಬ್ಯಾಂಕ್ ಗ್ಯಾರಂಟಿ ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ಸಲ್ಲಿಸುವುದು.
2. ಸದರ ಪ್ರಕರಣ ಇತ್ಯರ್ಥವಾಗುವವರೆಗೂ ಪರಭಾರ ಮಾಡುವುದಾಗಲೀ ಮಾರಾಟ ಮಾಡುವುದಾಗಲೀ ಮಾಡಬಾರದು.
3. ಯಾವುದೇ ಬದಲಾವಣೆ, ಬಣ್ಣ, ವಿನ್ಯಾಸ ಬದಲಾಯಿಸಬಾರದು.
4. ಯಾವಾಗ ಪ್ರಾಧಿಕಾರವು ವಾಹನವನ್ನು ಹಾಜರು ಪಡಿಸಲು ತಿಳಿಸಿದರೂ, ಸುಸ್ಥಿತಿಯಲ್ಲಿಟ್ಟು ಹಾಜರ ಪಡಿಸುವುದು.
5. ಈ ನ್ಯಾಯಾಲಯ ವಿಧಿಸುವ ಯಾವತ್ತು ಶರತ್ತಿಗೆ ಬದ್ದವಾಗಿರುವುದು. ಎಂಬಿತ್ಯಾದಿ ಶರತ್ತಿನೊಂದಿಗೆ ವಾಹನದ ಮಧ್ಯಂತರ ಬಿಡುಗಡೆಗೆ ಆದೇಶಿಲಾಗಿತ್ತು.

ಆದಾಗ್ಯೂ ವಾಹನ ಮಾಲೀಕರು ಇದರ ಬಗ್ಗೆ ಯಾವುದೇ ಆಸಕ್ತಿ ತೋರಿಸದೇ ವಾಹವನ್ನು ಬಿಡಿಸಿಕೊಂಡು ಹೋಗಿರುವುದಿಲ್ಲ ಮತ್ತು ದಿ:5–11–2005, 17–7–2009 ಗಳಂದು ವಿಚಾರಣೆ ಕರೆದರೂ ಹಾಜರಾಗಿದ್ದು ಇರುವುದಿಲ್ಲ. ಕಾರಣ 17–7–2009 ಇನ್ನೊಮ್ಮೆ ಸದರ ವಾಹನವು ಬೇಕಾದಲ್ಲಿ ಈ ನ್ಯಾಯಾಲಯ ವಿಧಿಸಿದ ಶರತ್ತುಗಳಿಗೊಳಪಟ್ಟು 30 ದಿನಗಳ ಒಳಗಾಗಿ ವಾಹನವನ್ನು ಬಿಡಿಸಿಕೊಂಡು ಹೋಗಲು ಪತ್ರಿಸಲಾಗಿತ್ತು. ಆದರೆ ಈ ವರೆಗೂ ಯಾವುದೇ ಉತ್ತರ ಬಂದಿರುವುದಿಲ್ಲ. ಹಾಗೂ ನ್ಯಾಯಾಲಯಕ್ಕೆ ಯಾರೂ ಹಾಜರಾಗಿರುವುದಿಲ್ಲ. ಈ ಕುರಿತು ದಿ:29–06–2011 ರಂದು ಕೊನೆಯದಾಗಿ ವಿಚಾರಣೆಗೆ ಕರೆದಿದ್ದು, ವಾಹನ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಯಾರೂ ಹಾಜರಾಗಿದ್ದು ಇರುವುದಿಲ್ಲ. ಇದರಿಂದ ಸದರ ವಾಹನ ಮಾಲೀಕರಿಗೆ ವಾಹನದ ಬಗ್ಗೆ ಯಾವುದೆ ಆಸಕ್ತಿ ಇಲ್ಲದಿರುವುದು ಸ್ಪಷ್ಟವಾಗುತ್ತದೆ. ಕಾರಣ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ**

ಪ್ರಕರಣದ ಹಿನ್ನೆಲೆಯಲ್ಲಿ ವಿವರಿಸಿದಂತೆ ವಲಯ ಅರಣ್ಯಾಧಿಕಾರಿ, ಸಿದ್ದಾಪುರ ಇವರ ಅರಣ್ಯ ಮೊಕದ್ದಮೆ ಸಂಖ್ಯೆ.3/95–96ಕ್ಕೆ ಸಂಬಂಧಿಸಿದಂತೆ, ಜಪ್ತ ಪಡಿಸಲಾಗಿದ್ದ ಅಂಬಾಸಿಡರ್ ಕಾರು ನಂ.CNH–7979 ಹಾಗೂ 174ಕೆ.ಜಿ ಹಾಗೂ ಶ್ರೀಗಂಧದ ತುಂಡುಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಈ ಆದೇಶ ತಲುಪಿದ ದಿನಾಂಕದಿಂದ 30 ದಿನಗಳ ಒಳಗಾಗಿ ಮೇಲ್ಮನವಿ ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತವಾಗುತ್ತದೆ. ತದನಂತರ ವಾಹನ ಹಾಗೂ ಶ್ರೀಗಂಧದ ತುಂಡುಗಳನ್ನು ಕಾನೂನು ರೀತ್ಯಾ ವಿಲೆಗೊಳಿಸಲು ಆದೇಸಿಸಲಾಗಿದೆ.

ಈ ಆದೇಶವನ್ನು ಈ ಪ್ರಾಧಿಕಾರದ ಮೊಹರು ಹಾಕಿ ದಿ:02–08–2011ರಂದು ಹೊರಡಿಸಲಾಗಿದೆ.

**ಡಿ.ಯತೀಶ್‌ಕುಮಾರ್.,ಕ.ಅ.ಸೇ.,**
ಅಧಿಕಾರಯುತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಶಿರಸಿ ವಿಭಾಗ, ಶಿರಸಿ

**ಪಿ.ಆರ್. ನಂ. 820**

**ಅಧಿಕಾರಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು, ಶಿರಸಿ ವಿಭಾಗ, ಶಿರಸಿ ಇವರ ನಡಾವಳಿಗಳು**

**ವಲಯ ಅರಣ್ಯಾಧಿಕಾರಿ, ಜಾನ್ಮನೆ ವಲಯರವರ ಅರಣ್ಯ ಮೊಕದ್ದಮೆ ಸಂಖ್ಯೆ. 3/2008-09/ದಿ:24-09-2008.**

**ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) ಯಿಂದ (ಜಿ) ವರೆಗೆ**

**ಕ್ರ.ಸಂ. ಬಿ1/FOC Vehicle/CR-/11-12, ಶಿರಸಿ, ದಿನಾಂಕ : 16-12-2011**

**ಉಪಸ್ಥಿತಿ : ಯತೀಶ್‌ಕುಮಾರ.ಡಿ.ಕಅಸೇ** ಅಧಿಕಾರಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿರಸಿ ವಿಭಾಗ, ಶಿರಸಿ

ವಲಯ ಅರಣ್ಯಾಧಿಕಾರಿ, ಜಾನ್ಮನೆ ವಲಯ, ಜಾನ್ಮನೆ ಫಿರ್ಯಾದಿದಾರರು..........
(ಪ್ರತಿನಿಧಿಸಿದವರು : ಸಹಾಯಕ ಸರಕಾರಿ
ಅಭಿಯೋಜಕರು, ಜೆ.ಎಂ.ಎಫ್.ಸಿ ನ್ಯಾಯಾಲಯ,ಶಿರಸಿ)

ಶ್ರೀ ರಾಘವೇಂದ್ರ ಸಂಬಾಜಿ ಗೌಳಿ, ಸಾ:ಶಿರಸಿ
(ಶ್ರೀ ಎಸ್.ಎನ್.ನಾಯ್ಕ, ಅರ್ಜಿದಾರರ ಪರ ವಕೀಲರು) ಅರ್ಜಿದಾರರು............

**ಪ್ರಕರಣದ ಹಿನ್ನೆಲೆ:**

ದಿನಾಂಕ:24-9-2008 ರಂದು ಹುಕ್ಕಳಿ ಗ್ರಾಮದ ಜಂಗಲ್‌ನಿಂದ ಕಳ್ಳ ಸಾಗಾಣಿಕೆ ನಾಟಾ ಹೋಗುತ್ತಿರುವ ಬಗ್ಗೆ ಖಚಿತ ವರ್ತಮಾನ ವರದಿ ಬಂದ ಮೇರೆಗೆ ವಲಯ ಅರಣ್ಯಾಧಿಕಾರಿ, ಜಾನ್ಮನೆ ಹಾಗೂ ಅವರ ಸಿಬ್ಬಂದಿಗಳು ಸೇರಿ ಖಾಸಗಿ ವಾಹನ ನಂ.ಕೆಎ-31 /690 ರಲ್ಲಿ ನಾಭಿಪುರಂ ಕ್ರಾಸ್ ಬಳಿ ಕಾದು ಕುಳಿತಾಗ ಬೆಳಗಿನ ಜಾವ 5.30ರ ವೇಳೆಗೆ ಹುಕ್ಕಳಿ ಕಡೆಯಿಂದ ಮಿನಿಲಾರಿ ಬರುತ್ತಿರುವುದನ್ನು ಕಂಡು ತಾವು ತೆಗೆದುಕೊಂಡು ಹೋದ ವಾಹವನ್ನು ರಸ್ತೆಗೆ ಅಡ್ಡ ಹಾಕಿ ನಿಲ್ಲಿಸಿದಾಗ ಸದರ ಮಿನಿ ಲಾರಿಯನ್ನು ಯಾವುದೇ ಪ್ರತಿರೋಧವಿಲ್ಲದೇ ನಿಲ್ಲಿಸಿದರು. ಸದರ ವಾಹನದಲ್ಲಿ ಡ್ರೈವರ್ ಸೇರಿ 3 ಜನ ಇದ್ದರು. ಸದರ ವಾಹನವು ಟ್ರಾಕ್ಸ ತೂಫಾನ ವಾಹನವಾಗಿದ್ದು ಅದರ ನೋಂದಣಿ ಸಂಖ್ಯೆ KA-31 /4996 ಆಗಿತ್ತು. ಸದರ ವಾಹನದ ಹಿಂಬದಿಯ ಬಾಗಿಲನ್ನು ತೆರೆದು ನೋಡಲಾಗಿ ಅದರಲ್ಲಿ ಸಾಗವಾನಿ ಜಾತಿಯ ಸೈಜುಗಳು ಇರುವುದು ಕಂಡುಬಂತು. ಸದರ ವಾಹನದಲ್ಲಿದ್ದವರನ್ನು ವಿಚಾರಿಸಲಾಗಿ ಯಾವುದೇ ರಹದಾರಿ ಪಾಸ್ ವ ಪರ್ಮಿಟ್ ಇಲ್ಲವೆಂದು ಹಾಗೂ ಸದರಿ ಸೈಜುಗಳನ್ನು ಹುಕ್ಕಳಿ ಜಂಗಲಿನಿಂದ ಶ್ರೀ ರುದ್ರಾ ಹುಲಿಯಾ ಗೌಡ ಸಾ:ಹುಕ್ಕಳಿ ಇವರು ಗಾಡಿಯಲ್ಲಿ ತುಂಬಿಸಿ ಕೊಟ್ಟಿರುವುದಾಗಿ ತಿಳಿಸಿದರು. ಗಾಡಿಯಲ್ಲಿ ಇದ್ದವರ ಹೆಸರು 1) ಮಹಮ್ಮದ್ ಜಾಫರ್ ಅಬ್ದುಲ್ ಕರೀಂ ಡ್ರೈವರ್ 2) ದಿನೇಶ ಮಾದೇವ ನಾಯ್ಕ, ಸಾ:ಕಾನಗೋಡ 3) ದಯಾನಂದ ನಾರಾಯಣ ನಾಯ್ಕ, ಸಾ:ಕಾನಗೋಡ ಎಂದು ತಿಳಿಸಿದರು. ಸದರ ಸಾಗವಾನಿ ಸೈಜುಗಳ ಮೇಲೆ ಯಾವುದೇ ಇಲಾಖಾ ಛಾಪಾ ವಗೈರೆ ಇರಲಿಲ್ಲ. ಇದರಿಂದ ಸದರಿ ಸೈಜುಗಳನ್ನು ಅಕ್ರಮ ಸಾಗಾಣಿಕೆ ಮಾಡುತ್ತಿರುವುದಾಗಿ ತಿಳಿದು ಅವುಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿರುತ್ತದೆ. ಸದರಿ ವಾಹನದಲ್ಲಿದ್ದ ಸೈಜುಗಳನ್ನು ಅಳತೆ ಮಾಡಲಾಗಿ ಅವು 0.769 ಘ.ಮೀ ಇತ್ತು ವಾಹನ ಚಾಲಕನನ್ನು ವಿಚಾರಿಸಲಾಗಿ, ಸದರಿ ವಾಹನವು ಶ್ರೀ ರಾಘವೇಂದ್ರ.ಎಸ್.ಗೌಳಿ ಅರ್ಬನ್ ಬ್ಯಾಂಕ್ ಹಿಂಬಾಗ, ಯಲ್ಲಾಪುರ ರಸ್ತೆ ಶಿರಸಿ ಇವರದ್ದಿದ್ದು ತಾನು ಚಾಲಕನಾಗಿ ಕೆಲಸ ಮಾಡುತ್ತಿರುವುದಾಗಿ ತಿಳಿಸಿದನು. ನಂತರ ಸದರ ಮಾಲಿನ ಸಮೇತ ವಾಹನವನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಪ್ರಥಮ ವರ್ತಮಾನ ವರದಿ ತಯಾರಿಸಿ ಮುಂದಿನ ಕ್ರಮಕ್ಕಾಗಿ ವಲಯ ಅರಣ್ಯಾಧಿಕಾರಿ, ಜಾನ್ಮನೆರವರ ಮುಖಾಂತರ ಈ ಕೆಳ ಸಹಿದಾರರ ಮುಂದೆ ಹಾಜರು ಪಡಿಸಿರುತ್ತಾರೆ.

ದಿನಾಂಕ:3-10-2008 ರಂದು ವಲಯ ಅರಣ್ಯಾಧಿಕಾರಿ, ಜಾನ್ಮನೆರವರಿಗೆ ಜಪ್ತ ಪಡಿಸಲಾದ ವಾಹನ ಹಾಗೂ ಮಾಲನ್ನು ಇಲಾಖಾ ಭದ್ರತೆಯಲ್ಲಿಡುವಂತೆ ಆದೇಶಿಸಲಾಯಿತು. ಹಾಗೂ ಸದರಿ ವಾಹನದ ಮಾಲೀಕರ ವಿಳಾಸದ ಬಗ್ಗೆ ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿರಸಿರವರಿಗೆ ಪತ್ರಿಸಲಾಯಿತು. ತದನಂತರ ದಿನಾಂಕ:20-10-2008 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಸದರ ವಾಹನದ ಮಾಲೀಕರು ಶ್ರೀ ರಾಘವೇಂದ್ರ ಎಸ್ ಗೌಳಿ, ಯಲ್ಲಾಪುರ ರಸ್ತೆ, ಶಿರಸಿ ಎಂದು ವಿಳಾಸ ತಿಳಿಸಿದರು. ನಂತರ ಅರ್ಜಿದಾರರು, ತನ್ನ ವಾಹನವು ಯಂತ್ರ ಸ್ವರೂಪವಾಗಿದ್ದು ಉಪಯೋಗಿಸದೇ ಹಾಗೇ ಇಟ್ಟಲ್ಲಿ ತುಕ್ಕು ಹಿಡಿದು ಹಾಳಾಗುವದಾಗಿದೆ ತಾನು ಸದರ ವಾಹನವನ್ನು ಬಾಡಿಗೆ ನಾತೆ ಚಾಲಕನ್ನು ನೇಮಿಸಿ ಪ್ಯಾಸೆಂಜರ್‌ಗಳನ್ನು ಒಂದು ಊರಿನಿಂದ ಒಂದು ಊರಿಗೆ ಪ್ರವಾಸಕ್ಕೆ ಕರೆದುಕೊಂಡು ಹೋಗಲು ಬಾಡಿಗೆಗೆ ನೀಡುತ್ತಿದ್ದೇನು. ಮತ್ತು ಸದರಿ ಬಾಡಿಗೆಯಿಂದಲೇ ತನ್ನ ಜೀವನ ನಿರ್ವಹಣೆಯಾಗಬೇಕಾಗಿದ್ದು ಸದರ ವಾಹನವನ್ನು ಮದ್ಯಂತರ ವಶಕ್ಕೆ ಬಿಟ್ಟುಕೊಡಬೇಕಾಗಿ ವಿನಂತಿಸಿಕೊಂಡು ಅರ್ಜಿಸಲ್ಲಿಸಿದ್ದರು.

ಈ ಬಗ್ಗೆ ವಿಚಾರಣೆ ನಡೆಸಲಾಗಿ, ಸಹಾಯಕ ಸರ್ಕಾರಿ ಅಭಿಯೋಜಕರು ಶಿರಸಿ ಇವರು ಅರ್ಜಿದಾರರಿಗೆ ಬಿಟ್ಟುಕೊಟ್ಟಲ್ಲಿ ಅದರ ಬಣ್ಣ, ಆಕಾರ, ವಿನ್ಯಾಸ ಬದಲಾಯಿಸುವ ಸಾಧ್ಯತೆ ಇರುತ್ತದೆ. ಆದ್ದರಿಂದ ಬಿಟ್ಟು ಕೊಡಬಾರದಾಗಿ ವಿನಂತಿಸಿದಂತೆ, ಅರ್ಜಿದಾರರ ಪರ ವಕೀಲರ ಹಾಗೂ ಸರಕಾರಿ ವಕೀಲರ ಹೇಳಿಕೆಗಳನ್ನು ಪರಿಶೀಲಿಸಿ, ಸದರ ವಹನವನ್ನು ಮಧ್ಯಂತರ ವಶಕ್ಕೆ ಬಿಡುವ ಬಗ್ಗೆ ಅರ್ಜಿದಾರರು ಸಲ್ಲಿಸಿದ ಅರ್ಜಿಯನ್ನು ತಿರಸ್ಕರಿಸಿ ದಿ:29-8-2009 ರಂದು ಆದೇಶಿಸಲಾಯಿತು.

ತದನಂತರ ವಿಚಾರಣೆಯನ್ನು ಮುಂದುವರಿಸಲಾಗಿ ಶ್ರೀ ಈಶ್ವರ ಬಂಗಾರಪ್ಪ ಹೊಸೂರ, ವನಪಾಲಕರು ಇವರ ಸಾಕ್ಷಿ (PWI) ಎಂದು ಗುರುತಿಸಿದ್ದು, ಅವರ ಸಾಕ್ಷಿ ಸಾರಾಂಶ ಈ ರೀತಿ ಇದೆ. "ದಿ:24-09-2008 ರಂದು ಹುಕ್ಕಳಿಯಿಂದ ಕಳ್ಳ ಸಾಗಾಣಿಕೆ ಆಗುತ್ತಿದೆ ಎನ್ನುವ ಬಾತ್ಮಿ ಮೇರೆಗೆ, ವಲಯ ಅರಣ್ಯಾದಿಕಾರಿ ಹಾಗೂ ಸಿಬ್ಬಂದಿಗಳು ಸೇರಿ ಸದರಿ ದಿನ ಬೆಳಗಿನ ಜಾವ 4.00 ಗಂಟೆಗೆ ಹುಕ್ಕಿ ಕ್ರಾಸಿಗೆ ಹೋಗಿ ಸುಮಾರು 5.30ರವರೆಗೆ ಕಾದು ಕೂತಿದ್ದಾಗ ಹುಕ್ಕಳಿಯಿಂದ ಸಿದ್ದಾಪುರ ಕಡೆಗೆ ಒಂದು ವಾಹನ ಬರುತ್ತಿರುವುದನ್ನು ನೋಡಿ ತಡೆದು ನಿಲ್ಲಿಸಿದ್ದು, ಆ ವಾಹನದಲ್ಲಿ ಡ್ರೈವರ ಸೇರಿ 3 ಜನ ಇದ್ದರು, ಸದರ ವಾಹನವನ್ನು ಪರಿಶೀಲಿಸಲಾಗಿ 22 ಸಾಗವಾನಿ ಕೊರೆದ ತುಂಡುಗಳು ಇದ್ದವು. ವಾಹನದಲ್ಲಿದ್ದವರನ್ನು ವಿಚಾರಿಸಲಾಗಿ, ಯಾವುದೇ ಪಾಸ್ ವ ಪರ್ಮಿಟ್ ಇಲ್ಲವಾಗಿ ಅದನ್ನು ರುದ್ರ ಹುಲಿಯಾ ಎನ್ನುವವರು ವಾಹನದಲ್ಲಿ ತುಂಬಿಸಿ ಕಳಿಸಿರುವುದಾಗಿ ತಿಳಿಸಿದರು. ಸದರ ವಾಹನವು ಟ್ರ್ಯಾಕ್ಸ ತುಫಾನ ವಾಹನವಾಗಿದ್ದು, ಸಿಲ್ವರ ಕಲರ್ ಸಂಖ್ಯೆ ಕೆ-31 -4996 ಎಂದು ಇತ್ತು. ಕೂಡಲೇ ಸದರ ಮಾಲು ಕಳ್ಳತನದಿಂದ ತಂದಿದ್ದೆಂದು ತಿಳಿದು ಮಾಲುಗಳಿಗೆ ನಿಶಾನೆ ಮಾಡಿ, ವಾಹನ ಮತ್ತು ಮಾಲನ್ನು ತಮ್ಮ ತಾಬಾ ತೆಗೆದುಕೊಂಡು ಪಂಚರ ಸಮಕ್ಷಮ ಪಂಚನಾಮೆ ಮಾಡಲಾಯಿತು. ನಂತರ ವಲಯ ಕಛೇರಿಗೆ ಕರೆದುಕೊಂಡು ಹೋಗಿ ಪ್ರಕರಣ ದಾಖಲಿಸಲಾಯಿತು " ಈ ಸಾಕ್ಷಿ ವಿಚಾರಣೆಯಲ್ಲಿ ಜಪ್ತ ಪಡಿಸಿಕೊಂಡ ವಾಹನ ಹಾಗೂ

ಮಾಲನ್ನು ಪಂಚನಾಮೆ ಹಾಗೂ ತನಿಖಾ ವರದಿಯನ್ನು ಪ್ರಥಮ ವರ್ತಮಾನ ವರದಿಯನ್ನು ಗುರುತಿಸಿದ್ದು ಅವುಗಳನ್ನು ಕ್ರಮವಾಗಿ ನಿಶಾನೆ ಪಿ1, ನಿಶಾನೆ ಪಿ2 ಮತ್ತು ನಿಶಾನೆ ಪಿ3 ಎಂದು ಹಾಗೂ ವಾಹನದಲ್ಲಿದ್ದವರ ಹೇಳಿಕೆಯನ್ನು ನಿಶಾನೆ ಪಿ4 ಎಂತಲೂ ಗುರುತಿಸಿಕೊಳ್ಳಲಾಯಿತು. ಈ ಬಗ್ಗೆ ಮರು ವಿಚಾರಣೆ ಇಲ್ಲಾ.

ಅಭಿಯೋಜಕರ ಪರ 2 ನೇ ಸಾಕ್ಷಿಯಾಗಿ ಶ್ರೀ ನಾರಾಯಣ ಹುಲಿಯಾ ನಾಯ್ಕ, ಸಾ:ಹೆಗ್ಗರಣಿ (ಪಿಡಬ್ಲ್ಯು–2) ಇವರನ್ನು ವಿಚಾರಣೆಗೆ ಒಳಪಡಿಸಿದಾಗ, ಅವರ ಸಾಕ್ಷಿಯಲ್ಲಿ ನುಡಿದ ಅಂಶಗಳು ಪಿಡಬ್ಲ್ಯು–1 ಸಾಕ್ಷಿಯ ಹೇಳಿಕೆಯನ್ನು ದೃಢಪಡಿಸುತ್ತೇವೆ. ಈ ಸಾಕ್ಷಿಯು, ಜಪ್ತ ಪಡಿಸಲಾದ ಟ್ರ್ಯಾಕ್ಸ ತುಫಾನ ವಾಹನ ಕೆಎ–31–4996ನ್ನು ಸಾಗವಾನಿ ನಡೆಗಳನ್ನು, ತನ್ನನ್ನು ಪಂಚನನ್ನಾಗಿ ಮಾಡಿಕೊಂಡು ಜಪ್ತ ಪಡಿಸಿಕೊಂಡ ಬಗ್ಗೆ ವಿಚಾರಣೆಯಲ್ಲಿ ನುಡಿದಿರುತ್ತಾರೆ.

ಈ ಸಾಕ್ಷಿಯ ಪಂಚನಾಮೆಯನ್ನು ಗುರುತಿಸಿದ್ದು ಅದರಲ್ಲಿಯ ಸಾಕ್ಷಿಯ ಸಹಿಯನ್ನು ನಿಶಾನೆ ಪಿ1ಎ ಎಂದು ಗುರುತಿಸಲಾಯಿತು. ಈ ಬಗ್ಗೆ ಮರುವಿಚಾರಣೆ ಇಲ್ಲಾ.

ತದನಂತರ ಅಭಿಯೋಜಕರ ಪರ 3 ನೇ (ಪಿಡಬ್ಲ್ಯೂಡಿ–3) ಸಾಕ್ಷಿಯಾಗಿ ದತ್ತಾತ್ರಯ ವೆಂಟ್ರಮಣ ನಾಯ್ಕ, ಸಾ:ಅಮ್ಮಿನಳ್ಳಿ ಇವರನ್ನು ವಿಚಾರಣೆಗೆ ಒಳಪಡಿಸಿದಾಗ ಅವರ ಸಾಕ್ಷಿಯು PW–1 & PW2 ಸಾಕ್ಷಿಗಳ ಹೇಳಿಕೆಗಳನ್ನು ದೃಡಿಪಡಿಸುತ್ತಿದೆ. ಗುನ್ನೆ ನಡೆದ ಟ್ರ್ಯಾಕ್ಸ ತುಫಾನ ವಾಹನ, ಅದರಲ್ಲಿದ್ದ ಸಾಗವಾನಿ ಮಾಲನ್ನು ತನ್ನ ಸಮಕ್ಷಮ ಪರಿಶೀಲಿಸಿ ತನ್ನನು ಪಂಚನನ್ನಾಗಿಸಿಕೊಂಡು ಜಪ್ತ ಪಡಿಸಿರುವುದಾಗಿ ಸಾಕ್ಷಿಯಲ್ಲಿ ಹೇಳಿಕೆ ನೀಡಿರುತ್ತಾರೆ. ಪಂಚನಾಮೆಯಲ್ಲಿರುವ ಈ ಸಾಕ್ಷಿಯ ಸಹಿಯನ್ನು ನಿಶಾನೆ P–1B ಪಿ–1 ಅಂತ ಗುರುತಿಸಲಾಯಿತು. ಈ ಬಗ್ಗೆ ಮರು ವಿಚಾರಣೆ ಇಲ್ಲಾ.

ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ಅಭಿಯೋಜಕರ ಪರ ಸಾಕ್ಷಿಯ ಹೇಳಿಕೆಗಳನ್ನು ಪಡೆದಿದ್ದರಿಂದ ಹಾಗೂ ಅರ್ಜಿದಾರರ ಪರ ವಕೀಲರ ಪಾಟೀ ಸವಾಲುಗಳನ್ನು ಪರಿಗಣಿಸಿದ ನಂತರ ಈ ಪ್ರಕರಣದ ವಿಚಾರಣೆಯಲ್ಲಿ ಸಾಕ್ಷಿಗಳ ಹೇಳಿಕೆ ಮತ್ತು ಪಂಚನಾಮೆಯಲ್ಲಿರುವ ವಿಷಯಗಳನ್ನು ಪರಿಶೀಲಿಸಿದಾಗ, ಘಟನೆ ನಡೆದ ಸ್ಥಳ, ದಿನಾಂಕ ಅಮಾನತ್ತು ಪಡಿಸಿಕೊಂಡ ಪದಾರ್ಥಗಳು ಒಂದಕ್ಕೊಂದು ತಾಳೆಯಾಗುತ್ತವೆ. ವಾಹನ ಟ್ರಾಕ್ಸ್ ತುಫಾನ್ ನಂ.KA–31–4996ರಲ್ಲಿ ಸಾಗವಾನಿ ಜಾತಿಯ ನಡೆಗಳು ತುಂಬಿಕೊಂಡಿರುವದು. ಅದಕ್ಕೆ ಯಾವುದೇ ಪಾಸ್ ವ ಪರ್ಮಿಟ್ ಇಲ್ಲದೇ ಇರುವುದನ್ನು ಸವಿಸ್ತಾರವಾಗಿ ನುಡಿದಿರುತ್ತಾರೆ. ಅರ್ಜಿದಾರರ ಪರ ವಕೀಲರು ಮತ್ತು ಸಹಾಯಕ ಸರಕಾರಿ ಅಭಿಯೋಜಕರವರ ವಾದ ಪ್ರತಿವಾದಗಳನ್ನು ಅವಲೋಕಿಸಿ ಮತ್ತೆ ಅವರು ಮಂಡಿಸಿದ ಲಿಖಿತ ವಾದವನ್ನು ಪರಿಶೀಲಿಸಿದಾಗ ಈ ಪ್ರಕರಣದಲ್ಲಿ ನಮ್ಮ ಮುಂದೆ ಉದ್ಭವಿಸುವ ಪ್ರಶ್ನೆಗಳು.

1. ಈ ವಾಹನವು ಅರಣ್ಯ ಅಪರಾಧದಲ್ಲಿ ಭಾಗಿಯಾಗಿತ್ತೆ?
2. ಈ ವಾಹನದ ಮಾಲೀಕರು ಅರಣ್ಯ ಅಪರಾಧವನ್ನು ತಡೆಯಲು ಎಲ್ಲಾ ರೀತಿಯ ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಂಡಿರುವುದಾಗಿ ರುಜುವಾತು ಮಾಡಿದ್ದಾರೆಯೆ ?.

ಮೊದಲನೇ ಪ್ರಶ್ನೆಗೆ ಹೌದು ಸಕಾರಾತ್ಮಕವಾಗಿ ಉತ್ತರಿಸುತ್ತಾ, ಎರಡನೇ ಪ್ರಶ್ನೆಗೆ ಇಲ್ಲಾ ಎಂದು ಉತ್ತರಿಸುತ್ತಾ ಈ ಕೆಳಕಂಡಂತೆ ವಿವರಣೆ ನೀಡುತ್ತೇನೆ.

**ಮೊದಲನೇ ಪ್ರಶ್ನೆಗೆ ವಿವರಣೆ:**

1. ದಿ:24–09–2008 ರಂದು ವಾಹನವನ್ನು ಅಮಾನತ್ತು ಪಡಿಸಿಕೊಂಡಿರುವುದು ಮತ್ತು ಸದರಿ ವಾಹನದಲ್ಲಿ ಸಾಗವಾನಿ ಕಟ್ಟಿಗೆಗಳು ಇರುವುದು ಸಹಾಯಕ ಅಭಿಯೋಜಕರು ಮಂಡಿಸಿರುವ ಸಾಕ್ಷಿಯಿಂದ ರುಜುವಾತಾಗಿರುತ್ತದೆ.

**ಎರಡನೇ ಪ್ರಶ್ನೆಗೆ ವಿವರಣೆ:**

2. 71B ಪ್ರಕರಣದಲ್ಲಿ ವಾಹನ ಮಾಲೀಕರು ಅರಣ್ಯ ಅಪರಾಧವನ್ನು ತಡೆಯಲು ಎಲ್ಲಾ ರೀತಿಯ ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಂಡಿರುವ ಬಗ್ಗೆ ರುಜುವಾತು ಪಡಿಸಬೇಕಾಗಿದ್ದು ಅದು ಅವರ ಕರ್ತವ್ಯವಾಗಿರುತ್ತದೆ. ಈ ಪ್ರಕರಣದಲ್ಲಿ ಅರ್ಜಿದಾರರ ಪರ ವಕೀಲರು ವಾಹನವು ಅರಣ್ಯ ಅಪರಾಧದಲ್ಲಿ ಭಾಗಿಯಾದ ನಂತರ ವಾಹನ ಮಾಲೀಕರು ತೆಗೆದುಕೊಂಡ ಕ್ರಮದ ಮೇಲೆ ವಾಹನದ ಮಾಲೀಕರಿಗೂ ಚಾಲಕನಿಗೂ ಸಂಬಂಧವಿಲ್ಲ ಎನ್ನುವ ಅರ್ಥದಲ್ಲಿ ವಾದವನ್ನು ಮಂಡಿಸಿದ್ದಾರೆ. ಈ 71(ಬಿ)ಯ ಅರ್ಥವೇಂದರೆ ವಾಹನ ಮಾಲೀಕರು ಅರಣ್ಯ ಅಪರಾಧವನ್ನು ತಡೆಯಲು ಎಲ್ಲಾ ರೀತಿಯ ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಂಡಿರುವುದಾಗಿ ರುಜುವಾತು ಪಡಿಸಬೇಕಾಗಿರುತ್ತದೆ. ಆದರೆ ಈ ಪ್ರಕರಣದಲ್ಲಿ ಅದು ರುಜುವಾತಾಗಿರುವುದಿಲ್ಲ.

ಈ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ**

ಈ ಮೇಲಿನ ಅಂಶಗಳ ಹಾಗೂ ವಿವರಗಳ ಹಿನ್ನೆಲೆ ಯಲ್ಲಿ ವಲಯ ಅರಣ್ಯಾಧಿಕಾರಿ, ಜಾನ್ಮನೆ ವಲಯ, ಜಾನ್ಮೆನೆ ಇವರ ಅರಣ್ಯ ಮೊಕದ್ದಮೆ ಸಂಖ್ಯೆ.3/2008–09 ದಿ:24–09–2008ಕ್ಕೆ ಸಂಬಂಧಿಸಿದಂತೆ ಸರಕಾರದ ಪರ ಅಮಾನತ್ತು ಪಡಿಸಿದ್ದ ವಾಹನ ಟ್ರಾಕ್ಸ್ ತುಫಾನ್ ನಂ.KA–31–4996 ನಾಲ್ಕು ಮಾಲನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಈ ಆದೇಶ ಹೊರಡಿಸಿದ ದಿನಾಂಕದಿಂದ 30 ದಿನಗಳ ಒಳಗೆ ಸದರ ವಾಹನ ಮಾಲಿಕರು ಮೇಲ್ಮನವಿ ಸಲ್ಲಿಸದೇ ಇದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ.

ಈ ಆದೇಶವನ್ನು ದಿನಾಂಕ:16–12–2011 ರಂದು ಈ ಪ್ರಾಧಿಕಾರದ ಮೊಹರು ಹಾಕಿ ಹೊರಡಿಸಲಾಗಿದೆ.

**ಯತೀಶ್‌ಕುಮಾರ.ಡಿ., ರಾ.ಅ.ಸೇ.,**
ಅಧಿಕಾರಯುತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಶಿರಸಿ ವಿಭಾಗ, ಶಿರಸಿ

**ಪಿ.ಆರ್. ನಂ. 1355**

## ಶಿಕ್ಷಣ ಇಲಾಖೆ

## ಅಧಿಸೂಚನೆ

**ಸಂಖ್ಯೆ:ಇಡಿ 101 ಡಿಪಿಐ 2010, ಬೆಂಗಳೂರು, ದಿನಾಂಕ:01/12/2011**

**ವಿಷಯ:–** ಸಾರ್ವಜನಿಕ ಶಿಕ್ಷಣ ಇಲಾಖೆಯ, ಉಪ ನಿರ್ದೇಶಕರು ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ:01/01/2010 ರಲ್ಲಿದ್ದಂತೆ ಪ್ರಕಟಿಸುವ ಬಗ್ಗೆ.

ಸಾರ್ವಜನಿಕ ಶಿಕ್ಷಣ ಇಲಾಖೆಯ, ಗ್ರೂಪ್–'ಎ' ಹಿರಿಯ ಶ್ರೇಣಿಯ ಉಪ ನಿರ್ದೇಶಕರು ಹಾಗೂ ತತ್ಸಮಾನ ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:01/01/2010 ರಂದು ಇದ್ದಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 101 ಡಿಪಿಐ 2010, ದಿನಾಂಕ:05/03/2011 ರಂದು ಪ್ರಕಟಿಸಿ, ಈ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ ಭಾದಿತರಾದ ಅಧಿಕಾರಿಗಳು ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಒಂದು ತಿಂಗಳೊಳಗಾಗಿ ಆಕ್ಷೇಪಣೆಗಳಿದ್ದಲ್ಲಿ ಸಲ್ಲಿಸುವಂತೆ ತಿಳಿಸಲಾಗಿತ್ತು.

ಸದರಿ ಜೇಷ್ಠತಾ ಪಟ್ಟಿಯ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳಿಂದ ನಿಗಧಿತ ಅವಧಿಯಲ್ಲಿ ಸ್ವೀಕೃತವಾದ ಆಕ್ಷೇಪಣೆಗಳನ್ನು ಪರಿಶೀಲಿಸಿ, ಸಾರ್ವಜನಿಕ ಶಿಕ್ಷಣ ಇಲಾಖೆಯ, ಗ್ರೂಪ್–'ಎ' ಹಿರಿಯ ಶ್ರೇಣಿಯ ಉಪ ನಿರ್ದೇಶಕರು ಹಾಗೂ ತತ್ಸಮಾನ ವೃಂದದ ಅಧಿಕಾರಿಗಳ ದಿನಾಂಕ :01/01/2010 ರಲ್ಲಿದ್ದಂತೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಅನುಬಂಧದಲ್ಲಿರುವಂತೆ ಪ್ರಕಟಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ, (ಆಡಳಿತ)

**ಅಧಿಸೂಚನೆ ಸಂಖ್ಯೆ:ಇಡಿ 101 ಡಿಪಿಐ 2010, ದಿನಾಂಕ: 01/12/2011 ರ ಅನುಬಂಧ**

**ದಿನಾಂಕ:01–01–2010 ರಲ್ಲಿದ್ದಂತೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಹಾಗೂ ತತ್ಸಮಾನ ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿ**

| ಕ್ರ.ಸ | ಜೇ. ಸಂ | ಅಧಿಕಾರಿಗಳ ಹೆಸರು ಶ್ರೀ / ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ (ಗ್ರೂಪ್ ಬಿ) | ಗ್ರೂಪ್ ಎ ಕಿರಿಯ ಶ್ರೇಣಿ ವೃಂದದಲ್ಲಿ ಬಡ್ತಿ ಹೊಂದಿದ ದಿನಾಂಕ | ಉಪನಿರ್ದೇಶಕ ರಾಗಿ ಬಡ್ತಿ ಹೊಂದಿದ ದಿನಾಂಕ | ಜಾತಿ ಎಸ್.ಸಿ/ ಎಸ್.ಟಿ |
|---|---|---|---|---|---|---|---|
| 1 | 2 | 3 | 4 | 5 | | 6 | 7 |
| 1. | 1ಎ | ನಾರಾಯಣಭಟ್ ಕೆ | 04–06–33 | 12–11–56 | 10–09–65 | 01–07–70 | – |
| 2. | 08 | ಕೆ.ಬಿ.ಅಯ್ಯಪ್ಪ | 16–06–23 | 28–11–57 | 01–09–65 | 01–07–70 | – |
| 3. | 09 | ವಿ.ಎಸ್.ರಾಮಕೃಷ್ಣ | 17–04–22 | 16–12–57 | 18–10–65 | 01–07–70 | – |
| 4. | 10 | ಸಿ.ಎಸ್.ಕೃಷ್ಣರಾಜು | 15–02–18 | 16–12–57 | 01–12–65 | 02–07–70 | – |
| 5. | 11 | ಸಿ.ಕೆ.ನಾಗರಾಜ | 03–01–22 | 20–02–58 | 03–05–66 | 02–07–70 | – |
| 6. | 12 | ಅನಂತ ವಿಠಲರಾವ್ | 09–11–23 | 11–06–58 | 28–11–66 | 02–07–70 | – |
| 7. | 13 | ಮೋಹನ್‌ರಾವ್ | 31–01–19 | 03–06–58 | 28–11–66 | 02–07–70 | – |
| 8. | 14 | ಬಿಎ ಅಚ್ಚಯ್ಯ | 06–09–21 | 13–06–58 | 01–12–66 | 03–07–70 | – |
| 9. | 15 | ಕ್ರಿಸ್ಟಿನಾ ದೇವದಾಸ್ | 27–11–15 | 16–06–58 | 01–12–66 | 06–07–70 | – |
| 10. | 16 | ಫ್ಲೋರೆನ್ಸ್ ದೇವದಾಸ್ | 01–11–15 | 16–06–58 | 01–12–66 | 06–07–70 | – |
| 11. | 18 | ಗ್ರೇಸ್ ಗುರುಪುತ್ರ | 22–03–17 | 02–07–58 | 02–12–66 | 06–07–70 | – |
| 12. | 19 | ಜುಲ್ಕಾ ಬಿ | 19–07–17 | 02–07–58 | 02–12–66 | 06–07–70 | – |
| 13. | 23 | ಮಹಮ್ಮದ್ ಷಹಾಬುದ್ದೀನ್ | 26–08–20 | 26–07–58 | 02–12–66 | 09–07–70 | – |
| 14. | 24 | ಡಿ ಕೃಷ್ಣರಾವ್ | 24–01–17 | 25–08–58 | 04–12–66 | 13–07–70 | – |
| 15. | 26 | ಎಸ್ ರಾಮರಾವ್ | 07–05–20 | 03–09–58 | 06–12–66 | 13–07–70 | – |
| 16. | 27 | ಎಂ.ಗೋಪಾಲಚಾರ್ ರಾವ್ | 10–02–18 | 20–09–58 | 07–12–66 | 17–07–70 | – |
| 17. | 28 | ಭೀಮಸೇನರಾವ್ ಗೋಡಲ್ಕರ್ | 25–04–19 | 25–09–58 | 08–12–66 | 17–07–70 | – |

| 1 | 2 | 3 | 4 | 5 | | 6 | 7 |
|---|---|---|---|---|---|---|---|
| 18. | 29 | ಎನ್ ಪಿ ಪಟ್ವಾರಿ | 12–10–20 | – | – | 10–08–70 | – |
| 19. | 31 | ಎಸ್ ರಾಮಾನುಜಂ | 03–10–25 | 22–09–59 | 08–12–66 | 21–09–70 | – |
| 20. | 33 | ಶ್ರೀಮತಿ ಬಿಎ ಅಚ್ಚಯ್ಯ | 04–01–28 | 21–09–59 | 12–12–66 | 11–11–70 | – |
| 21. | 34 | ಸಿ ವಿಜಯರಾವ್ | 10–12–17 | 21–09–59 | 17–12–66 | 09–08–72 | – |
| 22. | – | ವಿನಾಯಕರಾವ್ ಕಲ್ಮಣ್‌ಕರ್ | 11–09–17 | – | – | 10–08–72 | – |
| 23. | | ಆರ್.ಎಸ್ ವೆಂಕೋಬರಾವ್ | 01–05–18 | – | – | 11–08–72 | – |
| 24. | 36 | ಬಿ ಎನ್ ಕಾಳಪ್ಪ | 15–04–26 | 12–06–59 | 18–03–74 | 12–08–72 | – |
| 25. | 37 | ಕೆ ಎ ಮುತ್ತಪ್ಪ | 03–11–23 | 21–10–59 | 18–03–74 | 18–08–72 | – |
| 26. | 38 | ಎ ಸುಬ್ಬರಾವ್ | 15–05–25 | 12–10–59 | 18–03–74 | 22–08–72 | – |
| 27. | | ಜೈನತ್ತುನ್ನೀಸಾ | 15–01–18 | – | – | 26–08–72 | – |
| 28. | | ಅಣ್ಣರಾವ್ ಶೆಟ್ಕರ್ | 02–09–20 | – | – | 02–09–72 | – |
| 29. | 39 | ಪಾಂಡುರಂಗಾಚಾರ್ಯ | 01–04–27 | 19–06–59 | 18–03–74 | 04–09–72 | – |
| 30. | 40 | ಕೆಎನ್.ನರಸಿಂಹಮೂರ್ತಿ | 02–01–24 | 23–10–59 | 18–03–74 | 06–09–72 | – |
| 31. | 41 | ಕೆ ಕೆ ವೀರಪ್ಪ | 19–08–27 | 28–10–59 | 18–03–74 | 15–09–72 | – |
| 32. | 42 | ಎಂ ಪಿ ಮಂಜುನಾಥ | 25–08–28 | 24–10–59 | 18–03–74 | 22–09–72 | – |
| 33. | 43 | ಕೆ ಬಿ ಸೋಮಯ್ಯ | 09–03–29 | 25–10–59 | 18–03–74 | 03–01–74 | – |
| 34. | 44 | ಎಂ ಎಂ ಪೂವಯ್ಯ | 16–06–28 | 26–10–59 | 18–03–74 | 02–06–74 | – |
| 35. | 45 | ಕೆ ಶ್ರೀನಿವಾಸನ್ | 28–05–27 | 29–10–59 | 18–03–74 | 21–06–74 | – |
| 36. | 46 | ಜಿ ವಾಸುದೇವ ಹೆರಳೆ | 04–06–28 | 04–11–59 | 18–03–74 | 21–06–74 | – |
| 37. | 47 | ಪಿ ಪಿ ಐಯ್ಯಪ್ಪ | 02–08–29 | 06–11–59 | 18–03–74 | 22–06–74 | – |
| 38. | | ವಿಠಲಾಚಾರ್ಯಕಡಲೂರ | 16–02–22 | – | – | 24–06–74 | – |
| 39. | 48 | ನಾರಾಯಣರಾವ್ ಖತ್ರೆ | 13–04–27 | 31–12–59 | 18–03–74 | 24–06–74 | – |
| 40. | 49 | ಜೆಡ್ಸನ್ ಕಾರ್ನಲೂಯಿಸ್ | 30–08–28 | 01–01–60 | 18–03–74 | 24–06–74 | – |
| 41. | 50 | ಮಾಣಿಕ್‌ರಾವ್ ಕುಲಕರ್ಣಿ | 11–12–27 | 01–01–60 | 18–03–74 | 24–06–74 | – |
| 42. | 57 | ಬಿ ಬಿ ಗಾವಂಕರ್ | 05–12–29 | – | 11–09–69 | 24–06–74 | – |
| 43. | 58 | ಕೆ ಶಾಂತಯ್ಯ | 31–08–34 | – | 11–09–69 | 25–06–74 | – |
| 44. | 59 | ಎಸ್‌ಎಂ.ರೋಷನ್‌ಬೇಗ್ | 12–06–25 | – | 16–09–69 | 25–06–74 | – |
| 45. | 60 | ಕೆ ಹನುಮಂತಯ್ಯ | 10–03–27 | – | 16–09–69 | 25–06–74 | – |
| 46. | 61 | ವಿ ಕೃಷ್ಣಶೆಟ್ಟಿ | 14–07–29 | – | 16–09–69 | 25–06–74 | – |
| 47. | 62 | ಸಿ ಹನುಮೇಗೌಡ | 06–08–30 | – | 15–09–69 | 25–06–74 | – |
| 48. | | ಎಂ ಟಿ ಕಾಳಾಚಾರೆ | 20–04–24 | – | – | 26–06–74 | – |
| 49. | 64 | ಆರ್ ಹನುಮಂತಯ್ಯ | 27–06–27 | – | 16–09–69 | 01–07–74 | – |
| 50. | 66 | ಎಸ್ ಜಿ ಪಾಟೀಲ್ | 08–09–31 | – | 22–09–69 | 04–07–74 | – |
| 51. | 67 | ಪಿ ಓಬಾ ನಾಯಕ್ | 12–05–25 | – | 13–09–69 | 08–07–74 | – |
| 52. | 68 | ಕೆ ಓ ಚಿಕ್ಕರಾಮಯ್ಯ | 21–05–28 | – | 16–09–69 | 17–04–74 | – |
| 53. | 69 | ಶ್ರೀರಂಗಮ್ಮ | 23–11–24 | – | 13–09–69 | 01–08–75 | – |
| 54. | 51 | ಸಾವಿತ್ರಿ ಬಾಯಿ | 27–12–24 | 26–01–60 | 18–03–74 | 28–11–75 | – |
| 55. | 52 | ಎಂ ಕೆ ಉತ್ತಪ್ಪ | 02–04–25 | 01–10–60 | 18–03–74 | 28–11–75 | – |
| 56. | 53 | ಎ ರಾಮಕೃಷ್ಣರಾವ್ | 13–08–32 | 03–10–60 | 18–03–74 | 29–11–75 | – |
| 57. | 54 | ಎ ಎಂ ಪೊನ್ನಪ್ಪ | 08–07–28 | 05–10–60 | 18–03–74 | 01–12–75 | – |

| 1 | 2 | 3 | 4 | 5 | | 6 | 7 |
|---|---|---|---|---|---|---|---|
| 58. | 55 | ಟಿ ಗುಂಡಾಚಾರ್ | 24–06–25 | 05–10–60 | 18–03–74 | 08–12–75 | – |
| 59. | 56 | ಜಿ ಎ ಜೋಷಿ | 02–02–26 | 05–10–60 | 18–03–74 | 17–01–76 | – |
| 60. | 70 | ಮಾರ್ತಾ ಶಾಂತಪ್ಪ | 06–10–24 | 10–10–60 | 18–03–74 | 29–05–76 | – |
| 61. | 71 | ಹೆಚ್ ಹನುಮಂತರಾವ್ | 09–03–26 | 12–10–60 | 18–03–74 | 17–09–76 | – |
| 62. | 72 | ಕೆ ಶ್ರೀಧರ ಶೆಟ್ಟಿ | 09–04–31 | 07–05–62 | 18–03–74 | 07–09–77 | – |
| 63. | 73 | ಟಿ ಎಸ್ ಭಾಗ್ಯಲಕ್ಷ್ಮಿ | 02–05–29 | – | 18–03–74 | 07–09–77 | – |
| 64. | 74 | ಎಂ.ವಿ.ಸಿದ್ದಲಿಂಗಮೂರ್ತಿ | 15–09–29 | – | 18–03–74 | 08–04–78 | – |
| 65. | 75 | ಕೆ ಗುರುರಾವ್ | 14–06–32 | – | 18–03–74 | 13–02–81 | – |
| 66. | 76 | ಎಸ್.ಆರ್.ಶೇಷಗಿರಿಯಪ್ಪ | 09–10–26 | – | 18–03–74 | 13–02–81 | – |
| 67. | 77 | ಬಿ ವಿ ಭದ್ರಪ್ಪ | 22–04–26 | – | 18–03–74 | 13–02–81 | – |
| 68. | 80 | ಎನ್ ಎಸ್ ನಾರಾಯಣ | 16–03–30 | 15–04–62 | 18–04–74 | 13–02–81 | – |
| 69. | 83 | ಬಿ ಚಂದ್ರಾಬಾಯಿ | 15–12–29 | – | 18–03–74 | 13–02–81 | – |
| 70. | 84 | ಎಲ್ ಶಾರದಮ್ಮ | 29–11–36 | 26–04–62 | 18–03–74 | 13–02–81 | – |
| 71. | 85 | ಬಿ ಭಗವಂತರಾವ್ | 07–10–26 | 12–10–60 | 18–03–74 | 13–02–81 | – |
| 72. | 86 | ಆರ್ ಜೆ ಭಾಸ್ಕರ್ | 05–03–29 | 17–10–60 | 02–08–77 | 13–02–81 | – |
| 73. | 87 | ಗೋಪಾಲಭಟ್ ಜೋಷಿ | 09–08–31 | 01–01–61 | 02–08–77 | 13–02–81 | – |
| 74. | 88 | ಕೆ ಕೆ ಆನಂದ್ | 01–11–30 | 01–01–61 | 02–08–77 | 13–02–81 | – |
| 75. | 89 | ಹೆಚ್.ಕೆ.ಲಕ್ಷ್ಮೀಪತಿಪುಟ್ಟಣ್ಣ | 03–07–32 | 27–01–61 | 02–08–77 | 13–02–81 | – |
| 76. | 90 | ಎ ಎ ಪೂವಯ್ಯ | 12–03–34 | 07–07–61 | 02–08–77 | 13–02–81 | – |
| 77. | 91 | ಕೆ ಎಸ್ ಇಂದಿರ | 15–07–33 | 19–07–61 | 02–08–77 | 28–02–81 | – |
| 78. | 92 | ಸಿ ಬಿ ಮುತ್ತಣ್ಣ | 25–12–30 | 10–07–65 | 02–08–77 | 31–03–81 | – |
| 79. | 95 | ಟಿ ಪಿ ಶಾಂತಾಬಾಯಿ | 25–03–33 | 04–09–61 | 02–08–77 | 30–04–81 | – |
| 80. | 97 | ಕೆ ಕೆ ಭೀಮಯ್ಯ | 10–05–32 | 25–09–61 | 02–08–77 | 31–05–81 | – |
| 81. | 98 | ಎಂ ಎ ಮುತ್ತಪ್ಪ | 13–11–27 | 30–10–61 | 02–08–77 | 30–06–81 | – |
| 82. | 99 | ಶಾಮಾರಾವ್‌ದೇಶಪಾಂಡೆ | 09–06–29 | 06–12–61 | 02–08–77 | 31–10–81 | – |
| 83. | 100 | ಹೆಚ್ ಭೀಮಸೇನರಾವ್ | 11–08–28 | 11–12–61 | 02–08–77 | 26–11–81 | – |
| 84. | 165 | ಎಸ್.ವಿ.ನರಸಿಂಹಮೂರ್ತಿ | 25–02–29 | 13–07–50 | 05–11–80 | 30–04–82 | – |
| 85. | 104 | ಎಸ್ ಸುಂದರಮೂರ್ತಿ | 30–04–31 | 13–12–61 | 02–08–77 | 30–06–82 | |
| 86. | 106 | ಕೃಷ್ಣರಾವ್ | 14–04–28 | 14–12–61 | 02–08–77 | 30–11–82 | – |
| 87. | 109 | ಶೆಲ್ವಪಿಳ್ಳೈ ಐಯ್ಯಂಗಾರ್ | 13–05–29 | 03–03–62 | 18–03–74 | 04–03–83 | – |
| 88. | 111 | ಬಿ ಎನ್ ರಾಘವೇಂದ್ರಚಾರ್ | 12–12–34 | 03–01–63 | 18–03–74 | 04–03–83 | – |
| 89. | 112 | ವೈ ಆರ್ ಅಚ್ಯುತರಾವ್ | 01–12–36 | 03–10–63 | 18–03–74 | 04–03–83 | – |
| 90. | 113 | ಎಂ.ಎಸ್.ಸತ್ಯನಾರಾಯಣ | 21–09–32 | 03–10–63 | 18–03–74 | 04–03–83 | – |
| 91. | | ಕೆ ಎಸ್ ರತ್ನಾಬಾಯಿ | 08–09–28 | – | – | 04–03–83 | – |
| 92. | 167 | ಯು.ವಾಸುದೇವ ಮಯ್ಯ | 08–09–28 | 01–08–59 | 05–11–80 | 04–03–83 | – |
| 93. | 168 | ಭಾಸ್ಕರ ರಾವ್ | 10–06–28 | 01–06–60 | 05–11–80 | 04–03–83 | – |
| 94. | 180 | ಕೆಜಿ ಸತ್ಯನಾರಾಯಣ | 09–05–28 | 09–06–60 | 05–11–80 | 30–04–83 | – |
| 95. | 181 | ಬಿವಿ ರಾಘವನ್ | 14–09–29 | 09–06–60 | 05–11–80 | 31–05–83 | – |
| 96. | | ಕೆಪಿ ವೆಂಕಟರಾಮಯ್ಯ | 05–07–28 | – | – | 18–06–83 | – |
| 97. | 172 | ಸಾರಾ ಎಸ್ ಅಮೀನ್ | 14–09–28 | 01–11–56 | 05–11–80 | 31–07–83 | – |

ಖಾಯಂ ಪೂರ್ವಾವಧಿಯು ನೌಕರರ ಸ್ವಯಂಕೃತ ಅಪರಾಧದಿಂದ ತೃಪ್ತಿಕರವೆಂದು ಘೋಷಣೆಯಾಗಿರುವುದಿಲ್ಲ. ಖಾಯಂ ಪೂರ್ವಾವಧಿ ಘೋಷಣೆಯಾಗದ ನೌಕರರನ್ನು ನೇಮಕಾತಿ ಪ್ರಾಧಿಕಾರವು ನೌಕರರ ಸೇವೆಯು ತೃಪ್ತಿಕರವಲ್ಲವೆಂದು ಕಂಡು ಬಂದಲ್ಲಿ ಸೇವೆಯಿಂದ ವಜಾ ಮಾಡುವ ಅಧಿಕಾರವನ್ನು ಕೆ.ಸಿ.ಎಸ್. (ಖಾಯಂ ಪೂರ್ವಾವದಿ) 1977 ನಿಯಮ 5(1)(ಬಿ) ರನ್ವಯ ಹೊಂದಿರುತ್ತದೆ.

ಆದ್ದರಿಂದ ಉಲ್ಲೇಖ(5)ರ ಈ ಕಛೇರಿ ಪತ್ರ ಸಮಸಂಖ್ಯೆ ದಿನಾಂಕ:19.6.2009, 6.7.2010 ಮತ್ತು 15.9.2011 ರಲ್ಲಿ ಸರ್ಕಾರಕ್ಕೆ ಪ್ರಸ್ತಾವಿಸಿ, ಸದರಿ ನೌಕರರು ಸರ್ಕಾರಿ ಕೆಲಸ ಕಾರ್ಯಗಳನ್ನು ನಿರ್ವಹಿಸುವುದರಲ್ಲಿ ವಿಫಲರಾಗಿದ್ದು, ಅದಕ್ಷ ನೌಕರರೆಂದು ಹಾಗೂ ಸರ್ಕಾರಿ ಕೆಲಸಕ್ಕೆ ಅಸಮರ್ಥರಾಗಿರುವುದರಿಂದ ಸರ್ಕಾರಿ ಸೇವೆಯಿಂದ ವಜಾ ಮಾಡುವಂತೆ ಅನುಮತಿ ನೀಡಲು ಸರ್ಕಾರಕ್ಕೆ ಮನವಿ ಮಾಡಲಾಗಿರುತ್ತದೆ. ಇದಕ್ಕೆ ಉತ್ತರವಾಗಿ ಉಲ್ಲೇಖ(1)ರ ಸರ್ಕಾರದ ಪತ್ರದ ಸಂಖ್ಯೆ:ಕಂ.ಇ.88.ಭೂದಾಸೇ(3)/2009, ದಿನಾಂಕ:18.12.2011 ರಲ್ಲಿ ಸದರಿ ನೌಕರರು ನೇಮಕಾತಿ ಹೊಂದಿದ ಹುದ್ದೆಗೆ ಸೂಕ್ತವಲ್ಲವೆಂದು ಮನವರಿಕೆಯಾದಲ್ಲಿ ಸೇವೆಯಿಂದ ಡಿಸ್‌ಚಾರ್ಜ್ ಮಾಡಬಹುದೆಂದು ಸ್ಪಷ್ಟನೆ ನೀಡಿರುತ್ತದೆ. ಈ ಮೇಲಿನ ಅಂಶಗಳನ್ನು ಒಳಗೊಂಡಂತೆ ಹಾಗೂ ಸರ್ಕಾರದ ಪತ್ರ ಉಲ್ಲೇಖ(1)ರ ದಿನಾಂಕ:18.11.2011 ರ ನಿರ್ದೇಶನದಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸಂಖ್ಯೆ:ಸಿಬ್ಬಂದಿ.ದ್ವಿ.ದ.ಭೂ.ಖಾಪೂಘೋ.2/2004–05, ದಿನಾಂಕ: 29–12–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ, ತಹಶೀಲ್ದಾರ್ ಕೊಳ್ಳೇಗಾಲ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಎನ್.ಆರ್.ಸಿದ್ದಯ್ಯ, ಭೂಮಾಪಕರು ಇವರು ನಿಗಧಿತ ಖಾಯಂ ಪೂರ್ವಾವಧಿಯಲ್ಲಿ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡದೆ, ಸದರಿ ಅವಧಿಯಲ್ಲೇ ಶಿಸ್ತು ಕ್ರಮಕ್ಕೆ ಒಳಗಾಗಿ ದಂಡನೆಗಳನ್ನು ವಿಧಿಸಿದ್ದು ಹಾಗೂ ಸತತವಾಗಿ 4 ತಿಂಗಳಿಗೂ ಮೀರಿ ಸರ್ಕಾರಿ ಕೆಲಸಕ್ಕೆ ಹಲವಾರು ಬಾರಿ ಅನಧಿಕೃತ ಗೈರು ಹಾಜರಾಗಿ ಸರ್ಕಾರಿ ಕೆಲಸದಲ್ಲಿ ಆಸಕ್ತಿ ಇಲ್ಲದೆ ಬೇಜವಾಬ್ದಾರಿತನದಿಂದ ವರ್ತಿಸಿ, ಕರ್ನಾಟಕ ನಾಗರೀಕ ಸೇವೆ(ನಡತೆ) 1966 ರ ನಿಯಮ 3 (i)(ii)(iii) ನ್ನು ಸ್ಪಷ್ಟವಾಗಿ ಉಲ್ಲಂಘಿಸಿರುತ್ತಾರೆ. ಆದ ಕಾರಣ ವಿ.ಮಂಜುಲ, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಸರ್ಕಾರದ ಪತ್ರದ ದಿನಾಂಕ:18.11.2011 ರ ನಿರ್ದೇಶನದ ಮೇರೆಗೆ ಹಾಗೂ ಕರ್ನಾಟಕ ಸಿವಿಲ್ ಸೇವಾ (ಪರೀವೀಕ್ಷಣೆ) ನಿಯಮಗಳು 1977 ರ ನಿಯಮ 5(1)(ಬಿ) ರನ್ವಯ ಸದರಿ ನೌಕರರನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ತೆಗೆದು ಹಾಕಲಾಗಿದೆ.

**ಆಯುಕ್ತರು,**
**ಭೂಮಾಪನ ಕಂದಾಯ ವ್ಯವಸ್ಥೆ ಮತ್ತು**
**ಭೂದಾಖಲೆಗಳು, ಬೆಂಗಳೂರು.**

**ಪಿ.ಆರ್. 1424**

**ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿ.**

**ಸಂ. ಸಿಬ್ಬಂದಿ.ಶಿಸ್ತು.ಟ್ರ್ಯಾಪ್.30/2003–04, ದಿನಾಂಕ: 23.12.2011.**

**ವಿಷಯ:** ಶ್ರೀ ಟಿ. ಗೋಪಾಲಯ್ಯ, ದ್ವಿತೀಯ ದರ್ಜೆ ಭೂಮಾಪಕರು, ತಾಲ್ಲೂಕು ಭೂಮಾಪನ ಕಛೇರಿ, ಗುಬ್ಬಿ, ತುಮಕೂರು ಜಿಲ್ಲೆ ಇವರ ವಿರುದ್ಧದ ಟ್ರ್ಯಾಪ್ ಪ್ರಕರಣ – ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:**
1) ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಬಿಡಿ–14/ಸಿಆರ್–5/2003 ಟಿಕೆಆರ್ ದಿನಾಂಕ: 15.11.2011.
2) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್. ಐಎನ್‌ವಿ.(ಜಿ).ಬಿಡಿ–14 ಸಿಆರ್–5/2003 ಟಿಕೆಆರ್ ದಿನಾಂಕ: 6/11.12.2003.
3) ಅಮಾನತ್ತುಗೊಳಿಸಿರುವ ಈ ಕಛೇರಿಯ ಸಮಸಂಖ್ಯೆ ನಡೆವಳಿ ದಿನಾಂಕ: 20.12.2003 ಮತ್ತು 22.7.2004.
4) ಅಭಿಯೋಜನಾ ಮಂಜೂರಾತಿಯನ್ನು ನೀಡಿರುವ ಭೂ.ಜಂ.ನಿ, ಬೆಂಗಳೂರು ಇವರ ನಡೆವಳಿ ಸಂಖ್ಯೆ: ಸಿಬ್ಬಂದಿ.ಶಿಸ್ತು.ಟ್ರ್ಯಾಪ್.5/2004–05 ದಿ : 29.6.2004.
5) 2ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು ಇವರ ಆದೇಶ ಪ್ರಕರಣ ಸಂಖ್ಯೆ: 67/2004 ದಿನಾಂಕ: 2.7.2011.
6) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ.9.ಸೇಇವಿ.95 ಬೆಂಗಳೂರು ದಿನಾಂಕ: 26.6.1996.

**ಪ್ರಸ್ತಾವನೆ:–**

ಶ್ರೀ ಟಿ. ಗೋಪಾಲಯ್ಯ, ದ್ವಿತೀಯ ದರ್ಜೆ ಭೂಮಾಪಕರು, ನಗರಮಾಪನ ಯೋಜನಾ ಕಛೇರಿ, ಶಿವಮೊಗ್ಗ ಇವರು ಈ ಹಿಂದೆ ತಾಲ್ಲೂಕು ಭೂಮಾಪನ ಕಛೇರಿ, ಗುಬ್ಬಿ ಕಛೇರಿಯಲ್ಲಿ ದ್ವಿತೀಯ ದರ್ಜೆ ಭೂಮಾಪಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಫಿರ್ಯಾದಿಯಾದ ಶ್ರೀ ಶಂಕರಯ್ಯ ಬಿನ್ ಕಳಸಯ್ಯ, ವಿನಾಯಕ ಬಡಾವಣೆ, ಗುಬ್ಬಿ ಇವರ ಪತ್ನಿಯ ಹೆಸರಿನಲ್ಲಿರುವ ಕಲ್ಲೂರು ಗ್ರಾಮದ ಸ.ನಂ. 44/4 ರಲ್ಲಿರುವ ಜಮೀನನ್ನು ಪೋಡು ಮಾಡಿ ಸ್ಕೆಚ್ ಕಾಪಿ ನೀಡಲು ರೂ.500–00 ಗಳ ಲಂಚದ ಹಣಕ್ಕೆ ಒತ್ತಾಯಿಸಿ, ದಿನಾಂಕ: 1.12.2003 ರಂದು ರೂ.500–00 ಗಳ ಲಂಚದ ಹಣವನ್ನು ಫಿರ್ಯಾದಿಯಿಂದ ಪಡೆಯುತ್ತಿದ್ದಾಗ ಲೋಕಾಯುಕ್ತ ರವರು ಬೀಸಿದ ಟ್ರ್ಯಾಪ್ ಪ್ರಕರಣದಲ್ಲಿ ಸಿಲುಕಿರುವ ಬಗ್ಗೆ ಉಲ್ಲೇಖ (2)ರ ಪತ್ರದ ಮೇರೆಗೆ ಈ

ಕಛೇರಿ ನಡೆವಳಿ ದಿನಾಂಕ: 20.12.2003 ರಲ್ಲಿ ಆರೋಪಿತರನ್ನು ಅಮಾನತ್ತಿನಲ್ಲಿಟ್ಟಿದ್ದು, ದಿನಾಂಕ: 22.7.2004 ರ ನಡೆವಳಿಯಲ್ಲಿ ಟ್ರ್ಯಾಪ್ ಪ್ರಕರಣದ ಇತ್ಯರ್ಥ ಕಾಯ್ದಿರಿಸಿ ಅಮಾನತ್ತಿನಿಂದ ತೆರವುಗೊಳಿಸಿ ಶ್ರೀ ಟಿ. ಗೋಪಾಲಯ್ಯ ರವರನ್ನು ಭೂದಾಖಲೆಗಳ ಸಹಾಯಕ ನಿರ್ದೇಶಕರು, ಚಿತ್ರದುರ್ಗ ಕಛೇರಿಗೆ ಪುನರ್‌ನೇಮಕ ಮಾಡಲಾಗಿರುತ್ತದೆ. ಸದರಿ ನೌಕರರನ್ನು ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು, ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಂಗಳೂರು ರವರು ದಿನಾಂಕ: 29.6.2004 ರ ನಡವಳಿಯಲ್ಲಿ ಮಂಜೂರಾತಿಯನ್ನು ನೀಡಿರುತ್ತಾರೆ.

ಸದರಿ ಟ್ರ್ಯಾಪ್ ಪ್ರಕರಣ ಕುರಿತು 2ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು ರವರಲ್ಲಿ ವಿಚಾರಣೆ ನಡೆದು ಸ್ಪೆಷಲ್ ಕೇಸ್ ನಂ. 67/2004 ದಿನಾಂಕ: 02.07.2011 ರ ತೀರ್ಪಿನಲ್ಲಿ ಶ್ರೀ ಟಿ.ಗೋಪಾಲಯ್ಯ ಇವರ ವಿರುದ್ಧದ ಆರೋಪವು ಸಾಬೀತಾಗಿ ಲಂಚ ನಿರೋಧಕ ಕಾಯಿದೆ 1988 ರ ಕಲಂ–7, ಕಲಂ 13 (1)(ಡಿ) ಸಹವಾಚನ 13 (2)ರ ಅಡಿಯಲ್ಲಿ 6 ತಿಂಗಳ ಕಠಿಣ ಸಜೆ ಹಾಗೂ ರೂ.3,000–00 ದಂಡ ಮತ್ತು 1 ವರ್ಷ ಕಠಿಣ ಸಜೆ ಹಾಗೂ ರೂ.5,000–00 ಗಳ ದಂಡ ವಿಧಿಸಿರುವ ಕಾರಣ ಸದರಿ ನೌಕರರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ ಸೂಕ್ತ ಕ್ರಮ ಜರುಗಿಸಲು ಕರ್ನಾಟಕ ಲೋಕಾಯುಕ್ತರವರು ಉಲ್ಲೇಖ (1)ರ ಪತ್ರದಲ್ಲಿ ಕೋರಿರುತ್ತಾರೆ.

ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ.9.ಸೇಇವಿ.95.ಬೆಂಗಳೂರು ದಿನಾಂಕ: 26.6.1996 ಮತ್ತು ಸರ್ವೋಚ್ಚ ನ್ಯಾಯಾಲಯದ ಪ್ರಕರಣ ಸಂಖ್ಯೆ: 770/2001 ದಿನಾಂಕ: 2.8.2001 ರನ್ವಯ, ನ್ಯಾಯಾಲಯವು ನೌಕರರಿಗೆ ಶಿಕ್ಷೆ ವಿಧಿಸಿ, ತೀರ್ಪು ನೀಡಿದ್ದಲ್ಲಿ ಸಂವಿಧಾನದ ಅನುಚ್ಛೇದ 311 (2) ರಡಿಯಲ್ಲಿನ 2ನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957 ರ ನಿಯಮ 14 (i) ರನ್ವಯ, ಕ್ರಿಮಿನಲ್ ಆರೋಪವು ನ್ಯಾಯಾಲಯದಲ್ಲಿ ಸಾಬೀತಾದಂತಹ ಸರ್ಕಾರಿ ನೌಕರರನ್ನು ಸೇವೆಯಿಂದ ವಜಾ ಮಾಡುವ ಅಥವಾ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಬಹುದಾಗಿದೆ ಎಂದೂ, ಒಂದು ವೇಳೆ ಮೇಲ್ಮನವಿಯಲ್ಲಿ ಆಪಾದಿತರು ಖುಲಾಸೆಯಾದಲ್ಲಿ, ಅವರನ್ನು ಸೇವೆಯಲ್ಲಿ ಪುನರ್‌ನೇಮಕಗೊಳಿಸಿ, ವಜಾಗೊಳಿಸದಿದ್ದಲ್ಲಿ ಲಭ್ಯವಾಗುತ್ತಿದ್ದ ಎಲ್ಲಾ ಸೇವಾ ಭತ್ಯೆಗಳಿಗೆ ಅರ್ಹರಾಗಿರುತ್ತಾರೆಂಬ ಸರ್ಕಾರದ ಸುತ್ತೋಲೆಯನ್ನು ಪರಿಗಣಿಸಿ, ಸದರಿ ನೌಕರರನ್ನು ಸೇವೆಯಿಂದ ವಜಾ ಮಾಡುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ವಿ. ಮಂಜುಲ, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ತುಮಕೂರು 2ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ತೀರ್ಪು ಸ್ಪೆಷಲ್ ಕೇಸ್ ನಂ.67/2004 ದಿನಾಂಕ : 02.07.2011 ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ.9.ಸೇಇವಿ.95 ಬೆಂಗಳೂರು ದಿನಾಂಕ: 26.6.1996 ರನ್ವಯ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರ ನಿಯಮ 9 (3) ರೊಂದಿಗೆ ಓದಿಕೊಂಡ ನಿಯಮ 8 (viii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಟಿ. ಗೋಪಾಲಯ್ಯ, ದ್ವಿತೀಯ ದರ್ಜೆ ಭೂಮಾಪಕರು, ನಗರಮಾಪನ ಯೋಜನಾ ಕಛೇರಿ, ಶಿವಮೊಗ್ಗ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಸರ್ಕಾರಿ ಸೇವೆಯಿಂದ ವಜಾಗೊಳಿಸಿದೆ.

**ಆಯುಕ್ತರು,**
**ಭೂಮಾಪನ ಕಂದಾಯ ವ್ಯವಸ್ಥೆ ಮತ್ತು**
**ಭೂದಾಖಲೆಗಳು, ಬೆಂಗಳೂರು.**

**ಪಿ.ಆರ್. 1385**

**ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿ.**

**ಸಂ. ಸಿಬ್ಬಂದಿ.ಶಿಸ್ತು.ಟ್ರ್ಯಾಪ್.12/2007–08, ದಿನಾಂಕ: 29.12.2011.**

**ವಿಷಯ:** ಶ್ರೀ ರಾಜಕುಮಾರ್ ವಾಲ್ದೊಡ್ಡಿ, ಭೂಮಾಪಕರು, ತಹಸೀಲ್ದಾರ್ ಕಛೇರಿ, ಬೀದರ್ ಜಿಲ್ಲೆ ಇವರ ವಿರುದ್ಧದ ಟ್ರ್ಯಾಪ್ ಪ್ರಕರಣ – ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:**

1) ಉಪ ಪೋಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಜಿ–6/ಸಿಆರ್–2/2008 ಬೀದರ್ ದಿನಾಂಕ: 14.12.2011.
2) ಅಪರ ಪೋಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರಸಂಖ್ಯೆ: ಲೋಕ್/ಐಎನ್‌ವಿ(ಜಿ)/ಜಿ–6/ಸಿಆರ್–2/2008, ಬೀದರ್, ದಿನಾಂಕ 31.1.2008.
3) ಅಮಾನತ್ತುಗೊಳಿಸಿರುವ ಈ ಕಛೇರಿಯ ಸಮಸಂಖ್ಯೆ ನಡೆವಳಿ ದಿನಾಂಕ 7.2.2008 ಮತ್ತು 4.9.2008.
4) ಅಭಿಯೋಜನಾ ಮಂಜೂರಾತಿಯನ್ನು ನೀಡಿರುವ ಈ ಕಛೇರಿ ಸಮಸಂಖ್ಯೆ ನಡೆವಳಿ ದಿನಾಂಕ 30.4.2009.
5) ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ವಿಶೇಷ ನ್ಯಾಯಾಧೀಶರು, ಬೀದರ್ ಇವರ ಆದೇಶ ಸ್ಪೆಷಲ್ ಕೇಸ್(ಪಿ.ಸಿ. ಆಕ್ಟ್) ನಂ.1/2009, ದಿನಾಂಕ 29.10.2011.
6) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ.9.ಸೇಇವಿ.95 ಬೆಂಗಳೂರು ದಿನಾಂಕ: 26.6.1996.

**ಪ್ರಸ್ತಾವನೆ:–**

ಶ್ರೀ ರಾಜಕುಮಾರ್ ವಾಲ್ದೊಡ್ಡಿ, ದ್ವಿತೀಯ ದರ್ಜೆ ಭೂಮಾಪಕರು, ತಹಸೀಲ್ದಾರ್ ಕಛೇರಿ, ಬೀದರ್ ಆದ ಇವರು ಈ ಹಿಂದೆ ತಹಸೀಲ್ದಾರ್, ಬೀದರ್ ಕಛೇರಿಯಲ್ಲಿ ದ್ವಿತೀಯ ದರ್ಜೆ ಭೂಮಾಪಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಫಿರ್ಯಾದಿಯಾದ ಶ್ರೀ ಷಾ ಇಬ್ರಾಹಿಂ ಖಾದ್ರಿರವರು ಬೀದರ್ ನಗರದಲ್ಲಿ ಖರೀದಿಸಿದ 6 ಎಕರೆ 9 ಗುಂಟೆ ಜಮೀನನ್ನು ಅಳತೆ ಮಾಡಿ ಸ್ಕೆಚ್ ನೀಡಲು ರೂ. 3,000/– ಗಳ ಲಂಚದ ಹಣಕ್ಕೆ ಒತ್ತಾಯಿಸಿ, ಮುಂಗಡವಾಗಿ ರೂ.2,000/– ಗಳನ್ನು ಪಡೆದಿದ್ದು, ಉಳಿದ ರೂ. 1,000/–ಗಳ ಲಂಚದ ಹಣಕ್ಕೆ ಒತ್ತಾಯಿಸಿ, ದಿನಾಂಕ: 24.1.2008 ರಂದು ರೂ.1,000–00 ಗಳ ಲಂಚದ ಹಣವನ್ನು ಫಿರ್ಯಾದಿಯಿಂದ ಪಡೆಯುತ್ತಿದ್ದಾಗ ಲೋಕಾಯುಕ್ತ ರವರು ಬೀಸಿದ ಟ್ರ್ಯಾಪ್ ಪ್ರಕರಣದಲ್ಲಿ ಸಿಲುಕಿರುವ ಬಗ್ಗೆ ಉಲ್ಲೇಖ (2)ರ ಪತ್ರದ ಮೇರೆಗೆ ಈ ಕಛೇರಿ ನಡೆವಳಿ ದಿನಾಂಕ: 7.2.2008 ರಲ್ಲಿ ಆರೋಪಿತರನ್ನು ಅಮಾನತ್ತಿನಲ್ಲಿಟ್ಟಿದ್ದು, ದಿನಾಂಕ: 4.9.2008 ರ ನಡೆವಳಿಯಲ್ಲಿ ಟ್ರ್ಯಾಪ್ ಪ್ರಕರಣದ ಇತ್ಯರ್ಥ ಕಾಯ್ದಿರಿಸಿ ಅಮಾನತ್ತಿನಿಂದ ತೆರವುಗೊಳಿಸಿ ಶ್ರೀ ರಾಜಕುಮಾರ್ ವಾಲ್ದೊಡ್ಡಿ ರವರನ್ನು ತಹಸೀಲ್ದಾರ್, ಅಫ್‌ಜಲಪುರ ಕಛೇರಿಗೆ ಪುನರ್‌ನೇಮಕ ಮಾಡಲಾಗಿರುತ್ತದೆ. ಸದರಿ ನೌಕರರನ್ನು ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು, ಈ ಕಛೇರಿಯ ದಿನಾಂಕ: 30.4.2009 ರ ನಡವಳಿಯಲ್ಲಿ ಮಂಜೂರಾತಿಯನ್ನು ನೀಡಲಾಗಿರುತ್ತದೆ.

ಸದರಿ ಟ್ರ್ಯಾಪ್ ಪ್ರಕರಣ ಕುರಿತು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ವಿಶೇಷ ನ್ಯಾಯಾಧೀಶರು, ಬೀದರ್ ರವರಲ್ಲಿ ವಿಚಾರಣೆ ನಡೆದು ಸ್ಪೆಷಲ್ ಕೇಸ್ ನಂ. 1/2009 ದಿನಾಂಕ: 29.10.2011 ರ ತೀರ್ಪಿನಲ್ಲಿ ಶ್ರೀ ರಾಜಕುಮಾರ್ ವಾಲ್ದೊಡ್ಡಿ ಇವರ ವಿರುದ್ಧದ ಆರೋಪವು ಸಾಬೀತಾಗಿ ಲಂಚ ನಿರೋಧಕ ಕಾಯಿದೆ 1988 ರ ಕಲಂ–7 ರಡಿಯಲ್ಲಿ ಆರೋಪಗಳು ಸಾಬೀತಾಗಿದ್ದಕ್ಕೆ, 1 ವರ್ಷ ಕಠಿಣ ಸಜೆ ಮತ್ತು ರೂ. 3,000/– ದಂಡ ಹಾಗೂ ಕಲಂ 13 (1)(ಡಿ) ರಡಿಯಲ್ಲಿ ಅಪರಾಧವು ಸಾಬೀತಾಗಿದ್ದಕ್ಕೆ 1 ವರ್ಷ ಕಠಿಣ ಸಜೆ ಮತ್ತು ರೂ. 3,000/– ದಂಡ ವಿಧಿಸಿರುವ ಕಾರಣ ಸದರಿ ನೌಕರರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ ಸೂಕ್ತ ಕ್ರಮ ಜರುಗಿಸಲು ಕರ್ನಾಟಕ ಲೋಕಾಯುಕ್ತರವರು ಉಲ್ಲೇಖ (1)ರ ಪತ್ರದಲ್ಲಿ ಕೋರಿರುತ್ತಾರೆ.

ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ.9.ಸೇಇವಿ.95.ಬೆಂಗಳೂರು ದಿನಾಂಕ: 26.6.1996 ಮತ್ತು ಸರ್ವೋಚ್ಛ ನ್ಯಾಯಾಲಯದ ಪ್ರಕರಣ ಸಂಖ್ಯೆ: 770/2001 ದಿನಾಂಕ: 2.8.2001 ರನ್ವಯ, ನ್ಯಾಯಾಲಯವು ನೌಕರರಿಗೆ ಶಿಕ್ಷೆ ವಿಧಿಸಿ, ತೀರ್ಪು ನೀಡಿದ್ದಲ್ಲಿ ಸಂವಿಧಾನದ ಅನುಚ್ಛೇದ 311 (2) ರಡಿಯಲ್ಲಿನ 2ನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957 ರ ನಿಯಮ 14 (i) ರನ್ವಯ, ಕ್ರಿಮಿನಲ್ ಆರೋಪವು ನ್ಯಾಯಾಲಯದಲ್ಲಿ ಸಾಬೀತಾದಂತಹ ಸರ್ಕಾರಿ ನೌಕರರನ್ನು ಸೇವೆಯಿಂದ ವಜಾ ಮಾಡುವ ಅಥವಾ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಬಹುದಾಗಿದೆ ಎಂದೂ, ಒಂದು ವೇಳೆ ಮೇಲ್ಮನವಿಯಲ್ಲಿ ಆಪಾದಿತರು ಖುಲಾಸೆಯಾದಲ್ಲಿ, ಅವರನ್ನು ಸೇವೆಯಲ್ಲಿ ಪುನರ್‌ನೇಮಕಗೊಳಿಸಿ, ವಜಾಗೊಳಿಸದಿದ್ದಲ್ಲಿ ಲಭ್ಯವಾಗುತ್ತಿದ್ದ ಎಲ್ಲಾ ಸೇವಾ ಭತ್ಯೆಗಳಿಗೆ ಅರ್ಹರಾಗಿರುತ್ತಾರೆಂಬ ಸರ್ಕಾರದ ಸುತ್ತೋಲೆಯನ್ನು ಪರಿಗಣಿಸಿ, ಸದರಿ ನೌಕರರನ್ನು ಸೇವೆಯಿಂದ ವಜಾ ಮಾಡುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ವಿ. ಮಂಜುಳ, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಬೀದರ್‌ನ ಜಿಲ್ಲಾ ಮತ್ತು ಪ್ರಧಾನ ಸತ್ರ ನ್ಯಾಯಾಲಯದ ವಿಶೇಷ ನ್ಯಾಯಾಧೀಶರ ತೀರ್ಪು ಸ್ಪೆಷಲ್ ಕೇಸ್ ನಂ.1/2009 ದಿನಾಂಕ : 29.10.2011 ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ.9.ಸೇಇವಿ.95 ಬೆಂಗಳೂರು ದಿನಾಂಕ: 26.6.1996 ರನ್ವಯ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರ ನಿಯಮ 9 (3) ರೊಂದಿಗೆ ಓದಿಕೊಂಡ ನಿಯಮ 8 (viii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಾಜಕುಮಾರ್ ವಾಲ್ದೊಡ್ಡಿ, ದ್ವಿತೀಯ ದರ್ಜೆ ಭೂಮಾಪಕರು, ತಹಸೀಲ್ದಾರ್ ಕಛೇರಿ, ಬೀದರ್ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಸರ್ಕಾರಿ ಸೇವೆಯಿಂದ ವಜಾಗೊಳಿಸಿದೆ.

**ಆಯುಕ್ತರು,**
**ಭೂಮಾಪನ ಕಂದಾಯ ವ್ಯವಸ್ಥೆ ಮತ್ತು**
**ಭೂದಾಖಲೆಗಳು, ಬೆಂಗಳೂರು.**

**ಪಿ.ಆರ್. 1425**

**ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡೆವಳಿ**
**ಸಂ.ಸಿಬ್ಬಂದಿ.ಶಿಸ್ತು.ಮೇಲ್ಮನವಿ.25/2005–06, ದಿನಾಂಕ: 12–12–2011**

**ವಿಷಯ:** ಶ್ರೀ ಈರದಾಸಪ್ಪ ಈರಪ್ಪ ದ್ವಿ.ದ.ಭೂ. ತಹಸೀಲ್ದಾರ್ ಕಛೇರಿ, ದೇವದುರ್ಗ ರಾಯಚೂರು ಜಿಲ್ಲೆ ಇವರ ಮೇಲಿನ ಲಂಚ ಸ್ವೀಕಾರ ಪ್ರಕರಣದಲ್ಲಿ ಆರೋಪವು ಸಾಬೀತಾಗಿದ್ದು, ಸದರಿ ನೌಕರರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಉಲ್ಲೇಖ:**

1) ಕರ್ನಾಟಕ ಲೋಕಾಯುಕ್ತ ಪೋಲೀಸ್ ವಿಂಗ್ ಬೆಂಗಳೂರು ಇವರ ಪತ್ರ ಸಂ.ಲೋಕ್.ಐ.ಎನ್.ವಿ. (ಜಿ)/ಎಲ್.44 ಸಿಆರ್.10/99 ಜಿ.ಸಿ.ಕೆ.ಟಿ ದಿ:13–10–99.
2) ಭೂ.ಜಂ.ನಿ. ಬೆಳಗಾವಿ ಇವರ ನಡೆವಳಿ ಆದೇಶ ಸಂ.ಸಿಬ್ಬಂದಿ. ಶಿಸ್ತು.ಟ್ರ್ಯಾಪ್.20/99–2000 ದಿ:17–11–1999 ಮತ್ತು 30–5–2000.

3) ಬಾಗಲಕೋಟೆ ಪ್ರಧಾನ ಮತ್ತು ಸತ್ರ ನ್ಯಾಯಾಲಯ ವಿಶೇಷ ನ್ಯಾಯಾಧೀಶರು ಇವರ ಆದೇಶ ವಿಶೇಷ ಕೇಸ್ ಸಂ.46/01 ದಿ:21-6-2005.
4) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂ.ಲೋಕ್.ಐ.ಎನ್.ವಿ.(ಜಿ) ಎಲ್. 44/ಸಿಆರ್.10/00 ಜಿಜಿಕೆಟಿ ದಿ:22-7-2005.
5) ಸರ್ಕಾರದ ಸುತ್ತೋಲೆ ಸಂ.ಸಿ.ಆ.ಸು.ಇ.9 ಸೆಇವಿ 99 ದಿ:26-6-96.
6) ಈ ಕಛೇರಿಯ ಇದೇ ಸಮಸಂಖ್ಯೆಯ ಪತ್ರ (ಸರ್ಕಾರಕ್ಕೆ ವಿಳಾಸಿಸಿದೆ) ದಿ:20-8-2005.
7) ಸರ್ಕಾರದ ಪತ್ರ ಸಂ.ಕಂ.ಇ 135 ಭೂದಾಸೇ(3) 2005, ದಿ:1-10-2005.
8) ಈ ಕಛೇರಿಯ ನಡೆವಳಿ ಆದೇಶ ಸಂ.ಸಿಬ್ಬಂದಿ.ಶಿಸ್ತು.ಟ್ರ್ಯಾಪ್.21/99-2000 ದಿ:22-11-2005.
9) ಸರ್ಕಾರದ ಆದೇಶ ಸಂ.ಕಂ.ಇ 62 ಭೂದಾಸೇ(3)2006 ದಿ: 20-7-2006.
10) ಈ ಕಛೇರಿಯ ನಡೆವಳಿ ಆದೇಶ ಸಮಸಂಖ್ಯೆ ದಿ:2-9-2006.
11) ಕರ್ನಾಟಕ ಉಚ್ಚ ನ್ಯಾಯಾಲಯ ಸರ್ಕ್ಯೂಟ್ ಬೆಂಚ್ ಧಾರವಾಡ ಇವರ ಕ್ರಿಮಿನಲ್ ಅಪೀಲು ಸಂ.1237/2005 ರ ಆದೇಶ ದಿ:13-7-2011.

**ಪ್ರಸ್ತಾವನೆ:-**

ಶ್ರೀ ಈರದಾಸಪ್ಪ ಈರಪ್ಪ, ದ್ವಿತೀಯ ದರ್ಜೆ ಭೂಮಾಪಕರು ಇವರು ಈ ಹಿಂದೆ ತಾಲ್ಲೂಕು ಭೂಮಾಪನ ಕಛೇರಿ, ಬೀಳಗಿ ಬಾಗಲಕೋಟೆ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅಪರ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಂಗ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ವರದಿ ಪ್ರಕಾರ ಶ್ರೀ ಕೆ.ಎಂ.ಯಳಗುತ್ತಿ ಸಾ: ಸುನಗಾ ಬೀಳಗಿ ತಾಲ್ಲೂಕು ಬಾಗಲಕೋಟೆ ಜಿಲ್ಲೆ ಇವರು ದಿ:15-9-99 ರಂದು ಪೊಲೀಸ್ ಇನ್ಸ್‌ಪೆಕ್ಟರ್ ಕರ್ನಾಟಕ ಲೋಕಾಯುಕ್ತ ಬಾಗಲಕೋಟೆ ಠಾಣೆಯಲ್ಲಿ ಹಾಜರಾಗಿ ಶ್ರೀ ಈರದಾಸಪ್ಪ ಈರಪ್ಪ, ದ್ವಿತೀಯ ದರ್ಜೆ ಭೂಮಾಪಕರು, ಭೂದಾಖಲೆಗಳ ಇಲಾಖೆ, ಬೀಳಗಿ ಇವರ ವಿರುದ್ಧ ದೂರು ನೀಡಿ ಸ.ನಂ.43 ಸುನಗಾ ಗ್ರಾಮದ ಭೂಮಿಯನ್ನು ಮೋಜಣಿ ಮಾಡಲು ರೂ.500-00 (ಐದು ನೂರು ರೂಪಾಯಿ) ಗಳ ಲಂಚವನ್ನು ಕೇಳಿದರೆಂದು ಬಾಗಲಕೋಟೆ ಲೋಕಾಯುಕ್ತರು ಟ್ರ್ಯಾಪ್ ಮಾಡಿದ್ದು ಇವರ ವಿರುದ್ಧ ಸಂ.10/99 ರಲ್ಲಿ ಕ್ರಿಮಿನಲ್ ಮೊಕದ್ದಮೆ ದಾಖಲಾಗಿರುವ ಕಾರಣ ಈ ಹಿಂದಿನ ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಳಗಾವಿ ಇವರ ನಡೆವಳಿ ದಿ:17-11-99 ರ ಆದೇಶದಲ್ಲಿ ಸದರಿ ಆರೋಪಿತ ನೌಕರರನ್ನು ಅಮಾನತ್ತಿನಲ್ಲಿಟ್ಟು ಅವರು ಹೊಂದಿರುವ ಹುದ್ದೆಯ ಹಕ್ಕನ್ನು ಹಿಂದಿನ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಹಾವೇರಿ ಕಛೇರಿಗೆ ವರ್ಗಾಯಿಸಲಾಗಿದೆ. ದಿ:30-5-2000 ರ ಆದೇಶದಲ್ಲಿ ಅಮಾನತ್ತಿನಿಂದ ತೆರವುಗೊಳಿಸಿ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಶಿರಸಿ ಕಛೇರಿಗೆ ಪುನರ್ ನೇಮಕ ಮಾಡಿದ್ದು ನೌಕರರು ದಿ:5-6-2000 ರ ಪೂರ್ವಾಹ್ನ ಕೆಲಸಕ್ಕೆ ಹಾಜರಾಗಿರುತ್ತಾರೆ.

ಇವರ ವಿರುದ್ಧ ಕ್ರಿಮಿನಲ್ ಪ್ರಕರಣ ಬಾಗಲಕೋಟೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ವಿಶೇಷ ಕೇಸ್ ಸಂ.46/01 ರಲ್ಲಿ ದಿ:16-11-2000 ರಂದು ಆರೋಪಿಯನ್ನು ಅಭಿಯೋಜನೆಗೆ ಒಳಪಡಿಸಿದ್ದು, ಉಲ್ಲೇಖ(4) ರ ಪೊಲೀಸ್ ಮಹಾ ನಿರ್ದೇಶಕರು ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರು ದಿ:22-7-2005 ರ ಪತ್ರದಲ್ಲಿ ಆರೋಪಿತ ನೌಕರರು ಮಾಡಿದ ಅಪರಾಧಕ್ಕಾಗಿ ದಿ:21-6-2005 ಬಾಗಲಕೋಟೆ ಜಿಲ್ಲಾ ಪ್ರಧಾನ ಮತ್ತು ಸತ್ರ ನ್ಯಾಯಾಲಯದ ತೀರ್ಪಿನಲ್ಲಿ ಆರೋಪ ಸಾಬೀತಾಗಿರುವುದರಿಂದ ಆರೋಪಿತ ನೌಕರರನ್ನು ತಕ್ಷಣದಿಂದ ಸೇವೆಯಿಂದ ತಕ್ಷಣದಿಂದ ವಜಾಗೊಳಿಸುವಂತೆ ಸೂಕ್ತ ಕ್ರಮ ಕೈಗೊಳ್ಳಲು ಕೋರಿರುವ ಹಿನ್ನೆಲೆಯಲ್ಲಿ ಉಲ್ಲೇಖ(5) ರ ಸರ್ಕಾರಿ ಸುತ್ತೋಲೆ ದಿ:26-6-96 ರಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 14(1) ರನುಸಾರ ಸದರಿ ನಿಯಮಗಳು 11,12 ಮತ್ತು 13 ರಲ್ಲಿ ಏನೇ ಹೇಳಲಾಗಿದ್ದರೂ ಕ್ರಿಮಿನಲ್ ನ್ಯಾಯಾಲಯದಲ್ಲಿ ಕ್ರಿಮಿನಲ್ ಆರೋಪಕ್ಕಾಗಿ ದೋಷಸಿದ್ದಿಯಾದ ಸರ್ಕಾರಿ ನೌಕರರನ್ನು ಪುನ: ಇಲಾಖಾ ವಿಚಾರಣೆಗೆ ಒಳಪಡಿಸಿದೆಯೇ ಸೇವೆಯಿಂದ ವಜಾ ಮಾಡುವ ಅಥವಾ ತೆಗೆದುಹಾಕುವ ಅಥವಾ ಕೆಳದರ್ಜೆಗೆ ಇಳಿಸುವ ದಂಡನೆಯನ್ನು ವಿಧಿಸಬಹುದಾಗಿದೆ ಎಂದು ಆದೇಶವಿರುತ್ತದೆ.

ಈ ಪ್ರಕರಣದಲ್ಲಿ ಉಲ್ಲೇಖ(6) ರ ಈ ಕಛೇರಿಯ ದಿ:20-8-2005 ರಲ್ಲಿ ಸದರಿ ಆರೋಪಿ ನೌಕರರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ ಅನುಮತಿ ನೀಡುವಂತೆ ಕೋರಿ ಸರ್ಕಾರಕ್ಕೆ ಪತ್ರ ಬರೆದಿದ್ದು, ಉಲ್ಲೇಖ(7) ರ ಸರ್ಕಾರದ ಪತ್ರ ದಿ:1-10-2005 ರಲ್ಲಿ ಸರ್ಕಾರದ ಸುತ್ತೋಲೆ ದಿ:26-6-1996 ರ ಸೂಚನೆಗಳನ್ವಯ ಅಗತ್ಯ ಕ್ರಮ ಕೈಗೊಳ್ಳುವಂತೆ ಆದೇಶ ನೀಡಿರುವ ಹಿನ್ನೆಲೆಯಲ್ಲಿ ಉಲ್ಲೇಖ(8) ರ ಈ ಕಛೇರಿಯ ಆದೇಶದಲ್ಲಿ ಸದರಿ ನೌಕರರನ್ನು ಸೇವೆಯಿಂದ ವಜಾಗೊಳಿಸಿರುವ ದಂಡನೆ ವಿಧಿಸಿ ಆದೇಶಿಸಲಾಗಿರುತ್ತದೆ.

ಈ ಆದೇಶದ ವಿರುದ್ಧ ವಜಾಗೊಂಡ ನೌಕರರು ಸರ್ಕಾರಕ್ಕೆ ದಿ:8-3-2006 ರಂದು ಸಲ್ಲಿಸಿದ ಮೇಲ್ಮನವಿ ಮೇರೆಗೆ ಸರ್ಕಾರವು ಮೇಲ್ಮನವಿಯನ್ನು ಅಂಗೀಕರಿಸಿ ಉಲ್ಲೇಖ(9) ರ ಆದೇಶ ಸಂಖ್ಯೆ: ಕಂ.ಇ. 62 ಭೂದಾಸೇ(3)2006 ದಿ:20-7-2006 ರಲ್ಲಿ ಸದರಿ ವಜಾಗೊಂಡ ನೌಕರರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಹೂಡಿರುವ ಕ್ರಿಮಿನಲ್ ಅಪೀಲು ಸಂಖ್ಯೆ: 1237/2005 ರಲ್ಲಿ ಉಚ್ಚ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿಗೆ ಒಳಪಟ್ಟು ಸದರಿಯವರನ್ನು ಸೇವೆಗೆ ಪುನರ್ ಸ್ಥಾಪಿಸಿ, ಆದೇಶಿಸಿರುವ ಹಿನ್ನೆಲೆಯಲ್ಲಿ, ಈ ಕಛೇರಿಯ ದಿ:22-11-2005 ಉಲ್ಲೇಖ(8) ರ

ಆದೇಶವನ್ನು ರದ್ದುಪಡಿಸಿ ಉಲ್ಲೇಖ(10) ರ ಈ ಕಛೇರಿಯ ಆದೇಶ ದಿ:2–9–2006 ರಲ್ಲಿ ಸರ್ಕಾರದ ಆದೇಶದ ದಿನಾಂಕ: 20–7–2006 ರನ್ವಯ ಮಾನ್ಯ ಉಚ್ಚ ನ್ಯಾಯಾಲಯದ ಕ್ರಿಮಿನಲ್ ಅಪೀಲು ಸಂಖ್ಯೆ: 1237/2005 ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿಗೆ ಒಳಪಟ್ಟು ನೌಕರರನ್ನು ತಹಸೀಲ್ದಾರ್ ದೇವದುರ್ಗ ಕಛೇರಿಯಲ್ಲಿ ಖಾಲಿ ಇರುವ ದ್ವಿತೀಯ ದರ್ಜೆ ಭೂಮಾಪಕರ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿದ್ದು, ನೌಕರರು ದಿ:11–9–2006 ರಂದು ಕರ್ತವ್ಯಕ್ಕೆ ಹಾಜರಾಗಿದ್ದಾರೆ.

ಉಲ್ಲೇಖ(11) ರ ಕರ್ನಾಟಕ ಉಚ್ಚ ನ್ಯಾಯಾಲಯದ ಸರ್ಕ್ಯೂಟ್ ಬೆಂಚ್ ಧಾರವಾಡ ಇವರ ಆದೇಶ ಸಂ.1237/2005 ದಿ:13–7–2011 ರಲ್ಲಿ ಉಲ್ಲೇಖ(3) ರ ಬಾಗಲಕೋಟೆ ಪ್ರಧಾನ ಮತ್ತು ಸತ್ರ ನ್ಯಾಯಾಲಯದ ದೋಷಸಿದ್ಧಿ ತೀರ್ಪನ್ನು ಸ್ಥಿರೀಕರಿಸಿ ಅಪೀಲುದಾರರ ಬೇಲ್ ಬಾಂಡ್‌ಗಳನ್ನು ರದ್ದುಗೊಳಿಸಿ ಆದೇಶಿಸಿದ್ದಾರೆ.

ನೌಕರರು ಸರ್ಕಾರಕ್ಕೆ ಸಲ್ಲಿಸಿದ ದಿ:8–3–2006 ರ ಮೇಲ್ಮನವಿಯಂತೆ ಸರ್ಕಾರವು ಉಚ್ಚ ನ್ಯಾಯಾಲಯದ ಅಪೀಲು ಸಂ.1237/2005 ರ ಅಂತಿಮ ತೀರ್ಪಿಗೆ ಒಳಪಟ್ಟು ಸೇವೆಗೆ ಪುನರ್ ಸ್ಥಾಪಿಸಿದ್ದು ಮಾನ್ಯ ಉಚ್ಚ ನ್ಯಾಯಾಲಯದ ಆದೇಶದ ಹಿನ್ನೆಲೆಯಲ್ಲಿ ಆರೋಪಿತರ ದೋಷಸಿದ್ಧಿಯಾಗಿರುವುದರಿಂದ ಮೇಲ್ಮನವಿ ಆದೇಶವು ವಜಾಗೊಂಡಿರುವ ಕಾರಣ ಉಲ್ಲೇಖ(3) ರ ಬಾಗಲಕೋಟೆಯ ಪ್ರಧಾನ ಮತ್ತು ಸತ್ರ ನ್ಯಾಯಾಲಯದ ಆದೇಶ ದಿ:21–6–2005 ನ್ನು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ, ಸರ್ಕ್ಯೂಟ್ ಬೆಂಚ್ ಧಾರವಾಡ ಇವರ ಆದೇಶ ದಿ:13–7–2011 ರನ್ನು ಸ್ಥಿರೀಕರಿಸಿ ತೀರ್ಪು ನೀಡಿರುವ ಹಿನ್ನೆಲೆಯಲ್ಲಿ ಸರ್ಕಾರದ ಸುತ್ತೋಲೆ ಸಂಖ್ಯೆ: ಸಿ.ಆ.ಸು.ಇ. 9 ಸೇವಿ 99 ದಿ:26–6–96 ರಂತೆ ಆರೋಪಿತ ನೌಕರರ ವಿರುದ್ಧ ಕ್ರಿಮಿನಲ್ ಅಪೀಲು ಪ್ರಕರಣಗಳಲ್ಲಿ ದೋಷಸಿದ್ಧಿಯಾಗಿರುವುದರಿಂದ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 14(i) ರ ಅನುಸಾರ ಕ್ರಿಮಿನಲ್ ಅಪೀಲು ಪ್ರಕರಣದಲ್ಲಿ ಕ್ರಿಮಿನಲ್ ಆರೋಪಕ್ಕಾಗಿ ದೋಷಸಿದ್ಧಿಯಾದ ಸರ್ಕಾರಿ ನೌಕರನನ್ನು ಸೇವೆಯಿಂದ ವಜಾ ಮಾಡುವ ಬಗ್ಗೆ ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿ.ಮಂಜುಲ, ಭಾ.ಆ.ಸೇ., ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ, ಸರ್ಕ್ಯೂಟ್ ಬೆಂಚ್ ಧಾರವಾಡ ಇವರ ದಿ:13–7–2011 ರ ಆದೇಶದಲ್ಲಿ ಬಾಗಲಕೋಟೆಯ ಪ್ರಧಾನ ಮತ್ತು ಸತ್ರ ನ್ಯಾಯಾಲಯದ ಆದೇಶ ದಿ:21–6–2005 ನ್ನು ಸ್ಥಿರೀಕರಿಸಿದಂತೆ ಆರೋಪಿತ ನೌಕರರ ವಿರುದ್ಧ ಕ್ರಿಮಿನಲ್ ಅಪೀಲು ಪ್ರಕರಣಗಳಲ್ಲಿ ದೋಷಸಿದ್ಧಿಯಾಗಿರುವುದರಿಂದ 1957 ರ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 9(3) ರಲ್ಲಿ ಓದಿಕೊಂಡ ನಿಯಮ 8 (viii) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಈರದಾಸಪ್ಪ ಈರಪ್ಪ, ಭೂಮಾಪಕರು ತಹಸೀಲ್ದಾರ್ ಕಛೇರಿ, ದೇವದುರ್ಗ ಇವರನ್ನು ಸರ್ಕಾರಿ ಸೇವೆಯಿಂದ ತಕ್ಷಣವೇ ಜಾರಿಗೆ ಬರುವಂತೆ ವಜಾಗೊಳಿಸಿ ಆದೇಶಿಸಿದ್ದೇನೆ.

**ಆಯುಕ್ತರು,**
**ಭೂಮಾಪನ ಕಂದಾಯ ವ್ಯವಸ್ಥೆ ಮತ್ತು**
**ಭೂದಾಖಲೆಗಳು, ಬೆಂಗಳೂರು.**

**ಪಿ.ಆರ್. 1384**

## ಇಂಧನ ಇಲಾಖೆ

### ಅನಧಿಕೃತ ಜ್ಞಾಪನ

**ಸಂಖ್ಯೆ : ಇಎನ್ 113 ಇಬಿಎಸ್ 2011, ಬೆಂಗಳೂರು, ದಿನಾಂಕ : 28ನೇ ಅಕ್ಟೋಬರ್ 2011**

**ವಿಷಯ:** ದಿನಾಂಕ: 01–01–2011ರಲ್ಲಿದ್ದಂತೆ ವಿದ್ಯುತ್ ಪರಿವೀಕ್ಷಣಾಲಯ ಇಲಾಖೆಯ ಸಹಾಯಕ ವಿದ್ಯುತ್ ಪರಿವೀಕ್ಷಕರುಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿ ಪ್ರಕಟಿಸುವ ಬಗ್ಗೆ

ಸರ್ಕಾರದ ವಿದ್ಯುತ್ ಪರಿವೀಕ್ಷಣಾಲಯ ಇಲಾಖೆಯಲ್ಲಿನ ಸಹಾಯಕ ವಿದ್ಯುತ್ ಪರಿವೀಕ್ಷಕರುಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01–01–2011ರಲ್ಲಿದ್ದಂತೆ ಅನುಬಂಧದಲ್ಲಿ ಈ ಮೂಲಕ ಪ್ರಕಟಿಸಲಾಗಿದೆ.

ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ತೋರಿಸಿರುವ ಜೇಷ್ಠತಾ ಕ್ರಮಾಂಕ, ಹುಟ್ಟಿದ/ಸೇವೆಗೆ ಸೇರಿದ ದಿನಾಂಕ, ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕಗಳ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಬಾಧಿತರಾದ ನೌಕರರು ತಮ್ಮ ಹೇಳಿಕೆಗಳನ್ನು ಸ್ಪಷ್ಟ ದಾಖಲೆಗಳೊಂದಿಗೆ ಈ ಅಧಿಕೃತ ಜ್ಞಾಪನ ಹೊರಡಿಸಿದ ದಿನಾಂಕದಿಂದ 15 ದಿನಗಳೊಳಗೆ ಸರ್ಕಾರಕ್ಕೆ ಮುಖ್ಯ ವಿದ್ಯುತ್ ಪರಿವೀಕ್ಷಕರ ಮುಖಾಂತರ ಸಲ್ಲಿಸಬಹುದೆಂದು ಈ ಮೂಲಕ ಸೂಚಿಸಲಾಗಿದೆ.

**ಸುಜಾತಮ್ಮ,**
ಪೀಠಾಧಿಕಾರಿ,
ಇಂಧನ ಇಲಾಖೆ

**ದಿನಾಂಕ: 01–01–2011ರಲ್ಲಿದ್ದಂತೆ ಸಹಾಯಕ ವಿದ್ಯುತ್ ಪರಿವೀಕ್ಷಕರ ತಾತ್ಕಾಲಿಕ ಜೇಷ್ಠತಾ ಪಟ್ಟಿ**

| ಕ್ರ ಸಂ | ಹೆಸರು ಶ್ರೀ/ಶ್ರೀಮತಿ/ಕುಮಾರಿ | ನೇರ ನೇಮಕಾತಿ | ಜಾತಿ | ಮೀಸಲಾತಿ ವರ್ಗ | ಜನ್ಮ ದಿನಾಂಕ ಸೇವೆಗೆ ಸೇರಿದ ದಿನಾಂಕ | ನೇರ ನೇಮಕಾತಿ ಹೊಂದಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಮುಂಬಡ್ತಿಗೆ ನಿಜವಾದ ಅರ್ಹತಾ ದಿನಾಂಕ |
|---|---|---|---|---|---|---|---|---|
| 1 | ಬಸವೇಗೌಡ ಬಿ.ಎನ್. | ನೇರ ನೇಮಕಾತಿ | ಒಕ್ಕಲಿಗ | 3 ಎ | 02–01–1984 | 08–05–2007 | 14–05–2007 | 14–05–2007 |
| 2 | ಫರೀದಾ ಬೇಗಂ ಎನ್. | ನೇರ ನೇಮಕಾತಿ | ಮುಸ್ಲಿಂ | 2 ಬಿ | 08–06–1981 | 08–05–2007 | 19–05–2007 | 19–05–2007 |
| 3 | ಶ್ರೀಲಕ್ಷ್ಮಿ | ನೇರ ನೇಮಕಾತಿ | ಬಲಿಜ | 3 ಎ | 07–04–1984 | 08–05–2007 | 18–05–2007 | 18–05–2007 |
| 4 | ಮಂಜುನಾಥ ಸಿ.ಹೆಚ್. | ನೇರ ನೇಮಕಾತಿ | ಲಿಂಗಾಯತ | 3 ಬಿ | 20–07–1984 | 08–05–2007 | 14–05–2007 | 14–05–2007 |
| 5 | ನೇತ್ರಾವತಿ ಎಂ. | ನೇರ ನೇಮಕಾತಿ | ಆದಿ ಕರ್ನಾಟಕ | ಪ.ಜಾ | 11–08–1983 | 08–05–2007 | 22–05–2007 | 22–05–2007 |
| 6 | ಗೋವಿಂದ ಮೊಗೇರಾ | ನೇರ ನೇಮಕಾತಿ | ಹಿಂದು ಮೊಗೇರಾ | ಪ.ಜಾ | 19–08–1984 | 08–05–2007 | 19–05–2007 | 19–05–2007 |
| 7 | ವೀಣಾ ಕೆ. | ನೇರ ನೇಮಕಾತಿ | ಕುರುಬ | 2 ಎ | 24–05–1982 | 08–05–2007 | 17–05–2007 | 17–05–2007 |
| 8 | ಬಾಬಸಾಬ್ ದೇಸಾಯಿ | ನೇರ ನೇಮಕಾತಿ | ಮುಸ್ಲಿಂ | 2 ಬಿ | 20–12–1978 | 08–05–2007 | 15–05–2007 | 15–05–2007 |
| 9 | ಉಷಾ ಸಿ.ಎನ್. | ನೇರ ನೇಮಕಾತಿ | ಒಕ್ಕಲಿಗ | 3 ಎ | 07–06–1985 | 09–10–2009 | 16–10–2009 | 16–10–2009 |
| 10 | ಭೀಮಾ ಶಂಕರ್ | ನೇರ ನೇಮಕಾತಿ | ಲಿಂಗಾಂಯಿತ | 3 ಬಿ | 23–01–1983 | 09–10–2009 | 15–10–2009 | 15–10–2009 |
| 11 | ಯೋಗೀಶ್ ಜಿ. | ನೇರ ನೇಮಕಾತಿ | ಒಕ್ಕಲಿಗ | 3 ಎ | 07–07–1979 | 09–10–2009 | 21–10–2009 | 21–10–2009 |
| 12 | ಶ್ರೀನಿವಾಸ ಎಸ್.ಕೆ | ನೇರ ನೇಮಕಾತಿ | ಗೊಲ್ಲ | ಪ್ರ–1 | 02–05–1976 | 09–10–2009 | 06–11–2009 | 06–11–2009 |
| 13 | ಸತೀಶ್ ಎನ್. | ನೇರ ನೇಮಕಾತಿ | ಆದಿ ಕರ್ನಾಟಕ | ಎಸ್.ಸಿ. | 09–06–1985 | 09–10–2009 | 22–10–2009 | 22–10–2009 |
| 14 | ಹರೀಶ್ ಎನ್. | ನೇರ ನೇಮಕಾತಿ | ಒಕ್ಕಲಿಗ | 3 ಎ | 15–01–1985 | 09–10–2009 | 13–10–2009 | 13–10–2009 |
| 15 | ಯಂಕಣ್ಣ | ನೇರ ನೇಮಕಾತಿ | ಉಪ್ಪಾರ | ಪ್ರ–1 | 01–08–1973 | 09–10–2009 | 13–10–2009 | 13–10–2009 |
| 16 | ನಾಗರಾಜ್ | ನೇರ ನೇಮಕಾತಿ | ಲಿಂಗಾಯತ | 3 ಬಿ | 20–05–1985 | 09–10–2009 | 15–10–2009 | 15–10–2009 |
| 17 | ಷಬ್ರಿನ್ ಆಯೇಷಾ ತಾಜ್ | ನೇರ ನೇಮಕಾತಿ | ಮುಸ್ಲಿಂ | 2 ಬಿ | 25–06–1984 | 09–10–2009 | 22–10–2009 | 22–10–2009 |
| 18 | ವಿಶ್ವನಾಥ ಅಂಗಡಿ | ನೇರ ನೇಮಕಾತಿ | ಲಿಂಗಾಯತ | 3 ಬಿ | 31–07–1985 | 09–10–2009 | 21–10–2009 | 21–10–2009 |
| 19 | ಕವಿತಾ ರಾಣಿ ಎನ್. | ನೇರ ನೇಮಕಾತಿ | ಒಕ್ಕಲಿಗ | 3 ಎ | 20–09–1985 | 09–10–2009 | 22–10–2009 | 22–10–2009 |
| 20 | ನೇತ್ರಾವತಿ ಜಿ.ಎನ್. | ನೇರ ನೇಮಕಾತಿ | ಲಿಂಗಾಯತ | 3 ಬಿ | 01–06–1985 | 09–10–2009 | 23–10–2009 | 23–10–2009 |
| 21 | ರಶ್ಮಿ ಎಂ. ಹನಸಿ | ನೇರ ನೇಮಕಾತಿ | ಕುರುಬ | 2 ಎ | 21–05–1985 | 09–10–2009 | 15–10–2009 | 15–10–2009 |
| 22 | ವಸಂತ ಕುಮಾರ್ ಬಿ.ಎನ್ | ನೇರ ನೇಮಕಾತಿ | ಕುರುಬ | 2 ಎ | 29–05–1984 | 09–10–2009 | 12–10–2009 | 12–10–2009 |
| 23 | ಅರ್ಚನ ಎಂ. | ನೇರ ನೇಮಕಾತಿ | ಒಕ್ಕಲಿಗ | 3 ಎ | 01–12–1985 | 09–10–2009 | 21–10–2009 | 21–10–2009 |
| 24 | ಚೇತನ್ ಡಿ.ಎಸ್. | ನೇರ ನೇಮಕಾತಿ | ಆದಿ ಕರ್ನಾಟಕ | ಎಸ್.ಸಿ. | 13–05–1986 | 09–10–2009 | 15–10–2009 | 15–10–2009 |
| 25 | ಧರ್ಮಾರೆಡ್ಡಿ ಕೆ.ಎಂ. | ನೇರ ನೇಮಕಾತಿ | ಕಾಪು ರೆಡ್ಡಿ | 3 ಎ | 01–06–1979 | 09–10–2009 | 16–10–2009 | 16–10–2009 |
| 26 | ಮನೋಜ್ ಎಂ. | ನೇರ ನೇಮಕಾತಿ | ಆದಿ ಕರ್ನಾಟಕ | ಎಸ್.ಸಿ. | 02–05–1986 | 09–10–2009 | 23–10–2009 | 23–10–2009 |
| 27 | ರಬೀಯಾ ನಡಾಫ್ | ನೇರ ನೇಮಕಾತಿ | ಮುಸ್ಲಿಂ (ಪಿಂಜಾರ್) | ಪ್ರ–1 | 27–01–1982 | 09–10–2009 | 21–10–2009 | 21–10–2009 |
| 28 | ಮುಕ್ತಾಂಬ. ಬಿ.ಎಸ್. | ನೇರ ನೇಮಕಾತಿ | ಕುಂಬಾರ | 2 ಎ | 23–06–1985 | 09–10–2009 | 21–10–2009 | 21–10–2009 |

| ಕ್ರ ಸಂ | ಹೆಸರು ಶ್ರೀ/ಶ್ರೀಮತಿ/ಕುಮಾರಿ | ನೇರ ನೇಮಕಾತಿ | ಜಾತಿ | ಮೀಸಲಾತಿ ವರ್ಗ | ಜನ್ಮ ದಿನಾಂಕ ಸೇವೆಗೆ ಸೇರಿದ ದಿನಾಂಕ | ನೇರ ನೇಮಕಾತಿ ಹೊಂದಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಮುಂಬಡ್ತಿಗೆ ನಿಜವಾದ ಅರ್ಹತಾ ದಿನಾಂಕ |
|---|---|---|---|---|---|---|---|---|
| 29 | ಸಂಗೀತಾ ಎನ್. | ನೇರ ನೇಮಕಾತಿ | ಆದಿ ಕರ್ನಾಟಕ | ಎಸ್.ಸಿ. | 08–06–1985 | 09–10–2009 | 23–10–2009 | 23–10–2009 |
| 30 | ಶಂಕರಗೌಡ ಪಾಟೀಲ್ | ನೇರ ನೇಮಕಾತಿ | ಲಿಂಗಾಯತ | 3 ಬಿ | 01–05–1985 | 09–10–2009 | 15–10–2009 | 15–10–2009 |
| 31 | ರಾಜೇಶ್ ಬಿ. ವೈ | ನೇರ ನೇಮಕಾತಿ | ಈಡಿಗ | 2 ಎ | 13–05–1984 | 09–10–2009 | 23–10–2009 | 23–10–2009 |
| 32 | ರಾಧ ಜಿ. | ನೇರ ನೇಮಕಾತಿ | ನಾಯಕ | ಪ.ಪಂ. | 07–11–1980 | 09–10–2009 | 21–11–2009 | 21–11–2009 |
| 33 | ಮುನಿರಾಜ ವೈ. | ನೇರ ನೇಮಕಾತಿ | ಆದಿ ಕರ್ನಾಟಕ | ಎಸ್.ಸಿ. | 04–05–1982 | 09–10–2009 | 21–10–2009 | 21–10–2009 |
| 34 | ಯೆಲ್ವಿ ರೇಣುಕಾ | ನೇರ ನೇಮಕಾತಿ | ಲಿಂಗಾಯತ | 3 ಬಿ | 11–10–1979 | 09–10–2009 | 16–10–2009 | 16–10–2009 |
| 35 | ನಾಗರಾಜು | ನೇರ ನೇಮಕಾತಿ | ಕುರುಬ | 2 ಎ | 22–12–1986 | 09–10–2009 | 21–10–2009 | 21–10–2009 |
| 36 | ಷಫಿಯಾ ತಬಸ್ಸಮ್ | ನೇರ ನೇಮಕಾತಿ | ಮುಸ್ಲಿಂ | 2 ಬಿ | 19–07–1980 | 09–10–2009 | 22–10–2009 | 22–10–2009 |
| 37 | ಶಿವಶರಣಪ್ಪ ಪಾಟೀಲ್ | ನೇರ ನೇಮಕಾತಿ | ಲಿಂಗಾಯತ / ಕುಂಬಾರ | 2 ಎ | 01–07–1968 | 09–10–2009 | 23–10–2009 | 23–10–2009 |

**ಸುಜಾತಮ್ಮ,**
ಪೀಠಾಧಿಕಾರಿ,
ಇಂಧನ ಇಲಾಖೆ

**ಪಿ.ಆರ್. 1183**

## ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ. ಇವರ ನ್ಯಾಯಾಲಯದಲ್ಲಿ

**ಪ್ರಕರಣ ಸಂ: ಇಎಕ್ಸ್ಇ/ಚಿಪುರ/ಡಿಟಿಸಿಆರ್/58/2010–11, ದಿನಾಂಕ: 28/10/2011**

**ಉಪಸ್ಥಿತರು:–** ಬಾಲಗಂಗಾಧರ ಹೆಚ್.ಬಿ., ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ.

**ಪಿರ್ಯಾದುದಾರರು:–** **–ವಿರುದ್ದ–** **ಆರೋಪಿ:–**

ಆರಕ್ಷಕ ಉಪ ನಿರೀಕ್ಷಕರು,
ಗ್ರಾಮಾಂತರ ಪೊಲೀಸ್ ಠಾಣೆ,
ಶಿಡ್ಲಘಟ್ಟ.

1. ವೆಂಕಟೇಶಪ್ಪ ಬಿನ್ ಪಾಪಣ್ಣ, ಕುಂದಲಗುರ್ಕಿ, ಶಿಡ್ಲಘಟ್ಟ ತಾಲ್ಲೂಕು.
2. ಗೋಪಿ ಬಿನ್ ನಾರಾಯಣಸ್ವಾಮಿ, ಪ್ರೇಮನಗರ, ಚಿಂತಾಮಣಿ ಟೌನ್.
3. ಮುರಳಿ ಬಿನ್ ಚಂದ್ರಪ್ಪ, ಪ್ರೇಮನಗರ, ಚಿಂತಾಮಣಿ ಟೌನ್.

**ಪ್ರಕರಣದ ಮುಖ್ಯಾಂಶಗಳು:–**

ದಿನಾಂಕ;17–03–2010 ರಂದು ಸಮಯ ಸಂಜೆ ಸುಮಾರು 7–00 ಘಂಟೆ ಸಮಯದಲ್ಲಿ ಪಿರ್ಯಾದುದಾರರು ಮತ್ತು ಸಿಬ್ಬಂದಿ ಸರ್ಕಾರಿ ನೊಂದಣಿ ಸಂ:ಕೆಎ–07 ಜಿ–168 ರ ವಾಹನದಲ್ಲಿ ಶಿಡ್ಲಘಟ್ಟ ತಾಲ್ಲೂಕಿನ ಪಿಂಡಿಪಾಪನಹಳ್ಳಿ ಗ್ರಾಮದ ಗಣೇಶ ವಿಸರ್ಜನೆ ಬಂದೋ ಬಸ್ತು ಕರ್ತವ್ಯದಲ್ಲಿದ್ದಾಗ ಕುಂದಲಗುರ್ಕಿ ಗ್ರಾಮದ ವೆಂಕಟೇಶ್ ಬಿನ್ ಪಾಪಣ್ಣ ನವರ ಮನೆಗೆ ಅಕ್ರಮವಾಗಿ ಮದ್ಯ ಮಾರಾಟ ಮಾಡಲು ಚಿಂತಾಮಣಿಯಿಂದ ಮದ್ಯವನ್ನು ತೆಗೆದುಕೊಂಡು ಬರುತ್ತಿದ್ದಾರಂತೆ ಬಂದ ಬಾತ್ಮೀಯ ಮೇರೆಗೆ ಸದರಿ ಸ್ಥಳದ ಮೇಲೆ ದಾಳಿ ಮಾಡಲು ಪಂಚರನ್ನು ಬರಮಾಡಿಕೊಂಡು ಕುಂದಲಗುರ್ಕಿ ಗ್ರಾಮದ ವೆಂಕಟೇಶಪ್ಪ ಮನೆಯ ಪಕ್ಕದಲ್ಲಿ ಸ್ವಲ್ಪ ದೂರದಲ್ಲಿ ಅವಿತು ಕಣ್ಮರೆಯಾಗಿ ಕಾಯುತ್ತಿದ್ದಾಗ ಯಾರೋ ಇಬ್ಬರು ಆಸಾಮಿಗಳು ದ್ವಿಚಕ್ರ ವಾಹನದಲ್ಲಿ 3 ರೆಟ್ಟಿನ ಪೆಟ್ಟಿಗೆಗಳಲ್ಲಿ ಮದ್ಯದ ಬಾಟಲುಗಳನ್ನು ತೆಗೆದುಕೊಂಡು ಬರುತ್ತಿದ್ದವರನ್ನು ರಾತ್ರಿ ಸುಮಾರು 8–00 ಗಂಟೆ ಸಮಯದಲ್ಲಿ ತಡೆದು ಪಂಚರ ಸಮಕ್ಷಮ ಪೊಲೀಸ್‌ನವರು ದ್ವಿಚಕ್ರ ಸವಾರರ ಹೆಸರನ್ನು ಕೇಳಲಾಗಿ ಒಬ್ಬನು ಗೋಪಿ ಬಿನ್ ನಾರಾಯಣಸ್ವಾಮಿ, ಬೋವಿ ಜನಾಂಗ, ಪ್ರೇಮನಗರ, ಚಿಂತಾಮಣಿ ಇನ್ನೊಬ್ಬನು ಮುರಳಿ ಬಿನ್ ಚಂದ್ರಪ್ಪ, ಬೋವಿ ಜನಾಂಗ, ಪ್ರೇಮನಗರ, ಚಿಂತಾಮಣಿ ಅಂತ ತಿಳಿಸಿದ್ದು, ನಂತರ ದ್ವಿಚಕ್ರ ವಾಹನವನ್ನು ಪರಿಶೀಲಿಸಿ ಅದರ ನೊಂದಣಿ ಸಂ:ಕೆಎ–40 ಎಲ್–6912 ಎಕ್ಸ್‌ಎಲ್ ಸೂಪರ್ ಹೆವಿ ಡ್ಯುಟಿ ದ್ವಿಚಕ್ರ ವಾಹನವಾಗಿದ್ದು, ಈ ವಾಹನದಲ್ಲಿದ್ದ 3 ರೆಟ್ಟಿನ ಬಾಕ್ಸ್‌ಗಳನ್ನು ಪರಿಶೀಲಿಸಿದಾಗ ಅವುಗಳ ಮೇಲೆ ಹೈವಾಡ್ಸ್ ಚೀಯರ್ಸ್ ವಿಸ್ಕಿ ಎಂಬ ಲೇಬಲ್‌ಗಳು ಇದ್ದು, ಈ ಬಾಕ್ಸ್‌ಗಳಲ್ಲಿ ತಲಾ ಒಂದರಲ್ಲಿ 48 ಪಾಕೇಟ್‌ಗಳಿದ್ದು, ಒಟ್ಟು 144X180 ಎಂ.ಎಲ್. ಗಳಾಗಿದ್ದು, ಈ ಮದ್ಯವನ್ನು ಯಾರಿಗೆ ಮಾರಾಟ ಮಾಡಲು ತೆಗೆದುಕೊಂಡು ಬಂದಿರುವಿರೀ ಎಂದು ಪೊಲೀಸ್‌ನವರು ಕೇಳಿದಾಗ ಆಸಾಮಿಗಳು ಇದೇ ಕುಂದಲಗುರ್ಕಿ ಗ್ರಾಮ ವೆಂಕಟೇಶ್ ಬಿನ್ ಪಾಪಣ್ಣ ರವರಿಗೆ ಮಾರಾಟ ಮಾಡಲು ಬಂದಿರುವುದಾಗಿ ತಿಳಿಸಿದ್ದು, ನಂತರ ವೆಂಕಟೇಶ ರವರು ವಾಸದ ಮನೆಯ ಒಳಗಡೆ ಇದ್ದು, ಅವರನ್ನು ಹೊರಗಡೆ ಕರೆದು ಮದ್ಯದ ಬಗ್ಗೆ ವಿಚಾರಿಸಿದಾಗ ಸದರಿ ಆಸಾಮಿಗಳು ತನಗೆ ಮಾರಾಟ ಮಾಡಲು ತಂದಿರುವುದಾಗಿ ಒಪ್ಪಿಕೊಂಡಿರುತ್ತಾನೆ. ಈ ಮದ್ಯದ ಪಾಕೇಟ್‌ಗಳಿಂದ ಒಂದು ಪಾಕೇಟ್‌ನ್ನು ರಾಸಾಯನಿಕ ಪರೀಕ್ಷೆ ಮಾದರಿಗಾಗಿ ತೆಗೆದು ನಂತರ ಪೊಲೀಸ್ ಸಿಬ್ಬಂದಿಯವರು 3 ಜನರನ್ನು ತಮ್ಮ ವಶಕ್ಕೆ ತೆಗೆದುಕೊಂಡು ಮದ್ಯ ಮತ್ತು ದ್ವಿಚಕ್ರ ವಾಹನವನ್ನು ಅಮಾನತ್ತುಪಡಿಸಿಕೊಂಡು ಈ ಕೃತ್ಯದ ಬಗ್ಗೆ ಇವರ ವಿರುದ್ಧ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 34 ರಡಿಯಲ್ಲಿ ತಕ್ಸೀರು ಸಂ:231/2010 ರಲ್ಲಿ

ಮೊಕದ್ದಮೆಯನ್ನು ದಾಖಲಿಸಿ ಪ್ರ.ಮಾ.ವರದಿಯೊಂದಿಗೆ ಪಿ.ಎಫ್. ನಂ:180/2010 ರಲ್ಲಿ ದ್ವಿಚಕ್ರ ವಾಹನ ಮತ್ತು ಮದ್ಯವನ್ನು ಅಬಕಾರಿ ನಿರೀಕ್ಷಕರು, ಶಿಡ್ಲಘಟ್ಟ ವಲಯ ಇವರಿಗೆ ಹಸ್ತಾಂತರಿಸಲು ಈ ಪ್ರಾಧಿಕಾರವನ್ನು ಕೋರಿರುತ್ತಾರೆ.

ವಶಪಡಿಸಿಕೊಂಡ ಪದಾರ್ಥಗಳ ಪಟ್ಟಿ ಸಂ:180/2010 ರಲ್ಲಿ ವಾಹನ ಮತ್ತು ಮದ್ಯವನ್ನು ಅಬಕಾರಿ ನಿರೀಕ್ಷಕರು, ಶಿಡ್ಲಘಟ್ಟ ವಲಯ ಇವರಿಗೆ ಹಸ್ತಾಂತರಿಸಲು ಈ ಪ್ರಾಧಿಕಾರದಿಂದ ಅನುಮತಿಯನ್ನು ದಿನಾಂಕ:18/09/2010 ರಂದು ನೀಡಲಾಗಿದೆ.

ಅಬಕಾರಿ ನಿರೀಕ್ಷಕರು, ಶಿಡ್ಲಘಟ್ಟ ವಲಯ ರವರು ತನಿಖೆಯನ್ನು ಮುಂದುವರೆಸಿ ಜಪ್ತುಪಡಿಸಿದ ಮದ್ಯದಿಂದ ತೆಗೆಯಲಾದ ಮಾದರಿಯನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಅಬಕಾರಿ ಇಲಾಖೆ, ಬೆಂಗಳೂರು ಇವರಿಗೆ ಸಲ್ಲಿಸಿದ್ದು, ತಜ್ಞರ ವರದಿ ಸಂ:ಸಿಸಿಎಲ್:6764/2010, ದಿನಾಂಕ:14/12/2010 ರ ಪತ್ರದಂತೆ ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾದ ಮಾದರಿಯಲ್ಲಿ ಮದ್ಯಸಾರದ ಅಂಶ $25.2^0$ ಯು.ಪಿ. ಇದ್ದು, ಇದರಲ್ಲಿ ಈಥೈಲ್ ಅಲ್ಕೋಹಾಲ್ ಅಂಶ ಕಂಡುಬಂದಿದ್ದು, ಇದು ಮಾನವನ ಸೇವನೆಗೆ ಯೋಗ್ಯವಾಗಿರುತ್ತವೆ ಎಂದು ತಜ್ಞರು ಅಭಿಪ್ರಾಯ ನೀಡಿದ್ದು, ತಜ್ಞರ ವರದಿಯ ಪ್ರತಿಯನ್ನು ಅಬಕಾರಿ ನಿರೀಕ್ಷಕರು, ಶಿಡ್ಲಘಟ್ಟ ವಲಯ ರವರ ಪತ್ರ ದಿನಾಂಕ:21/04/2011 ರೊಂದಿಗೆ ಲಗತ್ತಿಸಿ ಈ ಮೊಕದ್ದಮೆಯಲ್ಲಿ ಜಪ್ತುಪಡಿಸಲಾದ 25.920 ಲೀ. ಹೈವಾರ್ಡ್ಸ್ ಚೀರ್ಸ್ ವಿಸ್ಕಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತನಿಖಾಧಿಕಾರಿಗಳು ವರದಿ ಸಲ್ಲಿಸಿರುತ್ತಾರೆ. ಅದರಂತೆ ವಾಹನ ಹೊರತುಪಡಿಸಿ ಪ್ರಕರಣ ತನಿಖೆ ಕಾಯ್ದರಿಸಿ 25.920 ಲೀ. ಮದ್ಯವನ್ನು ದಿನಾಂಕ;26/04/2011 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮಾದರಿ ಹೊರತುಪಡಿಸಿ ಉಳಿದ ಮದ್ಯವನ್ನು ನಿಯಮಾನುಸಾರ ನಾಶಪಡಿಸಲು ಪ್ರಾಧಿಕಾರದಿಂದ ಆದೇಶಿಸಲಾಗಿತ್ತು.

ಈ ಪ್ರಕರಣದಲ್ಲಿ ಜಪ್ತುಪಡಿಸಿದ ಟಿವಿಎಸ್ ಸೂಪರ್ ಎಕ್ಸ್‌ಎಲ್ ಹೆವಿಡ್ಯುಟಿ ನೊಂದಣಿ ಸಂ: ಕೆಎ-40 ಎಲ್-6912 ರ ಮಾಲೀಕತ್ವದ ಬಗ್ಗೆ ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ರವರಿಗೆ ಈ ಪ್ರಾಧಿಕಾರದಿಂದ ಪತ್ರ ಬರೆದಿದ್ದು, ಅದರಂತೆ ಸಾರಿಗೆ ಅಧಿಕಾರಿಗಳ "ಬಿ" ವಹಿಯ ಪ್ರಕಾರ ಸದರಿ ವಾಹನದ ನೊಂದಣಿಯ ನೊಂದಣೆ ಮಾಲೀಕರು ಎಸ್.ರಮೇಶ್ ಬಾಬು ಎಂದು ತಿಳಿಸಿರುವ ಹಿನ್ನೆಲೆಯಲ್ಲಿ ಎಸ್. ರಮೇಶ್ ಬಾಬು ಬಿನ್ ಸಂಪತ್ತಪ್ಪ, ಗೀತಾ ಮಂದಿರ ಎದುರು, ಎನ್.ಆರ್. ಬಡಾವಣೆ, ಚಿಂತಾಮಣಿ ಟೌನ್ ಮತ್ತು ತಾಲ್ಲೂಕು ಇವರಿಗೆ ದಿನಾಂಕ:11/04/2011 ರಂದು ಪ್ರಾಧಿಕಾರದಿಂದ ಆರ್.ಪಿ.ಎ.ಡಿ. ಮೂಲಕ ಕಾರಣ ಕೇಳಿ ನೋಟೀಸ್‌ನ್ನು ರವಾನಿಸಿದ್ದು, ನೋಟೀಸ್‌ನ್ನು ಮಾಲೀಕರು ಪಡೆದ ಬಗ್ಗೆ ಸ್ವೀಕೃತಿ ಪತ್ರ ಬಂದಿರುತ್ತದೆ. ಅಬಕಾರಿ ನಿರೀಕ್ಷಕರು, ಶಿಡ್ಲಘಟ್ಟ ವಲಯ ಇವರ ಪತ್ರ ದಿನಾಂಕ:24/10/2011 ರಲ್ಲಿ ವಾಹನದ ಮಾಲೀಕರಾದ ಎಸ್.ರಮೇಶ್ ಬಾಬು ಬಿನ್ ಸಂಪತ್ತಪ್ಪ ರವರು ದಿನಾಂಕ:12/09/2010 ರಲ್ಲೇ ಶ್ರೀ ಅಶ್ವತ್ಥಪ್ಪ ಬಿನ್ ಲಕ್ಷ್ಮೀನಾರಾಯಣಪ್ಪ, ಹರಿಕೆರೆ ಗ್ರಾಮ, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ ಇವರಿಗೆ ಮಾರಾಟ ಮಾಡಿದ್ದು, ಸದರಿ ವಾಹನದ ದಾಖಲಾತಿಗಳನ್ನು ಶ್ರೀ ಅಶ್ವತ್ಥಪ್ಪ ರವರ ವಶಕ್ಕೆ ನೀಡಿರುವುದಾಗಿ ಹೇಳಿಕೆಯನ್ನು ಲಿಖಿತ ಪತ್ರದ ಮೂಲಕ ಸಲ್ಲಿಸಿರುವುದಾಗಿ ತನಿಖಾಧಿಕಾರಿಗಳು ವರದಿಸುತ್ತಾ ಸದರಿ ವಾಹನ ತನ್ನದೆಂದು ಆರೋಪಿಯಾಗಲೀ ಅಥವಾ ವಾಹನ ಮಾಲೀಕರಾಗಲೀ ಇಲ್ಲಿಯವರೆವಿಗೂ ವಾಹನದ ಮೂಲ ದಾಖಲಾತಿಗಳೊಂದಿಗೆ ವಾಹನ ಬಿಡುಗಡೆ ಬಗ್ಗೆ ಮನವಿ ಸಲ್ಲಿಸಿರುವುದಿಲ್ಲ. ಸದರಿ ವಾಹನವನ್ನು ಜಪ್ತುಪಡಿಸಿ ಒಂದು ವರ್ಷ ಕಳೆದರೂ ಸಹ ವಾಹನ ತಮ್ಮದೆಂದು ಯಾರೂ ಮುಂದೆ ಬಾರದ ಕಾರಣ ಈ ವಾಹನವನ್ನು ವಾರಸುದಾರರು ಇಲ್ಲದ ವಾಹನವೆಂದು ಪರಿಗಣಿಸಿ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ದಿನಾಂಕ:28/10/2011 ರಂದು ಪ್ರಕರಣವನ್ನು ಪ್ರಾಧಿಕಾರದಲ್ಲಿ ವಿಚಾರಣೆಗೆ ತೆಗೆದುಕೊಳ್ಳಲಾಗಿ ವಾಹನ ಮಾಲೀಕತ್ವ ಹೊಂದಿರುವವರು ಈ ಪ್ರಾಧಿಕಾರದ ಮುಂದೆ ಯಾರೂ ಹಾಜರಾಗಿರುವುದಿಲ್ಲ. ದಾಖಲೆಗಳು, ಪ್ರ.ಮಾ.ವ. ಮಹಜರ್‌ನ್ನು ಪರಿಶೀಲಿಸಲಾಗಿ ಆರಕ್ಷಕ ಉಪ ನಿರೀಕ್ಷಕರು, ಶಿಡ್ಲಘಟ್ಟ ಗ್ರಾಮಾಂತರ ಪೊಲೀಸ್ ಠಾಣೆ ರವರು ದಿನಾಂಕ:17/09/2010 ರಂದು ಕುಂದಲಗುರ್ಕಿ ಗ್ರಾಮದ ವ್ಯಾಪ್ತಿಯಲ್ಲಿ ಗಸ್ತು ನಡೆಸುತ್ತಿರುವಾಗ ಟಿವಿಎಸ್ ಸೂಪರ್ ಎಕ್ಸ್‌ಎಲ್ ಹೆವಿಡ್ಯುಟಿ ನೊಂದಣಿ ಸಂ:ಕೆಎ-40 ಎಲ್-6912 ರ ವಾಹನದಲ್ಲಿ 25.920 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುವ ಸಮಯದಲ್ಲಿ ಜಪ್ತುಪಡಿಸಿರುವುದು ಸಾಬೀತಾಗಿರುತ್ತದೆ. ಅಲ್ಲದೆ ರಾಸಾಯನಿಕ ತಜ್ಞರ ವರದಿಯನ್ವಯ ಜಪ್ತುಪಡಿಸಿರುವ ಮದ್ಯದಲ್ಲಿ ಈಥೈಲ್ ಆಲ್ಕೋಹಾಲ್ ಅಂಶ ಕಂಡು ಬಂದಿರುವುದರಿಂದ ಈ ವಾಹನವನ್ನು ಅಬಕಾರಿ ವಸ್ತುಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದು ಸಾಬೀತಾಗಿರುತ್ತದೆ ಹಾಗೂ ಈ ವಾಹನ ತನ್ನದೆಂದು ಕೋರಿ ಯಾರೂ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಅಬಕಾರಿ ನಿರೀಕ್ಷಕರು, ಶಿಡ್ಲಘಟ್ಟ ವಲಯ ಇವರ ಶಿಫಾರಸ್ಸಿನಂತೆ ಈ ಕೆಳಕಂಡ ಆದೇಶ.

## ಆದೇಶ

ಬಾಲಗಂಗಾಧರ ಹೆಚ್.ಬಿ., ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು(ಪ್ರಭಾರ), ಚಿಕ್ಕಬಳ್ಳಾಪುರ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿ ಕ್ರಮ ಜರುಗಿಸಿ ಆರಕ್ಷಕ ಉಪ ನಿರೀಕ್ಷಕರು, ಶಿಡ್ಲಘಟ್ಟ ಗ್ರಾಮಾಂತರ ಪೊಲೀಸ್ ಠಾಣೆ ರವರ ದಿನಾಂಕ:17/09/2010 ರ ಪ್ರ.ಮಾ.ವ.ಸಂಖ್ಯೆ 231/2010 ರಲ್ಲಿ ಜಪ್ತುಪಡಿಸಿರುವ ಟಿವಿಎಸ್ ಸೂಪರ್ ಎಕ್ಸ್‌ಎಲ್ ಹೆವಿಡ್ಯುಟಿ ನೊಂದಣಿ ಸಂ:ಕೆಎ-40 ಎಲ್-6912 ನ್ನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ವಾಹನಕ್ಕೆ ಸಂಬಂಧಿಸಿದಂತೆ ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ:28/10/2011 ರಂದು ಈ ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಿರುತ್ತೇನೆ. ಮೇಲ್ಮನವಿ ಅವಧಿ ಮುಗಿದ ನಂತರ ಕಾನೂನು ರೀತ್ಯಾ ಮೇಲ್ಕಂಡ ವಾಹನವನ್ನು ವಿಲೇವಾರಿ ಮಾಡಲು ಆದೇಶಿಸಿದೆ.

**ಬಾಲಗಂಗಾಧರ ಹೆಚ್.ಬಿ.,**
ಪ್ರಾಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಉಪ ಆಯುಕ್ತರು(ಪ್ರಭಾರ),
ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

**ಪಿ.ಆರ್. 1295**

## ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ. ಇವರ ನ್ಯಾಯಾಲಯದಲ್ಲಿ

**ಪ್ರಕರಣ ಸಂ: ಇಎಕ್ಸ್ಇ/ಚಿಪುರ/ಡಿಟಿಸಿಆರ್/353/2009–10, ದಿನಾಂಕ: 28/10/2011**

**ಉಪಸ್ಥಿತರು:–** ಬಾಲಗಂಗಾಧರ ಹೆಚ್.ಬಿ., ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ.

| **ಫಿರ್ಯಾದುದಾರರು:–** | **–ವಿರುದ್ಧ–** | **ಆರೋಪಿ:–** |
|---|---|---|
| ಆರಕ್ಷಕ ಉಪ ನಿರೀಕ್ಷಕರು<br>ದಿಬ್ಬೂರಹಳ್ಳಿ ಪೊಲೀಸ್ ಠಾಣೆ,<br>ಶಿಡ್ಲಘಟ್ಟ ತಾಲ್ಲೂಕು. | | ಕೆ.ಮಂಜುನಾಥ ಬಿನ್ ಲೇ॥ ಕೃಷ್ಣಪ್ಪ,<br>ದ್ಯಾವರಹಳ್ಳಿ, ಬಶೆಟ್ಟಹಳ್ಳಿ ಹೋಬಳಿ,<br>ಶಿಡ್ಲಘಟ್ಟ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:–**

ದಿನಾಂಕ:29–06–2010 ರಂದು ಬೆಳ್ಳಿಗೆ 9–00 ಘಂಟೆಯ ಸಮಯದಲ್ಲಿ ಫಿರ್ಯಾದುದಾರರು ಖಚಿತ ಮಾಹಿತಿಯ ಮೇರೆಗೆ ಸಿಬ್ಬಂದಿ ಪಂಚರೊಂದಿಗೆ ಶಿಡ್ಲಘಟ್ಟ ತಾಲ್ಲೂಕು ದಿಬ್ಬೂರಹಳ್ಳಿಯಲ್ಲಿರುವ ಶ್ರೀ ಸಾಯಿಚರಣ್ ಸರ್ವೀಸ್ ಸ್ಟೇಷನ್ ಮುಂಭಾಗದಲ್ಲಿ ಹಾದು ಹೋಗುವ ಚಿಂತಾಮಣಿ – ಬಾಗೇಪಲ್ಲಿ ರಸ್ತೆಯಲ್ಲಿ ರಸ್ತೆಕಾವಲು ನಡೆಸುತ್ತಿದ್ದಾಗ ದಿಬ್ಬೂರಹಳ್ಳಿ ಕಡೆಯಿಂದ ಪೆಟ್ರೋಲ್ ಬಂಕ್ ಕಡೆಗೆ ಬರುತ್ತಿದ್ದ ದ್ವಿಚಕ್ರ ವಾಹನವನ್ನು ನಿಲ್ಲಿಸಿ ಆ ವಾಹನವನ್ನು ಪರಿಶೀಲಿಸಿದಾಗ ವಾಹನದ ಮುಂಭಾಗದಲ್ಲಿರುವ ಪುಟ್ ಬೋರ್ಡ್‌ನ ಮೇಲೆ ಬಟ್ಟೆಯ ಬ್ಯಾಗ್‌ನ ಮೂಟೆ ಇದ್ದು, ಇದರ ಬಗ್ಗೆ ದ್ವಿಚಕ್ರ ಸವಾರನನ್ನು ವಿಚಾರಿಸಿದಾಗ ಆತನು ಸದರಿ ಬ್ಯಾಗ್‌ನಲ್ಲಿರುವ ಮದ್ಯದ ಬಾಟಲುಗಳು ಅಂತ ತಿಳಿಸಿದ್ದು, ಈ ಬಾಟಲುಗಳನ್ನು ಎಲ್ಲಿಂದ ತಂದಿದ್ದು, ಎಂದು ಕೇಳಲಾಗಿ ಆತನು ದಿಬ್ಬೂರಹಳ್ಳಿಯ ಮಂಜುನಾಥ ಎಂಬುವನಿಂದ ಪಡೆದುಕೊಂಡು ಬಂದಿರುವುದಾಗಿ ತಿಳಿಸಿದ್ದು, ನಂತರ ಆಸಾಮಿಯ ಹೆಸರು ವಿಚಾರಿಸಿದಾಗ ಆತನು ತನ್ನ ಹೆಸರು ಕೆ. ಮಂಜುನಾಥ ಬಿನ್ ಲೇ. ಕೃಷ್ಣಪ್ಪ, ದ್ಯಾವರಹಳ್ಳಿ ಗ್ರಾಮ, ಶಿಡ್ಲಘಟ್ಟ ತಾಲ್ಲೂಕು ಎಂದು ತಿಳಿಸಿದ್ದು, ತದನಂತರ ವಾಹನವನ್ನು ಅಜಮಾಯಿಸಿ ನೋಡಲಾಗಿ ಇದು ಬಜಾಜ್ ಕಂಪನಿಯ ವಾಹನವಾಗಿದ್ದು, ಈ ವಾಹನದ ಮುಂಭಾಗದಲ್ಲಿ ಬಜಾಜ್ ಚೇತಕ್ ಎಲೆಕ್ಟ್ರಾನಿಕ್ಸ್ ಅಂತ ಆಂಗ್ಲ ಭಾಷೆಯಲ್ಲಿ ಬರೆದಿದ್ದು, ಇದು ಸಿಮೆಂಟ್ ಬಣ್ಣದಿಂದ ಕೂಡಿದ್ದು, ಈ ವಾಹನ ಮುಂಭಾಗ ಮತ್ತು ಹಿಂಭಾಗದಲ್ಲಿ ಕೆಎ–04–Q–2925 ಅಂತ ನೊಂದಣಿ ಸಂಖ್ಯೆ ಇರುತ್ತದೆ. ಸದರಿ ಬಟ್ಟೆಯ ಬ್ಯಾಗ್‌ನ್ನು ಬಿಚ್ಚಿ ಪರಿಶೀಲಿಸಲಾಗಿ ರಾಜಾ ವಿಸ್ಕಿ ಕಂಪನಿಯ ಒಟ್ಟು 34 ಮದ್ಯದ ಬಾಟಲುಗಳಿದ್ದು, ಪ್ರತಿಯೊಂದು ಬಾಟಲಿನ ಮೇಲೆ 180 ಎಂ.ಎಲ್. ನ ರಾಜಾ ವಿಸ್ಕಿ ಅಂತ ನಮೂದಿಸಲಾಗಿದ್ದು, ಈ ಮದ್ಯದಿಂದ 180 ಎಂ.ಎಲ್. 1 ಬಾಟಲನ್ನು ರಾಸಾಯನಿಕ ಪರೀಕ್ಷೆ ಮಾದರಿ ತೆಗೆದು ಉಳಿದ ಮದ್ಯ ಮತ್ತು ವಾಹನವನ್ನು ಜಪ್ತುಪಡಿಸಿಕೊಂಡು ನಂತರ ಆರೋಪಿಯನ್ನು ದಸ್ತಗಿರಿ ಮಾಡಿದ್ದು, ಈ ಪ್ರಕರಣವೂ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 34, 40 ರಡಿಯಲ್ಲಿ ಕ್ರೈಂ ಸಂ:66/2010, ದಿನಾಂಕ:29/06/2010 ರಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು ಆಸಾಮಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ ನಂತರ ಪ್ರ.ಮಾ.ವ. ಮಹಜರ್ ಪ್ರತಿಯೊಂದಿಗೆ ಪಿ.ಎಫ್. ಸಲ್ಲಿಸಿ ಪ್ರಕರಣದಲ್ಲಿ ಜಪ್ತುಪಡಿಸಿದ ಮದ್ಯ ಮತ್ತು ವಾಹನವನ್ನು ಅಬಕಾರಿ ನಿರೀಕ್ಷಕರು, ಶಿಡ್ಲಘಟ್ಟ ವಲಯ ಇವರಿಗೆ ಹಸ್ತಾಂತರಿಸಲು ಪ್ರಾಧಿಕಾರದಿಂದ ಅನುಮತಿ ನೀಡಬೇಕೆಂದು ದಿನಾಂಕ:02/07/2010 ರಂದು ಕೋರಿರುತ್ತಾರೆ.

ಸ್ವತ್ತಿನ ಪಟ್ಟಿ ಸಂ:49/10 ರಲ್ಲಿ ವಾಹನ/ ಮದ್ಯವನ್ನು ಅಬಕಾರಿ ನಿರೀಕ್ಷಕರು, ಶಿಡ್ಲಘಟ್ಟ ವಲಯ ಇವರಿಗೆ ಹಸ್ತಾಂತರಿಸಲು ಈ ಪ್ರಾಧಿಕಾರದಿಂದ ದಿನಾಂಕ:02/07/2010 ರಂದು ಅನುಮತಿ ನೀಡಲಾಗಿರುತ್ತದೆ.

ಅಬಕಾರಿ ನಿರೀಕ್ಷಕರು, ಶಿಡ್ಲಘಟ್ಟ ವಲಯ ರವರು ತನಿಖೆಯನ್ನು ಮುಂದುವರೆಸಿ ಜಪ್ತುಪಡಿಸಿದ ಮದ್ಯದಿಂದ ತೆಗೆಯಲಾದ ಮಾದರಿಯನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಅಬಕಾರಿ ಇಲಾಖೆ, ಬೆಂಗಳೂರು ಇವರಿಗೆ ಸಲ್ಲಿಸಿದ್ದು, ತಜ್ಞರ ವರದಿ ಸಂ:ಸಿಸಿಎಲ್:3634/2010, ದಿನಾಂಕ:06/07/2010 ರ ಪತ್ರದಂತೆ ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾದ ಮಾದರಿಯಲ್ಲಿ ಮದ್ಯಸಾರದ ಅಂಶ $25.6^0$ ಯು.ಪಿ. ಇದ್ದು, ಇದರಲ್ಲಿ ಈಥೈಲ್ ಅಲ್ಕೋಹಾಲ್ ಅಂಶ ಕಂಡುಬಂದಿದ್ದು, ಇದು ಮಾನವನ ಸೇವನೆಗೆ ಯೋಗ್ಯವಾಗಿರುತ್ತವೆ ಎಂದು ತಜ್ಞರು

ಅಭಿಪ್ರಾಯ ನೀಡಿದ್ದು, ತಜ್ಞರ ವರದಿಯ ಪ್ರತಿಯನ್ನು ಅಬಕಾರಿ ನಿರೀಕ್ಷಕರು, ಶಿಡ್ಲಘಟ್ಟ ವಲಯ ರವರ ಪತ್ರ ದಿನಾಂಕ:21/04/2011 ರೊಂದಿಗೆ ಲಗತ್ತಿಸಿ ಈ ಮೊಕದ್ದಮೆಯಲ್ಲಿ ಜಪ್ತುಪಡಿಸಲಾದ 6.120 ಲೀ. ರಾಜಾ ವಿಸ್ಕಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತನಿಖಾಧಿಕಾರಿಗಳು ವರದಿ ಸಲ್ಲಿಸಿದ್ದು, ಅದರಂತೆ ವಾಹನ ಹೊರತುಪಡಿಸಿ ಪ್ರಕರಣ ತನಿಖೆ ಕಾಯ್ದರಿಸಿ 6.120 ಲೀ. ಮದ್ಯವನ್ನು ದಿನಾಂಕ;26/04/2011 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮಾದರಿ ಹೊರತುಪಡಿಸಿ ಉಳಿದ ಮದ್ಯವನ್ನು ನಿಯಮಾನುಸಾರ ನಾಶಪಡಿಸಲು ಪ್ರಾಧಿಕಾರದಿಂದ ಆದೇಶಿಸಲಾಗಿತ್ತು.

ಈ ಪ್ರಕರಣದಲ್ಲಿ ಜಪ್ತುಪಡಿಸಿದ ಬಜಾಜ್ ಚೇತಕ್ ಸ್ಕೂಟರ್ ನೊಂದಣಿ ಸಂ:ಕೆಎ–04 ಕ್ಯೂ–2925 ರ ಮಾಲೀಕತ್ವದ ಬಗ್ಗೆ ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಯಶವಂತಪುರ, ಬೆಂಗಳೂರು ನಗರ ಜಿಲ್ಲೆ ರವರಿಗೆ ಈ ಪ್ರಾಧಿಕಾರದಿಂದ ಪತ್ರ ಬರೆದಿದ್ದು, ಅದರಂತೆ ಸಾರಿಗೆ ಅಧಿಕಾರಿಗಳ "ಬಿ" ವಹಿಯ ಪ್ರಕಾರ ಸದರಿ ವಾಹನದ ನೊಂದಣಿಯ ಮಾಲೀಕರಾದ ಅಶ್ವತ್ಥನಾರಾಯಣ ಜಿ. ಬಿನ್ ಗೋಪಾಲಪ್ಪ, ಸಿಂಗನಾಯಕನಹಳ್ಳಿ ಪೋಸ್ಟ್, ಬೆಂಗಳೂರು–64 ಇವರಿಗೆ ದಿನಾಂಕ:11/04/2011 ರಂದು ಪ್ರಾಧಿಕಾರದಿಂದ ಆರ್.ಪಿ.ಎ.ಡಿ. ಮೂಲಕ ಕಾರಣ ಕೇಳಿ ನೋಟೀಸ್‌ನ್ನು ರವಾನಿಸಿದ್ದು, ನೋಟೀಸ್‌ನ್ನು ಮಾಲೀಕರು ಪಡೆದ ಬಗ್ಗೆ ಸ್ವೀಕೃತಿ ಪತ್ರ ಬಂದಿರುತ್ತದೆ. ಅಬಕಾರಿ ನಿರೀಕ್ಷಕರು, ಶಿಡ್ಲಘಟ್ಟ ವಲಯ ಇವರ ಪತ್ರ ದಿನಾಂಕ:24/10/2011 ರಲ್ಲಿ ವಾಹನದ ಮಾಲೀಕರಾದ ಅಶ್ವತ್ಥನಾರಾಯಣ ಜಿ. ಬಿನ್ ಗೋಪಾಲಪ್ಪ ರವರಿಗೆ ನೋಟೀಸ್‌ನ್ನು ಜಾರಿ ಮಾಡಲು ಹಲವು ಬಾರಿ ಪ್ರಯತ್ನಿಸಿದರೂ ಆಸಾಮಿಯು ಬಹಳ ವರ್ಷಗಳ ಹಿಂದೆ ಸದರಿ ವಿಳಾಸದಲ್ಲಿ ವಾಸವಿದ್ದು, ಪ್ರಸ್ತುತ ಸದರಿಯವರು ವಾಸವಿರುವುದಿಲ್ಲವೆಂದು ಅಕ್ಕಪಕ್ಕದ ಮನೆಯವರು ತಿಳಿಸಿರುವುದಾಗಿ ವರದಿಸುತ್ತಾ ಸದರಿ ವಾಹನ ತನ್ನದೆಂದು ಆರೋಪಿಯಾಗಲೀ ಅಥವಾ ವಾಹನ ಮಾಲೀಕರಾಗಲೀ ಇಲ್ಲಿಯವರೆವಿಗೂ ವಾಹನದ ಮೂಲ ದಾಖಲಾತಿಗಳೊಂದಿಗೆ ವಾಹನ ಬಿಡುಗಡೆ ಬಗ್ಗೆ ಮನವಿ ಸಲ್ಲಿಸಿರುವುದಿಲ್ಲ. ಸದರಿ ವಾಹನವನ್ನು ಜಪ್ತುಪಡಿಸಿ ಒಂದು ವರ್ಷ ಕಳೆದರೂ ಸಹ ವಾಹನ ತಮ್ಮದೆಂದು ಯಾರೂ ಮುಂದೆ ಬಾರದ ಕಾರಣ ಈ ವಾಹನವನ್ನು ನಿಂತ ಸ್ಥಳದಲ್ಲಿ ನಿಲ್ಲಿಸಿದಲ್ಲಿ ಅದರ ಮೌಲ್ಯ ಕುಂಠಿತಗೊಳ್ಳುವುದರಿಂದ ಕೂಡಲೇ ಈ ವಾಹನವನ್ನು ವಾರಸುದಾರರು ಇಲ್ಲದ ವಾಹನವೆಂದು ಪರಿಗಣಿಸಿ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ದಿನಾಂಕ:28/10/2011 ರಂದು ಪ್ರಕರಣವನ್ನು ಪ್ರಾಧಿಕಾರದಲ್ಲಿ ವಿಚಾರಣೆಗೆ ತೆಗೆದುಕೊಳ್ಳಲಾಗಿ ವಾಹನ ಮಾಲೀಕತ್ವ ಹೊಂದಿರುವವರು ಈ ಪ್ರಾಧಿಕಾರದ ಮುಂದೆ ಯಾರೂ ಹಾಜರಾಗಿರುವುದಿಲ್ಲ. ದಾಖಲೆಗಳು, ಪ್ರ.ಮಾ.ವ. ಮಹಜರ್‌ನ್ನು ಪರಿಶೀಲಿಸಲಾಗಿ ಆರಕ್ಷಕ ಉಪ ನಿರೀಕ್ಷಕರು, ದಿಬ್ಬೂರಹಳ್ಳಿ ಪೊಲೀಸ್ ಠಾಣೆ ರವರು ದಿನಾಂಕ:29/06/2010 ರಂದು ಶಿಡ್ಲಘಟ್ಟ ತಾಲ್ಲೂಕು ದಿಬ್ಬೂರಹಳ್ಳಿಯಲ್ಲಿರುವ ಶ್ರೀ ಸಾಯಿಚರಣ್ ಸರ್ವೀಸ್ ಸ್ಟೇಷನ್ ಮುಂಭಾಗದಲ್ಲಿ ಹಾದು ಹೋಗುವ ಚಿಂತಾಮಣಿ – ಬಾಗೇಪಲ್ಲಿ ರಸ್ತೆಯಲ್ಲಿ ರಸ್ತೆಕಾವಲು ನಡೆಸುತ್ತಿದ್ದಾಗ ಬಜಾಜ್ ಚೇತಕ್ ಸ್ಕೂಟರ್ ನೊಂದಣಿ ಸಂ:ಕೆಎ–04 ಕ್ಯೂ–2925 ರ ವಾಹನದಲ್ಲಿ 6.120 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುವ ಸಮಯದಲ್ಲಿ ಜಪ್ತುಪಡಿಸಿರುವುದು ಸಾಬೀತಾಗಿರುತ್ತದೆ. ಅಲ್ಲದೆ ರಾಸಾಯನಿಕ ತಜ್ಞರ ವರದಿಯನ್ವಯ ಜಪ್ತುಪಡಿಸಿರುವ ಮದ್ಯದಲ್ಲಿ ಈಥೈಲ್ ಆಲ್ಕೋಹಾಲ್ ಅಂಶ ಕಂಡು ಬಂದಿರುವುದರಿಂದ ಈ ವಾಹನವನ್ನು ಅಬಕಾರಿ ವಸ್ತುಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದು ಸಾಬೀತಾಗಿರುತ್ತದೆ ಹಾಗೂ ಈ ವಾಹನ ತನ್ನದೆಂದು ಕೋರಿ ಯಾರೂ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಅಬಕಾರಿ ನಿರೀಕ್ಷಕರು, ಶಿಡ್ಲಘಟ್ಟ ವಲಯ ಇವರ ಶಿಫಾರಸ್ಸಿನಂತೆ ಈ ಕೆಳಕಂಡ ಆದೇಶ.

**ಆದೇಶ**

ಬಾಲಗಂಗಾಧರ ಹೆಚ್.ಬಿ., ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು(ಪ್ರಭಾರ), ಚಿಕ್ಕಬಳ್ಳಾಪುರ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿ ಕ್ರಮ ಜರುಗಿಸಿ ಆರಕ್ಷಕ ಉಪ ನಿರೀಕ್ಷಕರು, ದಿಬ್ಬೂರಹಳ್ಳಿ ಪೊಲೀಸ್ ಠಾಣೆ ರವರ ದಿನಾಂಕ:29/06/2010 ರ ಪ್ರ.ಮಾ.ವ.ಸಂಖ್ಯೆ 66/2010 ರಲ್ಲಿ ಜಪ್ತುಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್ ನೊಂದಣಿ ಸಂ:ಕೆಎ–04 ಕ್ಯೂ–2925 ನ್ನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ವಾಹನಕ್ಕೆ ಸಂಬಂಧಿಸಿದಂತೆ ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ:28/10/2011 ರಂದು ಈ ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಿರುತ್ತೇನೆ. ಮೇಲ್ಮನವಿ ಅವಧಿ ಮುಗಿದ ನಂತರ ಕಾನೂನು ರೀತ್ಯಾ ಮೇಲ್ಕಂಡ ವಾಹನವನ್ನು ವಿಲೇವಾರಿ ಮಾಡಲು ಆದೇಶಿಸಿದೆ.

**ಬಾಲಗಂಗಾಧರ ಹೆಚ್.ಬಿ.,**
ಪ್ರಾಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಉಪ ಆಯುಕ್ತರು(ಪ್ರಭಾರ),
ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

**ಪಿ.ಆರ್. 1294**

## COMMERCIAL TAXES DEPARTMENT

**Office of the Commissioner of Commercial Taxes (Karnataka), Vanijya Therigegala Karyalaya, Kalidasa Road, Gandhinagar, Bangalore-560009**

**PREAMBLE**

**No. ADCOM (I&C)/P.A./CR-31/2011-12, Bangalore, Date: 23/12/2011**

Whereas, Sub-section (2) of Section 53 of the Karnataka Value Added Tax Act, 2003(Karnataka Act No. 32 of 2004) specifies that certain documents shall accompany a goods vehicle which have to be produced at the time of checking of such vehicle and

Whereas Clause (b) of Sub-section (2) of Section 53 of the Karnataka Value Added Tax Act, 2003 (Karnataka Act No. 32 of 2004) authorizes the Commissioner to notify the documents which should accompany the goods carried in the goods vehicle and

Whereas such production and verification of the documents consume time and may also lead to avoidable delays at the time of check and

Whereas it is expedient in the public interest to have a system where all transactions recorded in such documents are properly accounted for by the dealers and

Whereas Sub-section 2-A of Section 53 of the Karnataka Value Added Tax Act, 2003(Karnataka Act No. 32 of 2004) authorizes the Commissioner to notify the goods, the transport of which needs to be entered in the notified website.

Now, therefore, in exercise of the powers vested under Section 53(2-A) (b) of the KVAT Act, 2003(Karnataka Act No. 32 of 2004) and in supercession of the Notifications No.ADCOM(I&C)/P.A./CR-31/2011-12 dated 3-11-2011 and 30-11-2011, following Notification is issued and it comes into effect from 01-01-2012.

**NOTIFICATION**

**PART - A**

**FOR DESPATCHES BY REGISTERED DEALERS AS A RESULT OF SALE**

1. Every dealer registered under the Act who dispatches any of the following goods:
    1. All kinds of Electrical goods including appliances
    2. All kinds of Automobile parts and accessories thereof
    3. All kinds of Furniture
    4. All kinds of Hardware excluding Computer Hardware
    5. All kinds of Paper
    6. All sizes of Cement Concrete Blocks and Cement Bricks
    7. Arecanut
    8. Cardamom
    9. Cashew
    10. Coffee Seeds
    11. Cotton
    12. Edible Oil including Vanaspathi
    13. Flooring / Wall tiles of all kinds
    14. Glass in all forms
    15. Granite/Marble blocks, slabs and tiles
    16. Gutka, Khaini, Cigarettes, Zarda, All kinds of Tobacco other than Raw Tobacco, Pan Masala, Pan Chatnis, Scented Snuffs and Kheemam
    17. Iron and Steel as described in item iv of Section 14 of the CST Act, 1956
    18. Oil Seeds including copra
    19. Ores of all kinds
    20. Paints

21. Pepper
22. Plastic Granules of every description.
23. Plywood, Veneer, Boards including flooring boards and laminated sheets
24. Ready Concrete Mixture
25. Rubber
26. Sanitary fittings of every description
27. Scrap of ferrous and non-ferrous metals
28. Timber including Eucalyptus and Casurina

as a result of sale, whose sale value exceeds twenty thousand rupees shall enter the details of such goods in the format appearing in one of the departmental websites namely **http://vat.kar.nic.in/, http://sugam.kar.nic.in, http://sugam2.kar.nic.in,** before the movement of goods commences. A photocopy of the tax invoice shall be carried in addition to entering the details in the departmental website when the goods covered by a single invoice are carried in more than one goods vehicle. Further, if a single invoice has more than one commodity, in addition to entering the details in the departmental website, the invoice shall accompany the goods vehicle. The following details shall be uploaded onto the website:

| | |
|---|---|
| 1 | TIN of the consignor |
| 2 | Name and address of the Consignor |
| 3 | TIN of the consignee |
| 4 | Name and address of the consignee |
| 5 | Place from where goods are consigned |
| 6 | Place to which goods are consigned |
| 7 | Invoice, Delivery Challan, Gate Pass, Declaration or the like. |
| 8 | Date of invoice or date of any of the above mentioned documents |
| 9 | Description of goods |
| 10 | Quantity of goods |
| 11 | Value of goods |
| 12 | Date of desptach |

Further, the following details may also be uploaded;-

| | |
|---|---|
| 1 | Goods vehicle number |
| 2 | LR number |
| 3 | LR Date |

2. The dealers dispatching goods other than those mentioned in Para-1 above may also upload information in the abovementioned manner so as to facilitate expeditious clearance at the check posts.

## PART – B

## FOR TRANSPORTATION NOT AS A RESULT OF SALE

3. Every dealer registered under the Act who transports any taxable goods not as a result of sale shall enter the details of the goods being transported in goods vehicle in the format appearing in one of the departmental websites namely: **http://vat.kar.nic.in/, http://sugam.kar.nic.in http://sugam2.kar.nic.in** Such entry shall be made before the movement of goods commences. The following details shall be uploaded on the website:-

| | |
|---|---|
| 1 | TIN of the consignor |
| 2 | Name and address of the Consignor |
| 3 | TIN of the consignee |
| 4 | Name and address of the consignee |
| 5 | Place from where goods are consigned |
| 6 | Place to which goods are consigned |
| 7 | Purpose of Transport |

| | |
|---|---|
| 8 | Sl.No. of Stock Transfer/Branch Transfer Memo/Gate Pass/Delivery Challan or the like. |
| 9 | Date of the documents mentioned above |
| 10 | Description of goods |
| 11 | Quantity of goods |
| 12 | Value of goods |
| 13 | Date of despatch |

Further, the following details may also be uploaded;-

| | |
|---|---|
| 1 | Goods vehicle number |
| 2 | L.R. Number |
| 3 | L.R.Date |

4. Such transportation of goods shall include transportation wherein the buyer has taken possession of goods after purchase and is transporting the same to self. If the seller is an unregistered dealer then the dealer purchasing the goods should enter details as both consignor and consignee.

## PART – C

## FOR RECEIPT OF GOODS FROM PLACES OUTSIDE THE STATE

1. Every dealer registered under the Act who receives (as a result of purchase or otherwise and which includes import from outside the country) the following goods from outside the State:
    1. All kinds of Automobile parts and accessories thereof
    2. All kinds of Electrical goods and Appliances
    3. All kinds of Furniture
    4. All kinds of Hardware excluding Computer Hardware
    5. All kinds of Paper
    6. All sizes of Cement Concrete Blocks and Cement Bricks
    7. Cement
    8. Dry Fruits
    9. Edible oil including Vanaspathi
    10. Flooring/Wall tiles of all kinds
    11. Glass in all forms
    12. Granite/Marble blocks, slabs and tiles
    13. Gutka, Khaini, Cigarettes, Zarda, all kinds of Tobacco other than Raw Tobacco, Pan Masala, Pan Chatnis, Scented Snuffs and Kheemam
    14. Iron and Steel as described in item iv of Section 14 of the CST Act, 1956
    15. Machinery of all kinds, parts and accessories thereof
    16. Ores of all kinds
    17. Paints
    18. Plastic Granules of every description
    19. Plywood, Veneers, Boards including flooring boards and laminated sheets
    20. Ready Concrete Mixture.
    21. Sanitary fittings of every description.
    22. Timber including Eucalyptus and Casurina

shall enter the following details of the goods being received in the format appearing in one of the departmental websites namely **:http://vat.kar.nic.in/, http://sugam.kar.nic.in, http://sugam2.kar.nic.in_**before the goods vehicle enters the State;-

| | |
|---|---|
| 1 | TIN of the consignor |
| 2 | Name and address of the Consignor |
| 3 | TIN of the consignee |

| | |
|---|---|
| 4 | Name and address of the consignee |
| 5 | Place from where goods are consigned |
| 6 | Place to which goods are consigned |
| 7 | Invoice Number(issued by seller) if movement is as a result of purchase |
| 8 | Serial number any other document if received otherwise than by way of purchase |
| 9 | Date of invoice/document |
| 10 | Description of goods |
| 11 | Quantity of goods |
| 12 | Value of goods |
| 13 | Probable date of receipt |

Further, the following details may also be uploaded;-

| | |
|---|---|
| 13 | Goods vehicle number |
| 14 | LR number |
| 15 | LR Date |

6. The dealers receiving other goods may also upload information in the aforesaid manner so as to facilitate expeditious clearance at the check posts.

## PART – D

## FOR MOVEMENT OF GOODS WITHIN A REVENUE DISTRICT LIMITS FOR JOB WORK

7.(a) The dealers who are transporting any taxable goods from their place of business to any other place within the limits of a revenue district for the purposes of job-work of all kinds, shall enter the following details of the goods in the format appearing in one of the departmental websites namely :http://vat.kar.nic.in/, http://sugam.kar.nic.in, http://sugam2.kar.nic.in before the movement of goods commences.

| | |
|---|---|
| 1 | TIN of the consignor |
| 2 | Name and address of the Consignor |
| 3 | TIN of the consignee(If registered dealer) |
| 4 | Name and address of the consignee |
| 5 | Place from where goods are consigned |
| 6 | Place to which goods are consigned |
| 7 | Purpose of Transport |
| 8 | Sl.No. of Delivery Challan or the like. |
| 9 | Date of the documents mentioned above |
| 10 | Description of goods |
| 11 | Quantity of goods |
| 12 | Value of goods |
| 13 | Date of despatch |

Further, the following details may also be uploaded;-

| | |
|---|---|
| 1 | Goods vehicle number |
| 2 | L.R. Number |
| 3 | L.R.Date |

(b) Any further movement of the goods coming under clause (a) above shall be supported by the labour charges bill or self printed delivery challan or Form VAT-515 issued by the dealer or person who has carried on job work for the registered dealer and such document shall contain the unique number relating to the e-SUGAM.

## PART – E

## FOR MOVEMENT OF GOODS WITHIN A REVENUE DISTRICT LIMITS FOR THE PURPOSES OTHER THAN AS A RESULT OF SALE OR JOB WORK

8. The dealers who dispatches any taxable goods from their place of business to any other place within the limits of a revenue district other than as a result of sale or job work but for the purposes like weighment; line sale; transfer to or from depot, godown (warehouse), branch, head office; shall use self- printed delivery notes in Form VAT 515.

## PART-F

## PROCEDURE TO ENTER THE INFORMATION IN PARTS A, B, C AND D OF THE NOTIFICATION IN 'e-SUGAM'

9. For making entries in the format given above, the following procedure may be followed:

i) Every such dealer shall log onto any one of the following three websites:

**(1) http://vat.kar.nic.in/** **(2) http://sugam.kar.nic.in**
**(3) http://sugam2.kar.nic.in**

ii) Every such dealer shall obtain his user name and password from the jurisdictional LVO or VSO, if it is not already communicated to him by the LVO or VSO for logging on to the departmental website for making entries in Part A, B, C, and D, the dealer is required to chose the appropriate field as appearing in the common format by clicking the corresponding options.

iii) Using the user name and password communicated to him/her by the jurisdictional Local VAT Officer (LVO) or VAT sub Officer (VSO) he shall proceed to make entries with the help of the instructions contained in the website in Part A, B, C, and D, of the notification, the dealer is required to choose the appropriate field as appearing in the common format by clicking the corresponding options. The dealer can choose appropriate box in the common module 'e-SUGAM' for all types of entries in part "A", "B" "C" or "D" as the case may be of the Notification.

iv) After submission of the requisite information, the computer would generate and display a unique number. The dealer should note down this number on paper in a clear and legible manner. There would also be a facility to take a print from the computer and this print will have all the details uploaded by the dealer along with the 'unique number'. The person in charge of the goods vehicle shall produce the unique number to the check post officer or any other officer who intercepts the goods vehicle enroute in the State. In case, the dealer is unable to generate such unique number in the place of loading of goods, due to non availability of internet or computer facility he may still log on to the notified websites, at a place where such internet or computer facility is available and upload the required details and then obtain the unique number.

v) Every such dealer shall view the report of all such entries made and unique numbers generated by him during every week for which a facility is provided on the websites to ensure the correctness of the entries and also to ensure that the facility of entry of transactions made by him is not misused by any unauthorized person. In case a dealer finds that any entry of transactions recorded in his account is not entered by him, he should immediately change his password and if for any reason he is unable to change the password he should report this fact to the jurisdictional LVO or VSO in writing. Further, such dealer shall also inform the jurisdictional LVO or VSO within three days from the date of entry of such transaction which he claims to be not made by him.

vi) The dealer should keep the pass word in proper custody. The dealers are advised to change the password at regular intervals.

vii) In order to ensure that there are no instances of misuse of the facility of 'e-SUGAM', it is prescribed that the 'e-SUGAM' once uploaded shall be valid for the following durations;

| | | |
|---|---|---|
| 1) If the distance from the origin of the goods to the destination is less than 100 KMs | - | validity period is 2 days from the day of uploading |

| | | |
|---|---|---|
| 2) If the distance from the origin of the goods to the destination is between 100 KMs and 500 KMs | - | validity period is 3 days from the day of uploading |
| 3) If the distance from the origin of the goods to the destination is above 500 KMs and 1000 KMs | - | validity period is 5 days from the day of uploading |
| 4) If the distance from the origin of the goods to the destination is above 1000 KMs | - | validity period is 10 days from the day of uploading |

The day will be reckoned as 24 hours from the time of uploading.

10. Instances of non-compliance of this Notification or entering of wrong data would invite penalties under sub-section (12) of Section 53 of the Karnataka Value Added Tax Act, 2003(Karnataka Act No. 32 of 2004).

## PART-G

## ADDITIONAL FACILITIES IN THE 'e-SUGAM' AVAILABLE IF UPLOADED THROUGH INTERNET VIA COMPUTER

1. **Multiple 'username' and 'password':** If the dealer has more than one place of business and requires more than one 'password', he shall apply to the jurisdictional LVO/VSO. The jurisdictional LVO/VSO will forward the request to Head Quarters who would then issue required number of 'passwords' as requested by the dealer.
2. **Uploading of details of multiple commodities specified in a single invoice:** If there are more than one commodity in an invoice, the dealer may specify the consolidated value of all such commodities and the description of commodities may be entered in the box provided in the entry form.
3. **Entering multiple invoices relating to the same consignor/consignee:** If there are goods covered by multiple invoices relating to the same consignor/ consignee being transported in the same goods vehicle, the dealer may upload the total value and quantity of goods covered by all such invoices. The invoice number of each and such invoices should be mentioned in the additional column provided.

## PART- H

## PROCEDURE TO ENTER THE INFORMATION IN 'm-SUGAM' FOR PURPOSES OF PART-A, B, C AND D OF THE NOTIFICATION

For dealers who do not have the facility of computer, a new system called 'm-SUGAM' is developed and is put in place for enabling the dealers to upload the details of goods to be transported into the department's website through their own mobile phones. 'm-SUGAM' is a new method for getting the 'e-SUGAM' number for arrival and movement of goods through SMS from their own mobile phone number. For using the 'm-SUGAM' service, the dealer has to write to the LVO/VSO concerned using his existing user-name & password and register two mobile numbers for 'e-SUGAM'.

**a.** For uploading the information in 'm-SUGAM' the dealer in the first place has to login to one of the department's website namely **http://vat.kar.nic.in/, http://sugam.kar.nic.in, http://sugam2.kar.nic.in/** and register the commodities dealing in for the purposes of availing of the 'e-SUGAM' facility, using the option 'Reports and Help'→ 'Add 'e-SUGAM' commodities' and then select the commodities which he/she would be transporting, for 'm-SUGAM' purpose and save the same. He has to note down the commodity codes corresponding to the commodity added/saved and then mention the relevant commodity code numbers in the 'm-SUGAM' for the purpose of sending the SMS for generating 'm-SUGAM' number.

**b.** There are six parameters used for sending the information through SMS to a designated mobile telephone Nos.9212357123 or 9243355223. Once the information sent reaches the department's server, the system will validate the details of information and generates 'm-SUGAM' number and return it back to the sender for being

used by the sender for enabling its use during movement of goods. The number so generated may be passed on to the transporter for issuing it at the check-post or at the point of interception of the goods vehicle by the officers of the department. The SMS format for sending the information of the details of goods to be transported for getting the 'm-SUGAM' number generated is as under:

KSR [Space] (Write Type of Transaction) [Space] (Write Type of Category of Transaction) [Space] OTHER PARTY TIN [Space] INVOICE NUMBER [Space] INVOICE VALUE [Space] COMMODITY CODE [Space] OTHER PARTY LOCATION

The system will carry out the following validations before processing the request. In case of failure of validation, the system sends the appropriate error message to the mobile number:

2. It will validate the mobile number linked to the trader's TIN before accepting the request.
3. It will validate the correct key word – KSR for Karnataka 'e-SUGAM'.
4. It will validate the correctness of codes for WS/IS/IM/EX and for TYPE_SAL/PUR/THP/SGS/JRL/STR/STD/CSR/CSD/OTH.
5. It will verify the TIN of the local registered dealer of Karnataka wherever the TIN is entered.
6. It will validate the COMM_CODE against the commodity registered by the dealer for SUGAM purposes.

**c.** The following table gives the parameters with explanation and acceptable values:

| Sl. No. | Parameter Name | Description | Acceptable Value |
|---|---|---|---|
| 1 | Type of Transaction | Indicates whether the transaction is within the State or outside the State | WS – Within State<br>IS – Inter-State<br>EX – Export<br>IM – Import |
| 2 | Category of Transaction | Indicates type of transaction being carried out | SAL – After Sale<br>PUR – After Purchase<br>THP – To His Principal<br>SGS – To Shop/Godown<br>JRL – Job Work/Return/Line Sales<br>CSD – Consignment Sale (Despatch)<br>CSR – Consignment (Receipt)<br>STD – Stock Transfer (Despatch)<br>STR – Stock (Receipt)<br>OTH – Others |
| 3 | Other_Party_TIN | Indicates the TIN of the other Party | C – Consumer/Un-regd. Dealer<br>TIN – 11 digits TIN of the Reg. Dlr. |
| 4 | Invoice Number | Indicates the document/ invoice number of the transaction | 10 Characters of ALPHA NUMERIC value. Special characters not allowed |
| 5 | Invoice Value | Indicates the value of the invoice/document/goods | 10 Digits numeric values |
| 6 | Code Number of the Commodity | Indicates the commodity code of commodities registered by the dealer in the department's Website | 5 Digits numeric values |

| Sl. No. | Parameter Name | Description | Acceptable Value |
|---|---|---|---|
| 7 | Other Party Location | Indicates the place where the goods are moved to in case of sale/dispatch or place from where the goods are moved from in case of purchase/ receipt. | 25 Characters |

**Pradeep Singh Kharola**
Commissioner of Commercial Taxes
(Karnataka), Bangalore.

## COMMERCIAL TAXES DEPARTMENT

**Office of the Commissioner of Commercial Taxes (Karnataka), Vanijya Therigegala Karyalaya, Kalidasa Road, Gandhinagar, Bangalore-560009**

**CORRIGENDUM**

**No. ADCOM (I&C)/P.A./CR-31/2011-12, Bangalore, Date: 27/12/2011**

In the Notification No. ADCOM (I&C)/P.A./CR-31/2011-12, dated: 23rd December, 2011,

(i) In Part-A, in item (1), after the entries relating to Serial No. 28, the following entries shall be inserted, namely:-

"29. Bitumen (Asphalt) and Cold Tar"

(ii) In Part-C, in item (1), after the entries relating to Serial No. 22, the following entries shall be inserted, namely:-

"23. Bitumen (Asphalt) and Cold Tar"

**Pradeep Singh Kharola**
Commissioner of Commercial Taxes
(Karnataka), Bangalore.

**P.R. 14**

## ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ

**ಸಂಖ್ಯೆ : ಎಸ್‌ಡಿಕೆ/361/ಡಿಟಿಸಿಆರ್/2007–08, ದಿನಾಂಕ: 29–12–2011**

**ಉಪಸ್ಥಿತರು :** ಬಿ.ವಿ.ಹೂವಪ್ಪ ಗೌಡ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

| **ಫಿರ್ಯಾದುದಾರರು:** | **ಆರೋಪಿ/ವಾಹನದ ಮಾಲೀಕರು** |
|---|---|
| ಅಬಕಾರಿ ಉಪ ನಿರೀಕ್ಷಕರು(2)<br>ಸುಳ್ಯ ಜಾರಿ ಮತ್ತು ತನಿಖೆ, ಸುಳ್ಯ | ಶ್ರೀ ಕೆ.ಎಸ್.ಗಣೇಶ್ ಭಟ್, ಬಿನ್:ದಿ:ಕೆ.ಎಸ್. ಭಟ್, ಬೊಮ್ಮಾರು ಮನೆ, ಮರ್ಕಂಜೆ ಗ್ರಾಮ,ಸುಳ್ಯ ತಾಲೂಕು |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:03–03–2008ರಂದು ಸಾಯಂಕಾಲ 6–30 ಗಂಟೆ ಸಮಯಕ್ಕೆ ಫಿರ್ಯಾದುದಾರರಾದ ಅಬಕಾರಿ ಉಪ ನಿರೀಕ್ಷಕರು(2), ಸುಳ್ಯ ವಲಯರವರು ತಮ್ಮ ಸಿಬ್ಬಂಧಿಗಳೊಂದಿಗೆ ಸುಳ್ಯ ತಾಲೂಕು ಮರ್ಕಂಜ ಗ್ರಾಮದ ಬೊಮ್ಮಾರು ಜಂಕ್ಷನ್‌ನ ಬಳಿ ಜೀಪು ಸಂ: KA-21-3435 ರಲ್ಲಿ ಅಕ್ರಮವಾಗಿ ಮದ್ಯ ಸಾಗಾಟ ಮಾಡುತ್ತಿರುವ ಬಗ್ಗೆ ಖಚಿತ ವರ್ತಮಾನದ ಮೇರೆಗೆ, ಸದ್ರಿ ವಾಹನವನ್ನು ಅಬಕಾರಿ ಕಾಯಿದೆ ಕಲಂ 54ರ ಪ್ರಕಾರ ಸರ್ಚ್ ಮೆಮೋ ತಯಾರಿಸಿ ಶೋಧನೆ ಮಾಡಲಾಗಿ ವಾಹನದಲ್ಲಿ 2 ರಟ್ಟಿನ ಪೆಟ್ಟಿಗೆಗಳಲ್ಲಿ 6.120 ಲೀ ಮದ್ಯ ಇರುವುದು ಪತ್ತೆಯಾಗಿ ಕೆಳಕಂಡ ಸೊತ್ತುಗಳನ್ನು ಜಪ್ತುಪಡಿಸಿಕೊಂಡು, ಇದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 14,15 ರಂತೆ ಅಪರಾಧ ಹಾಗೂ 32,34,38ಎ ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಪತ್ತೆಯಾದ ಮದ್ಯದಿಂದ ರಾಸಾಯನಿಕ ವಿಶ್ಲೇಷಣೆಗೆ ಮಾದರಿಗಳನ್ನು ಪ್ರತ್ಯೇಕಿಸಿ , ಅರೋಪಿಯಾದ ಶ್ರೀ.ಕೆ.ಎಸ್ ಗಣೇಶ್

ಭಟ್, ಬಿನ್:ಕೆ.ಎಸ್.ಭಟ್, ಬೊಮ್ಮಾರು ಹೌಸ್, ಮರ್ಕಂಜ ಗ್ರಾಮ, ಸುಳ್ಯ ತಾಲೂಕು ಇವರ ವಿರುದ್ಧ ಅಬಕಾರಿ ಉಪ ನಿರೀಕ್ಷಕರು(2), ಸುಳ್ಯ ಜಾರಿ ಮತ್ತು ತನಿಖೆ ಇವರ ಕ್ರೈಂ ಸಂ: 16/2007–08, ದಿನಾಂಕ: 3–3–2008ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿ ಹಾಗೂ ದಾಖಲಾತಿಗಳನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಜಪ್ತುಪಡಿಸಿ ಕೊಳ್ಳಲಾದ ಸೊತ್ತುಗಳನ್ನು ಸ್ವಾಧೀನದಲ್ಲಿರಿಸಿ ಕೊಳ್ಳಲು ಪ್ರಾಧಿಕಾರದಿಂದ ದಿ: 4–3–2008 ರಂತೆ ಅನುಮತಿ ನೀಡಲಾಗಿರುತ್ತದೆ.

**ವಶಪಡಿಸಿಕೊಂಡ ಸೊತ್ತುಗಳು**

1) ಜೀಪು ಸಂ: KA-21-3435

2) 2 ರಟ್ಟಿನ ಪೆಟ್ಟಿಗೆಗಳಲ್ಲಿ 180 ಎಂಎಲ್‌ನ ಮೈಸೂರು ಲ್ಯಾನ್ಸರ್ ವಿಸ್ಕಿ ಒಟ್ಟು 34 ಬಾಟಲಿಗಳಲ್ಲಿ–6.120 ಲೀ ಮದ್ಯ (2 ಪೆಟ್ಟಿಗೆಗಳಿಂದ ತಲಾ ಒಂದೊಂದರಂತೆ ಒಟ್ಟು 2 ಬಾಟಲಿಗಳನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಮಾದರಿ ತೆಗೆಯಲಾಗಿದೆ)

3) 180 ಮಿಲಿಯ ಮೈಸೂರು ಲ್ಯಾನ್ಸರ್ ವಿಸ್ಕಿಯ ಖಾಲಿ ಬಾಟಲಿಗಳು–4

4) ಮದ್ಯದ ವಾಸನೆ ಇರುವ ಗ್ಲಾಸು–2

5) ನಗದು ರೂಪಾಯಿ 105/–

ವಾಹನದ ಮಾಲೀಕರೆಂದು ಹೇಳಿಕೊಂಡ ಶ್ರೀ. ಕೆ.ಎಸ್ ಗಣೇಶ್ ಭಟ್, ಬಿನ್:ಕೆ.ಎಸ್.ಭಟ್, ಬೊಮ್ಮಾರು ಹೌಸ್, ಮರ್ಕಂಜ ಗ್ರಾಮ, ಸುಳ್ಯ ತಾಲೂಕು ಇವರು ತಮ್ಮ ವಕೀಲರ ಮುಖಾಂತರ ದಿ:10–4–2008 ರಂದು ಈ ಪ್ರಾಧಿಕಾರಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ವಾಹನದ ಮಧ್ಯಂತರ ಬಿಡುಗಡೆಗಾಗಿ ಕೋರಿದ್ದು, ಸದ್ರಿ ಅರ್ಜಿಯನ್ನು ವಿಚಾರಣೆ ನಡೆಸಿ ಪ್ರಾಧಿಕಾರದಿಂದ ದಿ:4–7–2008 ರಂದು ಹೊರಡಿಸಿದ ಮಧ್ಯಂತರ ಆದೇಶದಲ್ಲಿ ವಾಹನದ ಮೌಲ್ಯ ರೂ.55,000/– ಮೊತ್ತಕ್ಕೆ ಸಮಾನವಾದ ಬ್ಯಾಂಕ್ ಗ್ಯಾರೆಂಟಿಯನ್ನು ಒಪ್ಪಿಸುವ ಹಾಗೂ ಇತರೆ ಷರತ್ತುಗಳ ಮೇಲೆ ವಾಹನವನ್ನು ಮಧ್ಯಂತರ ಬಿಡುಗಡೆಗೊಳಿಸಲಾಗಿರುತ್ತದೆ.

ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಇವರ ವರದಿ ಸಂಖ್ಯೆ: ಸುಳ್ಯ /ಸಿಆರ್‌ಎಂ/ 53/07–08 ದಿ:24–6–2008ರೊಂದಿಗೆ ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿ ಮತ್ತು ಮೌಲ್ಯ ಮಾಪನ ವರದಿ ಹಾಗೂ ಮದ್ಯದ ಮಾದರಿಗಳನ್ನು ರಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ ಬಗ್ಗೆ ವಿಶ್ಲೇಷಣಾ ವರದಿ ಪ್ರತಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿ ವಶಪಡಿಸಿಕೊಂಡ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯವನ್ನು ನಾಶಪಡಿಸಲು, ನಗದು ಮೊತ್ತವನ್ನು ಸರ್ಕಾರಕ್ಕೆ ಪಾವತಿಸಲು ಹಾಗೂ ವಾಹನವನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿಗೊಳಿಸಲು ಆದೇಶಕ್ಕಾಗಿ ಶಿಫಾರಸ್ಸು ಮಾಡಿರುತ್ತಾರೆ.

ಮಾದರಿಗಳ ರಾಸಾಯನಿಕ ವಿಶ್ಲೇಷಣಾ ವರದಿಯಲ್ಲಿ ಮದ್ಯದಲ್ಲಿ ಮದ್ಯಸಾರದ ತೀಕ್ಷಣತೆ 42.0% ವಿ/ವಿ ಇರುವುದಾಗಿ ವಿಶ್ಲೇಷಕರು ದೃಢೀಕರಿಸಿರುತ್ತಾರೆ. ತನಿಖಾದಿಕಾರಿ ಗಳ ಶಿಫಾರಸ್ಸು ಮೇರೆಗೆ ವಾಹನದ ಮುಟ್ಟುಗೋಲು ಪ್ರಕ್ರಿಯೆಯನ್ನು ಕಾಯ್ದಿರಿಸಿ ಜಪ್ತುಪಡಿಸಿಕೊಳ್ಳಲಾದ ಮದ್ಯ ಹಾಗೂ ನಗದು ಮೊತ್ತವನ್ನು ದಿ:12–9–2008ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಸರ್ಕಾರದ ಪ್ರಚಲಿತ ನೀತಿ ಅನ್ವಯ ಮದ್ಯವನ್ನು ನಾಶಪಡಿಸಲು ಹಾಗೂ ನಗದು ಮೊತ್ತವನ್ನು ಸರ್ಕಾರಕ್ಕೆ ಪಾವತಿಸಲು ಆದೇಶಿಸಲಾಗಿರುತ್ತದೆ.

ವಶಪಡಿಸಿಕೊಂಡ ವಾಹನದ ಬಿ ರಿಜಿಸ್ಟ್ರಾರ್ ವರದಿಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿ ಗಳು, ಪುತ್ತೂರು ದ.ಕ ಜಿಲ್ಲೆ ಇವರಿಂದ ತನಿಖಾದಿಕಾರಿಗಳ ಮುಖಾಂತರ ಪಡೆಯಲಾಗಿದ್ದು,ಸದ್ರಿ ವರದಿಯಲ್ಲಿ ಶ್ರೀ.ಕೆ.ಎಸ್ ಗಣೇಶ್, ಬಿನ್:ಕೆ.ಎಸ್.ಭಟ್, ಬೊಮ್ಮಾರ್ ಮನೆ, ಮರ್ಕಂಜೆ, ಸುಳ್ಯ ತಾಲೂಕು ಇವರು ದಿ: 17–5–1999 ರಿಂದ ಅನ್ವಯವಾಗುವಂತೆ ವಾಹನದ ಮಾಲೀಕರಾಗಿರುವುದಾಗಿ ದೃಢೀಕೃತವಾಗಿರುವ ಮೇರೆಗೆ ಅವರಿಗೆ ಈ ಪ್ರಾಧಿಕಾರದಿಂದ ದಿ:17–10–2008ರಂದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಬಿ ರಡಿಯಲ್ಲಿ ನೀಡಲಾದ ಕಾರಣ ಕೇಳಿ ನೋಟಿಸನ್ನು ನೊಂದಾಯಿತ ಅಂಚೆ ಮೂಲಕ ರವಾನಿಸಿ ಹಾಗೂ ತನಿಖಾಧಿಕಾರಿಗಳ ಮೂಲಕ ಖುದ್ದಾಗಿ ಜ್ಯಾರಿಗೊಳಿಸಲಾಗಿರುತ್ತದೆ. ವಾಹನದ ಮಾಲೀಕರು ದಿ:5–11–2008ರಂದು ಈ ಪ್ರಾಧಿಕಾರದಿಂದ ನೀಡಲಾದ ಕಾರಣ ಕೇಳಿ ನೋಟಿಸಿಗೆ ಉತ್ತರಿಸುತ್ತಾ, ಪ್ರಕರಣದಲ್ಲಿ ಹೊರಿಸಲಾದ ಆರೋಪವನ್ನು ಅಲ್ಲಗೆಳೆದಿರುತ್ತಾರೆ ಹಾಗೂ ಸದ್ರಿ ವಾಹನವು ತನ್ನ ಕೃಷಿ ಚಟುವಟಿಕೆಗಳಿಗೆ ಅವಶ್ಯಕವಾಗಿರುವುದರಿಂದ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳದೇ ಖಾಯಂ ಆಗಿ ಬಿಡುಗಡೆಗೊಳಿಸಬೇಕಾಗಿ ವಿನಂತಿಸಿರುತ್ತಾರೆ.

ಅಬಕಾರಿ ಕಾಯಿದೆ ಕಲಂ 43 ಎ ರನ್ವಯ ಪ್ರಾಧಿಕಾರದಲ್ಲಿ ಪ್ರಕರಣದ ವಿಚಾರಣೆಯನ್ನು ಪ್ರಾರಂಬಿಸಿ ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ ಅಭಿಯೋಗದ ಪರ ಪ್ರಾ.ಸಾ–1 ರಿಂದ 3ರವರನ್ನು ವಿಚಾರಣೆ ನಡೆಸಿ ನಿಶಾನೆ ಪಿ–1 ರಿಂದ 10ಎ ರವರೆಗೆ ಗುರುತಿಸಿಕೊಳ್ಳಲಾಗಿರುತ್ತದೆ. ಹಾಗೂ ರಕ್ಷಣಾ ಪರ ವಾಹನದ ಮಾಲೀಕರಾದ ಶ್ರೀ.ಕೆ.ಎಸ್. ಗಣೇಶ್ ಭಟ್ ಇವರನ್ನು ಡಿಡಬ್ಲ್ಯೂ–1ರನ್ನಾಗಿ ಹಾಗೂ ಸ್ಥಳೀಯರಾದ ಶ್ರೀ.ದಿನೇಶ್ ಗೌಡ ಇವರನ್ನು ಡಿಡಬ್ಲ್ಯೂ –2 ರನ್ನಾಗಿ ವಿಚಾರಣೆ ನಡೆಸಿ ನಿಶಾನೆ ಡಿ– 1 ರಿಂದ 3 ರವರೆಗಿನ ರಕ್ಷಣಾ ದಾಖಲೆಗಳನ್ನು ಗುರುತಿಸಿಕೊಳ್ಳಲಾಗಿರುತ್ತದೆ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಗದ ಪರ ಸಲ್ಲಿಸಿರುವ ಸಾಕ್ಷ್ಯಾಧ್ಯಾರಗಳಿಂದ ಈ ಕೆಳಗಿನ ವಿವಾಧಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

**ವಿವಾಧಾಂಶಗಳು**

1) ದಿನಾಂಕ:03–03–2008ರಂದು ವಾಹನ ಸಂ: KA-21-3435 ಜೀಪು ಇದರಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಅಪರಾಧಕ್ಕೆ ಬಳಸಲಾಗಿದೆಯೇ?

2) ದಿನಾಂಕ:03–03–2008ರಂದು KA-21-3435 ಜೀಪು ಇದರಲ್ಲಿ ಸಾಗಾಣಿಕೆ ಯಾದ ಸೊತ್ತು ಮದ್ಯ ಎಂಬ ಬಗ್ಗೆ ರಸಾಯನಿಕ ವಿಶ್ಲೇಷಣಾ ವರದಿಯಿಂದ ದೃಡೀಕೃತವಾಗಿದೆಯೇ?

3) ವಶಪಡಿಸಿಕೊಳ್ಳಲಾಗಿರುವ ವಾಹನದ ಮಾಲೀಕರು ತನ್ನ ಗಮನಕ್ಕೆ ಬಾರದೇ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆಯಡಿ ಮದ್ಯ ಸಾಗಾಣಿಕೆಗೆ ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತು ಪಡಿಸಿದ್ದಾರೆಯೇ? ಮತ್ತು ವಾಹನ ಅಕ್ರಮದಲ್ಲಿ ಶಾಮೀಲಾಗದಂತೆ ವಾಹನದ ಮಾಲೀಕರು ಎಲ್ಲಾ ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಂಡಿದ್ದಾರೆಯೇ? ಅಥವಾ ಇಲ್ಲವೇ?

4) ಜಪ್ತು ಪಡಿಸಲಾಗಿರುವ ವಾಹನ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದು ಮತ್ತು ಎರಡನೇ ಅಂಶಗಳನ್ನು ಗುಣಾತ್ಮಕವಾಗಿ, ಮೂರನೇ ಅಂಶವನ್ನು ನಕರಾತ್ಮಕವಾಗಿ ಹಾಗೂ ನಾಲ್ಕನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ–1:–**

ಪ್ರಕರಣದಲ್ಲಿ ಫಿರ್ಯಾಧುದಾರರಾದ ಶ್ರೀ.ಕೃಷ್ಣ ನಾಯ್ಕ್, ಅಬಕಾರಿ ಉಪ ನಿರೀಕ್ಷಕರು,ಸುಳ್ಯ ವಲಯ ಇವರು ದಿ:29–9–2009ರಂದು ಪ್ರಾಧಿಕಾರದ ಮುಂದೆ ಸಾಕ್ಷಿ ನೀಡುತ್ತಾ, ದಿ:3–3–2008 ರಂದು ದೊರೆತ ಖಚಿತ ವರ್ತಮಾನದ ಮೇರೆಗೆ ಉಪ ನಿರೀಕ್ಷಕರು ಗೀತಾ ಮತ್ತು ಸಿಬ್ಬಂಧಿಗಳ ಜೊತೆ ಸುಳ್ಯ ತಾಲೂಕಿನ ಮರ್ಕಂಜ ಗ್ರಾಮದ ಬೊಮ್ಮಾರು ಎಂಬ ಸ್ಥಳದಲ್ಲಿ ಜೀಪು ಸಂ:ಕೆಎ–21–3435 ನ್ನು ಅಡ್ಡಗಟ್ಟಿ ಮಾಹಿತಿಯಂತೆ ಸದ್ರಿ ಜೀಪನ್ನು ಶೋಧಿಸಬೇಕಾಗಿದ್ದು ಶೋಧಿಸಲು ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆಯಲು ಕಾಲವಕಾಶವಿಲ್ಲದ ಕಾರಣ ಅಬಕಾರಿ ಕಾಯಿದೆ ಕಲಂ 54ರಡಿ ಸರ್ಚ್ ಮೆಮೋ ತಯಾರಿಸಿ ಜೀಪನ್ನು ಶೋಧಿಸಿದಾಗ ಜೀಪಿನಲ್ಲಿ 2 ರಟ್ಟಿನ ಪೆಟ್ಟಿಗೆಯಲ್ಲಿ 180 ಎಂಎಲ್‌ನ ಒಟ್ಟು 34 ಬಾಟಲಿಗಳಲ್ಲಿ ಮೈಸೂರು ಲ್ಯಾನರ್ ವಿಸ್ಕಿ ಎಂಬ ಮದ್ಯ, ಅದೇ ಮದ್ಯ ಮಾದರಿಯ 4 ಖಾಲಿ ಬಾಟಲಿಗಳು ಪತ್ತೆಯಾಗಿರುವುದಾಗಿ, ಸದ್ರಿ ಮದ್ಯವನ್ನು ಹೊಂದಲು ಯಾವುದೇ ಪರವಾನಿಗೆ ಇಲ್ಲವೆಂದು ಸದ್ರಿ ವ್ಯಕ್ತಿಯು ತಿಳಿಸಿದ ಮೇರೆಗೆ ಮಹಜರು ತಯಾರಿಸಲು ಸಾಕ್ಷಿಗಾಗಿ ಸ್ಥಳೀಯರನ್ನು ವಿಚಾರಿಸಿದಾಗ ಯಾರೂ ಪಂಚರಾಗಿ ಸಹಕರಿಸಲು ಒಪ್ಪದೇ ಇದ್ದ ಕಾರಣ ಇಲಾಖಾ ಸಾಕ್ಷಿದಾರರನ್ನು ಪಂಚರನ್ನಾಗಿ ಮಾಡಿಕೊಂಡು ಪತ್ತೆಯಾದ ಮದ್ಯದಿಂದ 2 ಬಾಟಲಿ ಗಳನ್ನು ರಸಾಯನಿಕ ಪರೀಕ್ಷೆಗಾಗಿ ಪ್ರತ್ಯೇಕಿಸಿ ಸದ್ರಿ ಬಾಟಲಿಗಳ ಮುಚ್ಚಳ ಹಾಕಿ ಬಟ್ಟೆಯಿಂದ ಸುತ್ತಿ ಮೊಹರು ಕ್ರಮ ಜರುಗಿಸಿ ಗುರುತು ಚೀಟಿ ಅಂಟಿಸಲಾಯಿತು ಎಂದೂ , ನಂತರ ಅರೋಪಿಯನ್ನು ವಾಹನ ಮತ್ತು ಸೊತ್ತುಗಳ ಜೊತೆಗೆ ಕಛೇರಿಗೆ ಬಂದು ಅಬಕಾರಿ ಉಪ ನಿರೀಕ್ಷಕರಾದ ಶ್ರೀಮತಿ.ಗೀತಾ ಇವರು ಪ್ರ.ಮಾ.ವ ತಯಾರಿಸಿ ತನಿಖೆಯನ್ನು ಕೈಗೊಂಡಿರುತ್ತಾರೆ ಎಂದು, ನ್ಯಾಯಾಲಯದ ಮುಂದಿರುವ ವ್ಯಕ್ತಿಯು ತಕ್ಷೀರಿನಲ್ಲಿ ಬಂಧಿಸಲ್ಪಟ್ಟ ಗಣೇಶ್ ಭಟ್ ಅವರಾಗಿರುತ್ತಾರೆ ಎಂದು, ಸ್ವಾಧೀನಪಡಿಸಿದ ಜೀಪು, ಮದ್ಯ ತುಂಬಿದ ಬಾಟಲಿ ಹಾಗೂ ರಸಾಯನಿಕ ವಿಶ್ಲೇಷಣೆಗಾಗಿ ತೆಗೆದ ಬಾಟಲಿಗಳನ್ನು ನೋಡಿದರೆ ಗುರುತಿಸ ಬಹುದಾಗಿರುತ್ತದೆ ಎಂದು ಸಾಕ್ಷ ನೀಡುತ್ತಾ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವಿನಂತಿಸಿಕೊಂಡು ಪ್ರಕರಣದ ಮಹಜರನ್ನು ನಿ.ಪಿ–1 ಎಂದು, ಅದರ ಮೇಲಿನ ಸಹಿಯನ್ನು ನಿ.ಪಿ–1 ಎ ಎಂದು, ಜಪ್ತುಪಟ್ಟಿಯನ್ನು ನಿ.ಪಿ–2 ಎಂದು, ಅದರ ಮೇಲಿನ ಸಹಿಯನ್ನು ನಿ.ಪಿ–2 ಎ ಎಂದು ಗುರುತಿಸಿರುತ್ತಾರೆ.

ರಕ್ಷಣಾ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಖಚಿತ ಮಾಹಿತಿ ಬಂದಿರುವ ವಿಷಯ ಅ.ಉ.ನಿ ಗೀತಾರವರು ಸಂಜೆ 6–00 ಗಂಟೆಗೆ ತಿಳಿಸಿರುತ್ತಾರೆ, ತಕ್ಷೀರು ಸ್ಥಳವು ಕಛೇರಿಯಿಂದ ಸುಮಾರು 10–00 ಕಿ.ಮೀಟರು ದೂರದಲ್ಲಿರುತ್ತದೆ, ತಕ್ಷೀರು ಸ್ಥಳಕ್ಕೆ ಇಬ್ಬರು ಅ.ಉ.ನಿ ಮತ್ತು 3 ಜನ ಅ.ರಕ್ಷಕರೊಂದಿಗೆ ತೆರಳಿರುತ್ತೇವೆ, ಜಪ್ತಾದ ವಾಹನವನ್ನು ತಕ್ಷೀರು ಸ್ಥಳದಲ್ಲಿ ಸುಮಾರು 3 ಮೀಟರು ದೂರದಲ್ಲಿ ನೋಡಿರುತ್ತೇನೆ, ಸ್ಥಳದಲ್ಲಿ ವಾಹನ ಜಪ್ತಿಗಾಗಿ ಸರ್ಚ್ ಮೆಮೋ ತಯಾರಿಸಿರುತ್ತೇನೆ, ಅಪರಾಧ ಸ್ಥಳದಲ್ಲಿ 4 ಮಂದಿ ವ್ಯಕ್ತಿಗಳು ಓಡುತ್ತಿರುವುದನ್ನು ಕಂಡಿದ್ದು,ಅವರ ಚಹರೆ /ಗುರುತುಗಳನ್ನು ಗುರುತಿಸಲು ಸಾದ್ಯವಾಗಿರುವುದಿಲ್ಲ,ಸದ್ರಿ ಓಡಿಹೋದ ವ್ಯಕ್ತಿಗಳನ್ನು ಹಿಡಿಯಲು ಸಿಬ್ಬಂಧಿಯವರು ಬೆನ್ನಟ್ಟಿ ಪ್ರಯತ್ನಿಸಿರುತ್ತಾರೆ, ತಕ್ಷೀರು ಸ್ಥಳದ 100 ಮೀಟರು ವ್ಯಾಪ್ತಿ ಯಲ್ಲಿ ಯಾವುದೇ ವ್ಯವಹಾರಿಕ ಅಂಗಡಿ /ವಾಸದ ಮನೆ ಇರುವುದಿಲ್ಲ, ಅಪರಾಧ ಸ್ಥಳಕ್ಕೆ ಪಂಚರನ್ನು ಕರೆತರಲು ಅ.ಉ.ನಿ ರವರು ಸಿಬ್ಬಂಧಿಯಾದ ಶ್ರೀ.ವಿಜಯಕುಮಾರ್ ಎಂಬವರನ್ನು ಕಳುಹಿಸಿ ಪ್ರಯತ್ನ ಪಟ್ಟಿರುತ್ತಾರೆ, ಸದ್ರಿ ವಿಜಯಕುಮಾರ್ ರವರು ಪರಿಸರದಲ್ಲಿ ಯಾವ ಪಂಚರನ್ನು ಸಂಪರ್ಕಿಸಿದ್ದಾರೆ ಎಂದು ಹೇಳಲು ಸಾದ್ಯವಿಲ್ಲ, ಅಪರಾಧ ಸ್ಥಳದಲ್ಲಿ ಮಹಜರನ್ನು ಶ್ರೀಮತಿ.ಗೀತಾ ಅ.ಉ.ನಿ ರವರು ಬರೆದಿರುತ್ತಾರೆ, ಅಪರಾಧ ಸ್ಥಳದಲ್ಲಿ ಪ್ರಕರಣದ ಅರೋಪಿಯನ್ನು ವಿಚಾರಿಸಲಾಗಿದ್ದು ಅವರ ಹೇಳಿಕೆ ಬರೆದುಕೊಂಡಿದ್ದನ್ನು ನಾನು ಗಮನಿಸಲಿಲ್ಲ, ಆ ದಿವಸ ಮದ್ಯ ವ್ಯವಹಾರದಿಂದ ಎಷ್ಟು ರೂಪಾಯಿ ವ್ಯವಹಾರ ಆಗಿದೆ ಎಂಬುದನ್ನು ಅ.ಉ.ನಿ ವಿಚಾರಿಸಿರುವುದನ್ನು ನಾನು ಗಮನಿಸಲಿಲ್ಲ, ಅರೋಪಿಯ ಅಂಗಜಪ್ತಿ ವಿಜಯಕುಮಾರ್ ಮಾಡಿದ್ದು,ತಾನು ಮಾಡಿರುವುದಿಲ್ಲ, ಓಡಿ ಹೋದ ವ್ಯಕ್ತಿಗಳನ್ನು ಮಹಜರಿನಲ್ಲಿ ಅರೋಪಿಗಳಾಗಿ ಕಾಣಿಸಿರುವುದಿಲ್ಲ, ಆ ದಿನ ಯಾರೂ ತಕ್ಷಿರು ಸ್ಥಳಕ್ಕೆ ಹೋಗಲಿಲ್ಲ, ಯಾವುದೇ ತಕ್ಷೀರು ತಖ್ತೆ ಮಾಡಿರುವುದಿಲ್ಲ. ಸ್ಥಳದಲ್ಲಿಯೇ ಯಾವುದೇ ಮಹಜರು ತಯಾರಿಸಿರುವುದಿಲ್ಲ ಎನ್ನುವುದು ಸರಿಯಲ್ಲ. ತಕ್ಷೀರು ಸ್ಥಳದ ಪಕ್ಕದಲ್ಲಿ ದಿನೇಶ ಗೌಡ ಎಂಬವರ ಭೂಮಿಯಿದ್ದು, ತಕ್ಷಿರು ಸಮಯದಲ್ಲಿ ಅರೋಪಿ ಸದ್ರಿ ದಿನೇಶ ಗೌಡ ಇವರನ್ನು ಸ್ಥಳಕ್ಕೆ ಕರೆಸಿರುವುದಿಲ್ಲ,

ಗಣೇಶ ಭಟ್ ರವರ ವಿರುದ್ಧ ದ್ವೇಷ ಸಾದನೆಗಾಗಿ ಸುಳ್ಳು ತಕ್ಷೀರು ದಾಖಲಿಸಲಾಗಿದೆ ಎನ್ನುವುದು ಸರಿಯಲ್ಲ, ಸ್ವತಂತ್ರ ಸಾಕ್ಷಿದಾರರನ್ನು ಮಹಜರಿಗೆ ಸಾಕ್ಷಿದಾರರನ್ನಾಗಿ ಪಡೆಯಲು ಪ್ರಯತ್ನಿಸಿರಲಿಲ್ಲ ಎನ್ನುವುದು ಸರಿಯಲ್ಲ ಎಂದು ರಕ್ಷಣಾ ವಕೀಲರ ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

**ಪ್ರಾ.ಸಾ–2**

ಪ್ರಕರಣದಲ್ಲಿ ಪಿರ್ಯಾಧುದಾರರ ಜೊತೆಗಿದ್ದು ತನಿಖೆ ಕೈಗೊಂಡ ಬಗ್ಗೆ ಶ್ರೀಮತಿ. ಗೀತಾ, ಅಬಕಾರಿ ನಿರೀಕ್ಷಕರು, ಭಟ್ಕಳ ವಲಯ ಇವರು ದಿ:8–12–2009ರಂದು ಪ್ರಾಧಿಕಾರದ ಮುಂದೆ ಸಾಕ್ಷಿ ನೀಡುತ್ತಾ, ದಿ:3–3–2008ರಂದು ಕಛೇರಿಗೆ ದೂರವಾಣಿ ಮೂಲಕ ಬಂದ ವರ್ತಮಾನದ ಮೇರೆಗೆ ತಾನು, ಪಿಡಬ್ಲ್ಯೂ–2 ಮತ್ತು ಇತರ ಸಿಬ್ಬಂಧಿಗಳು ಸುಳ್ಯ ತಾಲೂಕು ಮರ್ಕಂಜ ಗ್ರಾಮದ ಬೊಮ್ಮಾರು ಜಂಕ್ಷನ್‌ನಲ್ಲಿ ಗಣೇಶ ಭಟ್ ಎಂಬವರ ಜೀಪು ನಿಂತಿದ್ದು ಅದರ ಹತ್ತಿರ ಹೋಗಲಾಗಿ ಅಲ್ಲಿ ನೆರೆದಿದ್ದ 3–4 ಜನ ಸಮವಸ್ತ್ರದಲ್ಲಿದ್ದ ಸಿಬ್ಬಂಧಿಗಳನ್ನು ಕಂಡು ಓಡಿಹೋಗಿದ್ದು ಜೀಪಿನ ಒಳಗಡೆ ಇದ್ದ ಇನ್ನೊಬ್ಬ ಓಡಲು ಪ್ರಯತ್ನ ಪಟ್ಟರೂ ಅತನನ್ನು ಸುತ್ತುವರಿದು ವಿಚಾರಿಸಲಾಗಿ ಆತನ ಹೆಸರು,ವಿಳಾಸ ಕೇಳಲಾಗಿ ಮಾಹಿತಿಯಲ್ಲಿ ಪಡೆಯಲಾದ ಗಣೇಶ್ ಭಟ್ ಬಿನ್:ಕೆ.ಎಸ್.ಭಟ್,ಮರ್ಕಂಜ ಎಂಬ ವ್ಯಕ್ತಿಯೇ ಆತನಾಗಿರುವುದ ರಿಂದ ಸಂಶಯ ಬಲಗೊಂಡು ವಾಹನವನ್ನು ಶೋಧಿಸಲು ನ್ಯಾಯಾಲಯದಿಂದ ಸರ್ಚ್ ವಾರೆಂಟ್ ತರಲು ಕಾಲವಕಾಶವಿಲ್ಲದೆ ಇರುವುದನ್ನು ನಮೂದಿಸಿ ಸರ್ಚ್ ವಾರೆಂಟ್ ಮೆಮೋವನ್ನು ತಯಾರಿಸಿ ಜೀಪನ್ನು ಶೋಧಿಸಲಾಗಿ 2 ರಟ್ಟಿನ ಪೆಟ್ಟಿಗೆಗಳಲ್ಲಿ ತಲಾ 180 ಎಂ ಎಲ್ ನ ಒಟ್ಟು 34 ಬಾಟಲಿಗಳಲ್ಲಿ ಮದ್ಯ ಇದ್ದು ಪತ್ತೆಯಾದ ವ್ಯಕ್ತಿ ಗಣೇಶ್ ಭಟ್ ಸದ್ರಿ ಮದ್ಯವನ್ನು ಜೀಪಿನಲ್ಲಿ ಹೊಂದಲು ಯಾವುದೇ ಪರವಾನಿಗೆ ಇಲ್ಲವೆಂದು ತಿಳಿಸಿದನು. ಸದ್ರಿ ಜೀಪಿನ ಸಂ: ಕೆ ಎ–21–3435 ಆಗಿದ್ದು ಗಣೇಶ್ ಭಟರೇ ಸದ್ರಿ ಜೀಪಿನ ಮಾಲಕ ಚಾಲಕ ಎಂದು ಕಂಡುಬಂದು ಜೀಪಿನಲ್ಲಿ ಇದ್ದ ಮದ್ಯ ಅಕ್ರಮ ಮದ್ಯವೆಂದು ಖಚಿತಪಟ್ಟು ದೊರೆತ 2 ರಟ್ಟಿನ ಪೆಟ್ಟಿಗೆಗಳಿಂದ ತಲಾ ಒಂದೊಂದು ಬಾಟಲಿ ಮದ್ಯವನ್ನು ಮಾದರಿಗೆ ಪ್ರತ್ಯೇಕಿಸಿ ಮಾದರಿ ಸೀಲು ತಯಾರಿಸಿ ಮೊಹರು ಕ್ರಮ ಜರುಗಿಸಲಾಯಿತು, ಸ್ಥಳೀಯ ಪಂಚರು ದೊರಕದ ಕಾರಣ ಇಲಾಖಾ ಸಿಬ್ಬಂಧಿಗಳನ್ನೇ ಪಂಚರನ್ನಾಗಿ ಹೆಸರಿಸಿ ಆ ದಿನ ಮದ್ಯ ಮಾರಾಟದಿಂದ ಅರೋಪಿ ಹೊಂದಿದ್ದ ರೂ.105/– ನ್ನು ಹಾಗೂ ಜೀಪು ಸಹಿತ ಎಲ್ಲಾ ಮದ್ಯದ ಬಾಟಲಿಗಳನ್ನು ಮಹಜರು ಮುಖೇನಾ ಸ್ಥಳದಲ್ಲಿ ಸ್ವಾಧೀನಪಡಿಲಾಗಿದ್ದು ಸದ್ರಿ ಮಹಜರಿಗೆ ಸಹಿ ಮಾಡಿರುತ್ತೇನೆ ಎಂದು ಮಹಜರು ಪ್ರತಿಯನ್ನು ನೋಡಿ ಅದನ್ನು ನಿ.ಪಿ.–1 ಈಗಾಗಲೇ ಗುರುತಿಸಲಾಗಿದ್ದು ಅದರ ಮೇಲಿನ ಸಹಿಯನ್ನು ನಿ.ಪಿ–1 ಬಿ ಎಂದು ಗುರುತಿಸಿ ನಂತರ ಅರೋಪಿ ಸೊತ್ತುಗಳೊಂದಿಗೆ ಕಛೇರಿಗೆ ಬಂದು ಅರೋಪಿಯ ವಿರುದ್ಧ ಕ್ರೈಂ ಸಂ:16/2007–08 ರಂತೆ ಪ್ರಕರಣ ದಾಖಲಿಸಿದ್ದು ಪ್ರ.ಮಾ.ವ ನಿ.ಪಿ–2 ಆಗಿದ್ದು, ಅದರ ಮೇಲಿನ ಸಹಿಯನ್ನು ನಿ.ಪಿ.2 ಬಿ ಎಂದು, ಪ್ರ.ಮಾ.ವ ವರದಿಯನ್ನು ನಿ.ಪಿ.–3 ಗುರುತಿಸ ಲಾಯಿತು. ಅರೋಪಿಯನ್ನು ದಸ್ತಗಿರಿ ಮಾಡಿ ನಂತರ ಮಾನ್ಯ ನ್ಯಾಯಾಲಯಕ್ಕೆ ಹಾಜರುಪಡಿಸಲಾಗಿರುತ್ತದೆ. ಜಪ್ತುಪಡಿಸಿಕೊಳ್ಳಲಾದ ವಸ್ತುಗಳ ಬಗ್ಗೆ ಅಧಿಕೃತ ಅದಿಕಾರಿಗಳಿಗೆ ವರದಿ ಸಲ್ಲಿಸಲಾಗಿರುತ್ತದೆ. ಅರೋಪಿ ದಸ್ತಗಿರಿ ಜರುಗಿಸಿ ನಂತರ ಮಾನ್ಯ ನ್ಯಾಯಾಲಯಕ್ಕೆ ಹಾಜರುಪಡಿಸಲಾಗಿರುತ್ತದೆ. ಸ್ಥಳದಲ್ಲಿಯೇ ತಯಾರಿಸಿದ ಕಲಂ 54 ದಾಖಲೆ ಯನ್ನು ನಿ.ಪಿ.–4 ಎಂದು,ಅದರ ಮೇಲಿನ ತನ್ನ ಸಹಿಯನ್ನು ನಿ.ಪಿ.–4 ಎ ಎಂದು ಗುರುತಿಸಲಾಯಿತು. ದಿ:6–3–2008ರಂದು ಕಛೇರಿ ಸಿಬ್ಬಂಧಿ ರಾಮಣ್ಣ ಗೌಡ, ಅ.ರ ಇವರ ಮೂಲಕ ಮಾದರಿಗಳನ್ನು ರಸಾಯನಿಕ ವಿಶ್ಲೇಷಣೆಗೆ ಕಳುಹಿಸಿಕೊಡಲಾಗಿದೆ ಎಂದು ಅದನ್ನು ನಿ.ಪಿ.–5 ಎಂದು ಗುರುತಿಸಲಾಯಿತು. ದಿ:11–4–2008ರಂದು ರಸಾಯನಿಕ ವಿಶ್ಲೇಷಣೆಯನ್ನು ಪಡೆಯಲಾಗಿದ್ದು, ಸದ್ರಿ ವರದಿಯಲ್ಲಿ ಮದ್ಯಸಾರದ ಪ್ರಮಾಣ ಶೇಖಡಾ 42 ಇದೆ ಎಂದು ದೃಡಪಟ್ಟಿದ್ದು, ವರದಿಯನ್ನು ನೋಡಿ ನಿ.ಪಿ.–6 ಎಂದು ಗುರುತಿಸ ಲಾಯಿತು. ವಾಹನದ ಮಾಲೀಕತ್ವದ ಬಗ್ಗೆ ಅರ್.ಟಿ.ಓ ಪುತ್ತೂರು ರವರಿಂದ ಬಿ ವರದಿಯನ್ನು ಪಡೆಯಲಾಗಿದ್ದು ಅದನ್ನು ನಿ.ಪಿ.–7 ಎಂದು ಗುರುತಿಸಲಾಯಿತು. ಅರೋಪಿಯೇ ವಾಹನದ ಮಾಲಕನೆಂದು ಖಚಿತವಾಗಿರುವುದರಿಂದ ಪ್ರಕರಣದ ತನಿಖೆ ಪೂರ್ಣಗೊಳಿಸಿ ದಿ:24–12–2008ರಂದು ಅರೋಪಿಯ ವಿರುದ್ಧ ಮಾನ್ಯ ನ್ಯಾಯಾಲಯಕ್ಕೆ ಅರೋಪಣಾ ಪಟ್ಟಿ ಸಲ್ಲಿಸಿರುತ್ತೇನೆ ಎಂದು ಮಾದರಿ ಮೊಹರು ಪ್ರತಿಯನ್ನು ನಿ.ಪಿ.–8 ಎಂದು, ಅದರ ಮೇಲಿನ ಸಹಿಯನ್ನು ನಿ.ಪಿ.–8 ಎ ಎಂದು , ಜಪ್ತುಪಟ್ಟಿ ನಿ.ಪಿ.2 ಅಗಿದ್ದು, ಅದರ ಮೇಲಿನ ಸಹಿಯನ್ನು ನಿ.ಪಿ.2 ಬಿ ಎಂದು ಗುರುತಿಸಲಾಯಿತು. ಅಪಾದನೆ ಪ್ರತಿಯನ್ನು ನಿ.ಪಿ.–9, ಅದರ ಮೇಲಿನ ಸಹಿಯನ್ನು ನಿ.ಪಿ–9 ಎ ಎಂದು ಗುರುತಿಸಲಾಯಿತು. ನಾವು ದಸ್ತಗಿರಿ ಮಾಡಿದ ಅರೋಪಿ, ಸ್ವಾಧೀನ ಪಡಿಸಿದ ಜೀಪು ಮತ್ತು ಮದ್ಯ ನೋಡಿದರೆ ಈಗ ಗುರುತಿಸಬಲ್ಲೆ, ಸ್ವಾಧೀನ ಪಡಿಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ನಾನು ವಿನಂತಿಸಿ ಕೊಳ್ಳುತ್ತೇನೆ. ತಾನು ಅಧಿಕೃತ ಅಧಿಕಾರಿಗಳಿಗೆ ಸಲ್ಲಿಸಿದ ತನಿಖಾ ವರದಿ ನಿ.ಪಿ–10 ಎಂದು ಅದರ ಮೇಲಿನ ಸಹಿಯನ್ನು ನಿ.ಪಿ–10 ಎ ಎಂದು ಗುರುತಿಸಿರುತ್ತಾರೆ.

ರಕ್ಷಣಾ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಸದ್ರಿ ತಕ್ಷೀರು ದಿನದಂದು ನನಗೆ ಬಂದ ಖಚಿತ ವರ್ತಮಾನ ಬಗ್ಗೆ ನಮ್ಮ ಕಛೇರಿಯಲ್ಲಿ ದಾಖಲು ಮಾಡಿದ್ದೇವೆ. ಈ ತಕ್ಷೀರು ಸ್ಥಳ ನನ್ನ ಕಛೇರಿಯಿಂದ 10–12 ಕಿ.ಮಿ ದೂರದಲ್ಲಿದೆ. ತಕ್ಷೀರು ಸ್ಥಳವು ಬೊಮ್ಮಾರು ಜಂಕ್ಷನ್‌ನಿಂದ ಸುಮಾರು 100 ಮೀಟರು ದೂರದಲ್ಲಿದೆ, ಜಂಕ್ಷನ್ ನಲ್ಲಿ ಸುಮಾರು 4–5 ಅಂಗಡಿಗಳಿದ್ದು ಬಸ್ ನಿಲ್ದಾಣ ಇರುವುದಿಲ್ಲ, ಬೊಮ್ಮಾರು ಜಂಕ್ಷನ್ ನಿಂದ ಬರುವ ಆ ರಸ್ತೆ ಎಲ್ಲಿಗೆ ಹೋಗುತ್ತದೆ ಎಂದು ಹೇಳಲು ಸಾದ್ಯವಿಲ್ಲ, ಈ ಕೇಸಿನ ತನಿಖಾಧಿಕಾರಿ ಕೂಡಾ ನಾನಾಗಿರುತ್ತೇನೆ, ಈ ಪ್ರಕರಣದಲ್ಲಿ ಒರ್ವ ವ್ಯಕ್ತಿಯ ವಿರುದ್ಧ ದೋಷಾರೋಪಣಾ ಪಟ್ಟಿ ಸಲ್ಲಿಸಿರುತ್ತೇನೆ, ತಕ್ಷೀರು ಸ್ಥಳಕ್ಕೆ ಹೋದಾಗ ಜೀಪಿನಿಂದ ಇಳಿದು ಯಾರೂ ಓಡಿ ಹೋಗಿರುವುದಿಲ್ಲ, ತಾನು ಆ ಸಂಧರ್ಭ ಅರೋಪಿಗಳ ಚಹರೆಯನ್ನು ಮಹಜರಿನಲ್ಲಿ ನಮೂದಿಸಿರುವುದಿಲ್ಲ, ಈ ತಕ್ಷೀರು ಬಗ್ಗೆ ಸುಮಾರು 6 ಗಂಟೆಗೆ ವರ್ತಮಾನ ಬಂದಿದ್ದು, ನಾನು ಸಾಯಂಕಾಲ 6–30 ಗಂಟೆಗೆ ತಕ್ಷೀರು ಸ್ಥಳ ತಲುಪಿರುತ್ತೇನೆ, ತಾನು ಸ್ಥಳಕ್ಕೆ ಪಂಚರನ್ನು ಕರೆದುಕೊಂಡು ಹೋಗಿಲ್ಲ–ತಕ್ಷೀರು ಸ್ಥಳಕ್ಕೆ ಪಂಚರ ಸಮಕ್ಷಮ ಹಾಜರಾಗಿರುವುದಿಲ್ಲ ನಿ.ಪಿ.–4 ಶೋಧನೆ ಸಮುಚಿತ ಆಧಾರ ನನ್ನ ಸಿಬ್ಬಂಧಿಯ ಕೈ ಬರಹದಲ್ಲಿದೆ, ನಿ.ಪಿ.–1 ಮಹಜರು ನನ್ನ ಸ್ವಹಸ್ತಾಕ್ಷರದಲ್ಲಿದೆ, ನನಗೆ ಮಾಹಿತಿ ಬಂದಾಗ ಅರೋಪಿಯ ಹೆಸರು ಕೂಡ ಗೊತ್ತಾಗಿರುತ್ತದೆ, ತಕ್ಷೀರು ಸ್ಥಳದಲ್ಲಿ ಸ್ವ–ಸಾಕ್ಷಿಗಳನ್ನು ಪಡೆಯಲು ಪ್ರಯತ್ನ ಪಟ್ಟಿರುತ್ತೇನೆ, ತಕ್ಷೀರು ಸ್ಥಳದಿಂದ ಒರ್ವ ಅಬಕಾರಿ ರಕ್ಷಕನನ್ನು ಸ್ವ ಸಾಕ್ಷಿಗಳನ್ನು ಬರಮಾಡಲು ಕಳುಹಿಸಿರುತ್ತೇನೆ, ತಕ್ಷೀರು ಸ್ಥಳದ ಪಕ್ಕದಲ್ಲಿ ವಾಸದ

ಮನೆಗಳು ಇರುವುದಿಲ್ಲ, ಮಹಜರಿನಲ್ಲಿ ನಮೂದಿಸಿದ ದಿನೇಶ ಗೌಡ ಎಂಬವರ ಜಾಗದ ಬಗ್ಗೆ ಸಿಬ್ಬಂಧಿಯವರಿಂದ ಮಾಹಿತಿ ಪಡೆದಿರುತ್ತೇನೆ, ನಾನು ಮಹಜರಿನಲ್ಲಿ ಪ್ರಸ್ತಾವಿಸಿದ ದಿನೇಶ ಗೌಡನನ್ನು ಸ್ಥಳಕ್ಕೆ ಕರೆಸಿ ಹೇಳಿಕೆ ಪಡೆದಿಲ್ಲ, ತಕ್ಷೀರು ಸ್ಥಳದಲ್ಲಿ ನಾನು ಅರೋಪಿಯ ಹೇಳಿಕೆ ಪಡೆದು ಕೊಂಡಿಲ್ಲ, ಈ ಪ್ರಕರಣ ದಾಖಲಾದ ನಂತರ ನಾನು ಅರೋಪಿಯ ಇತರ ವ್ಯವಹಾರ ಬಗ್ಗೆ ಮಾಹಿತಿ ಕಲೆ ಹಾಕಿಲ್ಲ, ಅರೋಪಿಯ ಮನೆಗೆ ನಾನು ದಾಳಿ ಮಾಡಿಲ್ಲ, ನಾನು ಸ್ಥಳದಿಂದ 6–120 ಲೀ ಮದ್ಯವನ್ನು ವಶಪಡಿಸಿಕೊಂಡಿರುತ್ತೇನೆ, ಈ ಮದ್ಯದ ಬಾಟಲಿಗಳ ಮೂಲಪತ್ರವನ್ನು ನಾನು ತನಿಖೆ ಮಾಡಿಲ್ಲ, ಅರೋಪಿಯ ಹೇಳಿಕೆಯನ್ನು ನಾನು ಈ ಪ್ರಾದಿಕಾರದ ಮುಂದೆ ಹಾಜರುಪಡಿಸಿದ್ದೆನೋ ಇಲ್ಲವೋ ಎಂಬ ಬಗ್ಗೆ ನನಗೆ ಹೇಳಲು ಸಾಧ್ಯವಿಲ್ಲ, ನಾನು ಜೂನ್ 24, 2008ರಂದು ಈ ಪ್ರಕರಣದಲ್ಲಿ ಅಮಾನತುಪಡಿಸಿದ ವಾಹನ ಮುಟ್ಟುಗೋಲು ಹಾಕಿಕೊಳ್ಳಲು ಅಧಿಕೃತ ಅದಿಕಾರಿಗಳಿಗೆ ವರದಿ ಸಲ್ಲಿಸಿರುತ್ತೇನೆ, ಮೇಲೆ ಹೇಳಿದ ವರದಿಯೊಂದಿಗೆ ನಾನು ಅರೋಪಿಯ ಹೇಳಿಕೆ ಲಗತ್ತಿಸಿಲ್ಲ, ತಕ್ಷೀರು ಸ್ಥಳದಲ್ಲಿ ಅರೋಪಿ ನನ್ನನ್ನು ನೋಡಿ ಓಡಲು ಪ್ರಯತ್ನಿಸಿದ, ಅರೋಪಿ ಜೀಪಿನ ಹತ್ತಿರವೇ ಇದ್ದು ನನ್ನ ಸಿಬ್ಬಂಧಿಗಳು ಆತ ಓಡಲು ಪ್ರಯತ್ನಿಸಿದಾಗ ಹಿಡಿದಿರುತ್ತಾರೆ. ಆ ದಿವಸ ತಕ್ಷೀರು ಸ್ಥಳಕ್ಕೆ ಹೋದದ್ದೆ ಇಲ್ಲ ಎಂದರೆ ಸರಿಯಲ್ಲ, ಕಛೇರಿಯಲ್ಲೇ ಕುಳಿತು ನಿ.ಪಿ–2, ನಿಪಿ–4 ತಯಾರಿಸಿದ್ದೆ ಅಂದರೆ ಸರಿಯಲ್ಲ, ತಕ್ಷೀರು ಸ್ಥಳಕ್ಕೆ ಹೋಗದ ಕಾರಣ ತಯಾರಿಸಲಾದ ನಿ.ಪಿ–4 ರಲ್ಲಿ ಪಂಚರ ಸಮಕ್ಷಮ ಶೋಧನೆ ಮಾಡಿದಾಗಿ ನಮೂದಿಸಿದಾಗಿದೆ ಅಂದರೆ ಸರಿಯಲ್ಲ,ತಕ್ಷೀರು ಸ್ಥಳದಲ್ಲಿ ಮೇಲೆ ಹೇಳಿದ ವಾಹನ ಇರಲಿಲ್ಲವೆಂದು ಹೇಳಿದರೆ ಸರಿಯಲ್ಲ, ಅರೋಪಿ/ವಾಹನದ ಮಾಲೀಕರು ಸುಳ್ಯದಲ್ಲಿ ಗೌರವಾನ್ವಿತ ವ್ಯಕ್ತಿಯಾಗಿದ್ದು ಪುರೋಹಿತ ಸಮಾಜಕ್ಕೆ ಸೇರಿದಾಗಿದ್ದು ಅಂದರೆ ನನಗೆ ಗೊತ್ತಿರುವುದಿಲ್ಲ, ಅದರೆ ಅವರ ಬ್ರಾಹ್ಮಣ ಸಮಾಜಕ್ಕೆ ಸೇರಿದಾವರಾಗಿರುತ್ತಾರೆ ಅಂದರೆ ಸರಿ, ಸುಳ್ಯದಿಂದ ಮರ್ಕಂಜಕ್ಕೆ 10–15 ಕಿ.ಮಿ ದೂರವಿದೆ, ನಾನು ಅಮಾನತುಪಡಿಸಿದ ಮದ್ಯ ರಾ.ವರದಿ ಪ್ರಕಾರ ನಕಲಿಯಲ್ಲ, ಅರೋಪಿಯು ಆ ಸ್ಥಳದಲ್ಲಿ ನಾವು ಈ ಪ್ರಕರಣ ಪತ್ತೆಹಚ್ಚುವ ಸುಮಾರು 5–6 ತಿಂಗಳಿನಿಂದ ವ್ಯಾಪಾರ ಮಾಡುತ್ತಿದ್ದರು, ತಕ್ಷೀರು ಸ್ಥಳದಲ್ಲಿ ನಾವು ಸುಮಾರು ತಿಂಗಳಿಗೆ 2 ಸಲ ಗಸ್ತು ಕಾರ್ಯ ನಡೆಸುತ್ತೇವೆ, ತಕ್ಷೀರು ಪತ್ತೆ ಹಚ್ಚುವ ಮೊದಲು ಆ ರಸ್ತೆಯಲ್ಲಿ ಎಷ್ಟು ಸಲ ಹೋಗಿದೆ ಎಂಬ ಬಗ್ಗೆ ನನಗೆ ಈಗ ನೆನಪಿಲ್ಲ, ಈ ಪ್ರಕರಣ ಪತ್ತೆ ಹಚ್ಚುವ ಮೊದಲು ಆ ರಸ್ತೆಯಲ್ಲಿ ಅಬಕಾರಿ ಅಕ್ರಮ ನಡೆಯುತ್ತಿತ್ತೋ ಎಂಬ ಬಗ್ಗೆ ನಾನು ಗಮನ ಹರಿಸಿದ್ದೆ ಆದರೆ ಯಾವ ತಕ್ಷಿರು ದಾಖಲಾಗಿರಲಿಲ್ಲ, ಅರೋಪಿಯು ಅಬಕಾರಿ ತಕ್ಷೀರಿನಲ್ಲಿ ತೊಡಗಿಕೊಂಡ ಬಗ್ಗೆ ನನಗೆ 6 ತಿಂಗಳಿನಿಂದ ಮಾಹಿತಿ ಇತ್ತು, ಅರೋಪಿ ತನ್ನ ಜೀಪಿನಲ್ಲಿ ಬೊಮ್ಮಾರು ಪರಿಸರದಲ್ಲಿ ಬೇರೆ ಕಡೆಗಳಲ್ಲಿ ಮದ್ಯ ಮಾರಾಟ ಮಾಡುತ್ತಿದ್ದಾರೆಂದು ನನಗೆ ಮಾಹಿತಿ ಇತ್ತು, ಅರೋಪಿಯು ಈ ತಕ್ಷಿರಿನ ಮೊದಲು ಅಲ್ಲೆ ಸುತ್ತುಮುತ್ತ 6 ತಿಂಗಳಿನಿಂದ ಜೀಪಿನಲ್ಲಿ ಮದ್ಯ ಮಾರಾಟ ಮಾಡಿದ ಆತನನ್ನು ವಿಚಾರಿಸಿದಾಗ ಆತ ಒಪ್ಪಿಕೊಳ್ಳಲಿಲ್ಲ, ಅರೋಪಿ ಒಪ್ಪಿಕೊಂಡ ಹಾಗೆ ನಾನು ಬೊಮ್ಮಾರು ಪರಿಸರಕ್ಕೆ ಭೇಟಿ ನೀಡಿ ಜನರನ್ನು ವಿಚಾರಿಸಿರುತ್ತೇನೆ, ಹಾಗೆ ಜನರು ಕೂಡಾ ಆ ಬಗ್ಗೆ ನನಗೆ ಹೇಳಿರುತ್ತಾರೆ, ಆದರೆ ಸದ್ರಿ ಜನರ ಹೇಳಿಕೆಯನ್ನು ನಾನು ಮಾಡಿರುವುದಿಲ್ಲ, ಅರೋಪಿ/ವಾಹನದ ಮಾಲೀಕರಾದ ಗಣೇಶ ಭಟ್ ಇವರ ವಿರೋಧಿಗಳ ಕುಮ್ಮಕ್ಕಿನಿಂದಾಗಿ ನಾನೂ ಸೇರಿಕೊಂಡು ವಾಹನ ಮಾಲೀಕರ ಮಾನ ಹರಾಜು ಮಾಡುವುದಕೋಸ್ಕರ ಈ ರೀತಿಯಾಗಿ ಅಬಕಾರಿ ತಕ್ಷೀರಿನಲ್ಲಿ ಬಾಗಿಯಾಗಿರುವುದಿಲ್ಲ ಅಂದರೆ ಸರಿಯಲ್ಲ, ನಾನು ಹೇಳಿದ ರೀತಿಯಲ್ಲಿ ವಾಹನದ ಮಾಲೀಕರು ಅಬಕಾರಿ ತಕ್ಷೀರಿನಲ್ಲಿ ಭಾಗಿಯಾಗಿರುವುದಿಲ್ಲ ಅದರೆ ಸರಿಯಲ್ಲ, ತಕ್ಷೀರು ಸ್ಥಳದಿಂದ ಓಡಿ ಹೋದ 4 ಜನರನ್ನು ಪತ್ತೆಹಚ್ಚಲು ನಾನು ಕ್ರಮ ಕೈಗೊಂಡಿಲ್ಲ ಯಾಕೆಂದರೆ ಅವರ ಗುರುತು ಚಹರೆ ಇತ್ಯಾದಿಗಳ ಬಗ್ಗೆ ನಮ್ಮಲ್ಲಿ ಮಾಹಿತಿ ಇರಲಿಲ್ಲ, ಓಡಿ ಹೋದ ವ್ಯಕ್ತಿಗಳ ಬಗ್ಗೆ ನಾನು ಅರೋಪಿಯನ್ನು ವಿಚಾರಿಸಿರುತ್ತೇನೆ, ಮೇಲೆ ಹೇಳಿದಂತೆ ತಪ್ಪಿಸಿಕೊಂಡ ವ್ಯಕ್ತಿಗಳು ಎಷ್ಟು ಸಮಯದಿಂದ ಅರೋಪಿಯಲ್ಲಿಗೆ ಮದ್ಯ ಸೇವನೆಗೆ ಬರುತ್ತಿದ್ದರು ಎಂದು ನಾನು ಮಾಹಿತಿ ಕಲೆ ಹಾಕಿಲ್ಲ, ಪರಾರಿಯಾದ ಅರೋಪಿಗಳ ಬಗ್ಗೆ ಪ್ರ.ಮಾ.ವ ದಲ್ಲಿ ನಮೂದಿಸಿಲ್ಲ ಎಂದು ಪಾಟೀ ಸವಾಲಿಗೆ ಉತ್ತರಿಸಿತ್ತಾರೆ.

**ಮರುವಿಚಾರಣೆ: ಎಡಿಪಿ ರವರಿಂದ:–**

ಶೋಧನೆ ಸಮುಚಿತ ಅಧಾರದಲ್ಲಿ ನಾನು ಪಂಚರ ಸಮಕ್ಷಮ ಹಾಜರಾಗಿ ಎಂಬ ಬಗ್ಗೆ ನಾನು ಸಿಬ್ಬಂಧಿಗಳನ್ನು ಪ್ರಸ್ತಾಪಿಸಿರುತ್ತೇನೆ.

ರಕ್ಷಣಾ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಸಿಬ್ಬಂದಿಯವರು ಸ್ವತಂತ್ರ ಸಾಕ್ಷಿಗಳಾಗಿರುವುದಿಲ್ಲ, ನಿ.ಪಿ.4 ರಲ್ಲಿ ಸಿಬ್ಬಂಧಿ ಸಹಿತ ಸದ್ರಿ ಸ್ಥಳಕ್ಕೆ ಪಂಚರ ಅಂದರೆ ಸಿಬ್ಬಂಧಿ ಯವರು ಮಾತ್ರ ಎಂದು ಅರ್ಥ , ಆದರೆ ಸಿಬ್ಬಂಧಿ ಸಹಿತ ಸದ್ರಿ ಸ್ಥಳಕ್ಕೆ ಪಂಚರ ಸಮಕ್ಷಮ ಅಂದರೆ ಸಿಬ್ಬಂಧಿ ಬೇರೆ, ಪಂಚರು ಬೇರೆ ಎಂಬ ಅರ್ಥ ಎಂದರೆ ಸರಿಯಲ್ಲ, ನಿಪಿ–4 ನ್ನು ಕೈಯಿಂದ ಬರೆದಿಲ್ಲ, ಅದು ಪ್ರಿಂಟೆಡ್ ಫಾರಂ ಆಗಿರುತ್ತದೆ, ಸಿ.ಪಿ–4 ನ್ನು ಕಚೇರಿಯಲ್ಲಿ ನಮಗೆ ಬೇಕಾದಂತೆ ಬರೆದಿರುತ್ತೇವೆಂದರೆ ಸರಿಯಲ್ಲ, ನಿಪಿ–4 ರಲ್ಲಿ ನಮಗೆ ಈ ತಕ್ಷೀರಿನ ಬಗ್ಗೆ ಎಷ್ಟು ಹೊತ್ತಿಗೆ ಮಾಹಿತಿ ಬಂದಿರುತ್ತದೆ ಎಂದು ನನಗೆ ಗೊತ್ತಿರುತ್ತದೆ, ಅದರೆ ಸದ್ರಿ ಮಾಹಿತಿ ಬೆಳಿಗ್ಗೆ ಬಂದಿರುತ್ತದೊ,ಸಂಜೆ ಬಂದಿರುತ್ತದೋ ಎಂಬ ಬಗ್ಗೆ ಬರೆದಿರುವುದಿಲ್ಲ ಎಂದು ಪಾಟೀ ಸವಾಲಿಗೆ ಉತ್ತರಿಸುತ್ತಾರೆ.

**ಪ್ರಾ.ಸಾ–3**

ಪ್ರಕರಣದಲ್ಲಿ ಮಾದರಿಗಳನ್ನು ಕೊಂಡೊಯ್ಯದ್ದ ಶ್ರೀ.ರಾಮಣ್ಣ ಗೌಡ, ಅ.ರ ,ಸುಳ್ಯ ವಲಯ ಇವರು ದಿ:8–12–2009ರಂದು ಪ್ರಾದಿಕಾರದ ಮುಂದೆ ಸಾಕ್ಷಿ ನೀಡುತ್ತಾ , ತಾನು ಕಳೆದ 5 ವರ್ಷಗಳಿಂದ ಸುಳ್ಯ ವಲಯದಲ್ಲಿ ಅ.ರ (ನಿ) ಕೆಲಸ ಮಾಡುತ್ತಿದ್ದೇನೆ, ಈ ಕೇಸಿಗೆ ಸಂಬಂಧಪಟ್ಟ ಮಾದರಿ ಬಾಟಲಿಗಳನ್ನು ದಿ:6–3–2008ರಂದು ಪಿಡಬ್ಲ್ಯೂ–2ರವರು ಪತ್ರದ ಜೊತೆ ನನಗೆ ಒಪ್ಪಿಸಿದ್ದನ್ನು ನಾನು ಮಂಗಳೂರು ರಸಾಯನಿಕ ವಿಶ್ಲೇಷಣಾ ಕಛೇರಿಗೆ ಒಪ್ಪಿಸಿದ್ದು ತದನಂತರ ದಿ:11–4–2008 ರಂದು ಸದ್ರಿ ಪರೀಕ್ಷೆಗೆ ಒಳಪಟ್ಟ ಮಾದರಿ ಬಾಟಲಿಗಳನ್ನು ವರದಿ ಜೊತೆ ರಾ.ವಿ ಕಚೇರಿಯಿಂದ ಪಿಡಬ್ಲ್ಯೂ –2 ಇವರಿಗೆ ಒಪ್ಪಿಸಿರುತ್ತೇನೆ, ರಾಸಾಯನಿಕ ಪರೀಕ್ಷೆಗೆ ಒಯ್ಯುವಾಗ ಹಾಗೂ ರಾ.ಪರೀಕ್ಷೆಯಿಂದ ವಾಪಾಸು ಕೊಂಡೊಯ್ಯುವಾಗ ಮಾದರಿ ಬಾಟಲಿಗಳಲ್ಲಿದ್ದ

ಮೊಹರುಗಳು ಸುಸ್ಥಿತಿಯಲ್ಲಿದ್ದವು, ಸಿ.ಪಿ–5 ನಾನು ರಾ.ವಿ ಕಛೇರಿಗೆ ಕೊಂಡ್ಯೊಯ್ದ ಪತ್ರದ ಪ್ರತಿ ಆಗಿದ್ದು ನಿ.ಪಿ–6 ರಾಸಾಯನಿಕ ವಿಶ್ಲೇಷಣಕರ ವರದಿ ಆಗಿರುತ್ತದೆ.

ರಕ್ಷಣಾ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ,ದಿ:6–3–2008ರಂದು ಈ ಕೇಸಿಗೆ ಸಂಬಂಧಿಸಿದಂತೆ ಪಿಡಬ್ಲ್ಯೂ–2 ರಿಂದ ರಾಸಾಯನಿಕ ವಿಶ್ಲೇಷಣೆಗೆ ಮಾದರಿಗಳನ್ನು ಕೊಂಡು ಹೋಗಲಿಲ್ಲ ,ರಸಾಯನಿಕ ವಿಶ್ಲೇಷಣಾ ವರದಿಯನ್ನು ಪಡೆದುಕೊಂಡಿಲ್ಲ , ರಸಾಯನಿಕ ವಿಶ್ಲೇಷಣಾ ವರದಿಯನ್ನು ವಿಶ್ಲೇಷಣಾ ಕಛೇರಿಯಿಂದ ಪಡೆದು ಪ್ರಾ.ಸಾ–2 ರವರಿಗೆ ಒಪ್ಪಿಸಿರುವುದಿಲ್ಲ , ಪ್ರಾ.ಸಾ–2 ರವರಿಗೆ ಈ ಮೊಕದ್ದಮೆಗೆ ಸಂಬಂಧಿಸಿ ಸಹಾಯ ಮಾಡಲು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ ಎಂದು ಪಾಟೀ ಸವಾಲಿಗೆ ಉತ್ತರಿಸುತ್ತಾರೆ.

**ಡಿಡಬ್ಲ್ಯೂ–1**

ಪ್ರಕರಣದ ರಕ್ಷಣಾ ಸಾಕ್ಷಿದಾರರಾದ ಶ್ರೀ.ಕೆ.ಎಸ್.ಗಣೇಶ ಭಟ್.ಮರ್ಕಂಜ ಗ್ರಾಮ, ಬೊಮ್ಮಾರು ಗ್ರಾಮ, ಸುಳ್ಯ ತಾಲೂಕು ಇವರು ದಿ:28–4–2011 ರಂದು ರಕ್ಷಣಾ ಪರ ಸಾಕ್ಷಿ ನುಡಿಯುತ್ತಾ, ಕೆಎ–21–3435 ರ ನೊಂದಣಿ ಮಾಲೀಕನಾಗಿರುತ್ತೇನೆ, ತನಗೆ ಕೃಷಿ ಕೆಲಸ ಇದ್ದು, 10 ಎಕರೆ ಜಮೀನು ಇದೆ, ಸದ್ರಿ ಜೀಪನ್ನು ತನ್ನ ಸ್ವಂತ ಉಪಯೋಗಕ್ಕೆ ಖರೀದಿಸಿರುತ್ತೇನೆ, ಸದ್ರಿ ವಾಹನವನ್ನು ವಿಜಯ ಬ್ಯಾಂಕ್‌ನಿಂದ ಸಾಲಮಾಡಿ ಖರೀದಿಸಿರುತ್ತೇನೆ, ತಾನು ಸದಾಶಿವ ಮಹಾಗಣಪತಿ ದೇವಸ್ಥಾನದ ಆಡಳಿತ ಮೊಕ್ತೆಸರ ಮತ್ತು ಜಾತ್ರೋತ್ಸವ ಸಮಿತಿ ಅಧ್ಯಕ್ಷನಾಗಿರುತ್ತೇನೆ, ತಾನು ದಿ:3–3–2008ರಂದು ಸುಳ್ಯದಿಂದ ಬೊಮ್ಮಾರಿನ ತನ್ನ ಮನೆಗೆ ಸದ್ರಿ ಜೀಪಿನಲ್ಲಿ ಬರುತ್ತಿದ್ದೆ, ಬೊಮ್ಮಾರು ಹತ್ತಿರ ಬರುತ್ತಿರುವಾಗ ನನ್ನ ಎದುರಿನಲ್ಲಿ ವಾಹನ ಬರುತ್ತಿದ್ದು ಸದ್ರಿ ರಸ್ತೆ ಏಕಮುಖವಾಗಿತ್ತು, ಇನ್ನೊಂದು ವಾಹನದ ವ್ಯಕ್ತಿಯ ಜೊತೆ ಮಾತುಕತೆಯಾಗಿದ್ದು, ಸದ್ರಿ ಸ್ಥಳದಲ್ಲಿ ತನ್ನ ಜೀಪನ್ನು ಗಣಪ ಎನ್ನುವ ವ್ಯಕ್ತಿ ತೆಗೆದುಕೊಂಡು ಹೋದರು, ಅಲ್ಲಿಂದ ತನ್ನನ್ನು ಸುಳ್ಯ ಕಚೇರಿಗೆ ಕರೆಕೊಂಡು ಹೋಗಿ ಖಾಲಿ ಕಾಗದಕ್ಕೆ ಸಹಿ ಹಾಕಿಸಿದರು, ತದನಂತರ ನನಗೆ ಅದು ಅಬಕಾರಿ ಕಛೇರಿ ಎಂದು ಗೊತ್ತಾಯಿತು, ರಾತ್ರಿ ಸಮಯತನಕ ನಿಲ್ಲಿಸಿ ಕೋರ್ಟಿಗೆ ಹಾಜರುಪಡಿಸಿರುತ್ತಾರೆ, ತಕ್ಷೀರು ದಿವಸದಂದು ತನ್ನ ವಾಹನದಲ್ಲಿ ಯಾವುದೇ ಮದ್ಯ: ಇನ್ನಿತರ ಕಾನೂನು ಬಾಹಿರ ವಸ್ತುವಾಗಲೀ ಇರಲಿಲ್ಲ, ತಾನು ಯಾವುದೇ ಅಬಕಾರಿ ಪ್ರಕರಣದಲ್ಲಿ ಪ್ರತ್ಯಕ್ಷ ವಾಗಲೀ ಪರೋಕ್ಷವಾಗಲೀ ಭಾಗಿಯಾಗಿಲ್ಲ, ತಾನು ಮಹಾಗಣಪತಿ ದೇವಸ್ಥಾನದ ಮೊಕ್ತೆಸರರಾಗಿರುವ ಬಗ್ಗೆ ದಾಖಲೆ ಹಾಜರು ಪಡಿಸಿದ್ದು, ಅದನ್ನು ನಿಶಾನೆ ಡಿ–1 ಎಂದು, ಕೃಷಿ ಪಾಸ್ ಪುಸ್ತಕ– ನಿಶಾನೆ ಡಿ–2, ಜಾಗಕ್ಕೆ ಸಂಬಂಧಿಸಿದ ಆರ್.ಟಿಸಿ ಗಳನ್ನು ನಿ.ಡಿ–3 ಎಂದು ಗುರುತಿಸಿ ನ್ಯಾಯಾಲಯದಲ್ಲಿ ಪ್ರಾರ್ಥಿಸುತ್ತಾ ತನ್ನ ಜೀಪಿನ ವಿರುದ್ಧ ಇದ್ದ ಮುಟ್ಟುಗೋಲು ವ್ಯವಹರಣೆಯನ್ನು ಕೈಬಿಟ್ಟು ವಾಹನವನ್ನು ಬಿಡುಗಡೆ ಮಾಡಿಕೊಡ ಬೇಕಾಗಿ ಪಾರ್ಥಿಸಿಕೊಂಡಿರುತ್ತಾರೆ.

ಎ.ಡಿಪಿ.ರವರ ಪಾಟೀ ಸವಾಲಿಗೆ ರಕ್ಷಣಾ ಸಾಕ್ಷಿದಾರರು ಉತ್ತರಿಸುತ್ತಾ, ತಾನು ಮುಖ್ಯ ವಿಚಾರಣೆಯಲ್ಲಿ ಹೇಳಿದ ಎಲ್ಲ ವಿಷಯಗಳನ್ನು ಈ ಹಿಂದೆ ನನ್ನ ವಕೀಲರಿಗೆ ಹೇಳಿರುತ್ತೇನೆ. ಪ್ರಾ.ಸಾ–1 ಕೃಷ್ಣ ನಾಯ್ಕರನ್ನು ತಾನು ಈ ಘಟನೆ ನಡೆಯುವ ಒಂದು ವಾರ ಮೊದಲು ಪ್ರಥಮವಾಗಿ ನೋಡಿರುತ್ತೇನೆ,ಈ ಘಟನೆ ನಂತರ ಅ.ಉ.ನಿ ಗೀತಾ ಅವರನ್ನು ಅವರ ಕಛೇರಿಯಲ್ಲಿ ನೋಡಿರುತ್ತೇನೆ, ಈ ಘಟನೆ ಮುನ್ನ ಹಾಗೂ ನಂತರದಲ್ಲಿ 2 ಅಧಿಕಾರಿಗಳಿಗೆ ನನ್ನ ಮೇಲೆ ಯಾವುದೇ ವೈಯಕ್ತಿಕ ದ್ವೇಷ ಇದ್ದಿರುವುದಿಲ್ಲ, ಉಪ ನಿರೀಕ್ಷಕರಾದ ಗೀತಾರವರು ಖಾಲಿ ಕಾಗದಲ್ಲಿ ನನ್ನ ಸಹಿ ಪಡೆಯುವಾಗ ನಾನು ಅಕ್ಷೇಪಿಸಿದ್ದು ಇದಕ್ಕಾಗಿ ಅವರು ಕೈಯಲ್ಲಿ ಹೊಡೆದಿರುತ್ತಾರೆ ಮುಂದುವರಿದು ಹೊಡೆದವರು ಯಾರೆಂದು ನನಗೆ ಗೊತ್ತಿಲ್ಲ, ಅವರು ಕೈಯಲ್ಲಿ ಹೊಡೆದ ಕಾರಣ ನನ್ನ ಮೈಯಲ್ಲಿ ಬಾಸುಂಡೆ ಬಂದಿದ್ದು ಈ ಬಗ್ಗೆ ಅಸ್ಪತ್ರೆಗೆ ಹೋಗಲಿಲ್ಲ, ಕಾರಣ ನನ್ನನ್ನು ಅಬಕಾರಿ ಇಲಾಖೆರವರು ಆ ದಿವಸ ಅಲ್ಲೇ ಇರಿಸಿ ಮಾರನೇ ದಿನ ಕೋರ್ಟಿಗೆ ಹಾಜರುಪಡಿಸಿರುತ್ತಾರೆ, ನನ್ನನ್ನು ಕೋರ್ಟಿಗೆ ಹಾಜರು ಪಡಿಸುವಾಗ ನ್ಯಾಯಾದೀಶರು ನನಗೇನಾದರೂ ಹೊಡೆದಿದ್ದಾರೆ ಎನ್ನುವ ಬಗ್ಗೆ ಪ್ರಶ್ನಿಸಿದ್ದಾರೆ, ಅದರೆ ಅಬಕಾರಿ ಇಲಾಖೆ ಅಧಿಕಾರಿಗಳು ನನಗೆ ಬೆದರಿಕೆ ಹಾಕಿದ ಕಾರಣ ನಾನು ಅಲ್ಲಿ ಎನೂ ವಿಷಯ ಹೇಳಿರುವುದಿಲ್ಲ, ತಾನು ಜಾಮೀನಿನಲ್ಲಿ ಹೊರಗೆ ಬಂದ ನಂತರ ಅಧಿಕಾರಿಗಳ ವಿರುದ್ಧ ಮುಂದುವರಿಯಲಿಲ್ಲ, ದಿ:3–3–2008ರಂದು ತನಗೆ ಸೇರಿದ ಜೀಪು ಸಂ: ಕೆ ಎ–21–3435 ರಲ್ಲಿ 180 ಎಂಎಲ್‌ನ ಮೈಸೂರು ಲ್ಯಾನ್ಸರ್ ವಿಸ್ಕಿ ಎಂಬ 4 ಖಾಲಿ ಬಾಟಲಿಗಳು ಹಾಗೂ ಜೀಪಿನ ಸೀಟಿನಡಿಯಲ್ಲಿ 2 ರಟ್ಟಿನ ಪೆಟ್ಟಿಗೆಗಳಲ್ಲಿ ಕ್ರಮವಾಗಿ 180 ಎಂಎಲ್‌ನ 16,18 ಮೈಸೂರು ಲ್ಯಾನ್ಸರ್ ವಿಸ್ಕಿ ಬಾಟಲಿಗಳಲ್ಲಿ ಮದ್ಯ ಮತ್ತು 2 ಗಾಜಿನ ಖಾಲಿ ಗ್ಲಾಸನ್ನು ಅಕ್ರಮವಾಗಿ ಯಾವುದೇ ದಾಖಲೆ ಇಲ್ಲದೇ ಸಾಗಾಟ ಮಾಡುತ್ತಿದ್ದೆ ಅದರೆ ಸರಿಯಲ್ಲ, ಆ ದಿವಸ ಜೀಪನ್ನು ಆಗಿನ ಅಉನಿ ಸುಳ್ಯ ಶ್ರೀ.ಕೃಷ್ಣ ನಾಯ್ಕ್ ಹಾಗೂ ಶ್ರೀಮತಿ ಗೀತ ರವರು ತಡೆದು ನಿಲ್ಲಿಸಿ ತಪಾಸಣೆ ಮಾಡಿದಾಗ ಮೇಲೆ ಹೇಳಿದ ವಸ್ತು ಪತ್ತೆಯಾದವು ಅಂದರೆ ಸರಿಯಲ್ಲ, ಜೀಪು ಸಮೇತ ಮೇಲೆ ಹೇಳಿದ ವಸ್ತುಗಳನ್ನು ನಿ.ಪಿ–1 ಮಹಜರಿನಲ್ಲಿ ವಶಪಡಿಸಿದ್ದೆಂದರೆ ಸರಿಯಲ್ಲ, ಖಾಲಿ ಕಾಗದದಲ್ಲಿ ಕಛೇರಿಯಲ್ಲಿ ತನ್ನ ಸಹಿ ಪಡೆದುಕೊಂಡಿಲ್ಲ ಅಂದರೆ ಸರಿಯಲ್ಲ, ನಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಅಂದರೆ ಸರಿಯಲ್ಲ ಎಂದು ಪಾಟೀ ಸವಾಲಿಗೆ ಉತ್ತರಿಸುತ್ತಾರೆ.

**ಡಿಡಬ್ಲ್ಯೂ–2**

ಪ್ರಕರಣದಲ್ಲಿ 2ನೇ ರಕ್ಷಣಾ ಪರ ಸಾಕ್ಷಿದಾರರಾದ ಶ್ರೀ. ದಿನೇಶ್ ಗೌಡ, ಬೊಮ್ಮಾರು ಮರ್ಕಂಜ ಗ್ರಾಮ, ಸುಳ್ಯ ತಾಲೂಕು ಇವರು ದಿ:18–8–2011 ರಂದು ಸಾಕ್ಷಿ ನುಡಿಯುತ್ತಾ, ತನಗೆ ಬೊಮ್ಮಾರು ಜಂಕ್ಷನ್‌ನಿಂದ 100 ಮೀ. ದೂರದಲ್ಲಿ ಆಸ್ತಿ ಇದೆ, ತನ್ನ ಮನೆ ಕೂಡ ಅದೇ ರಸ್ತೆಯಲ್ಲಿದೆ, ನನ್ನ ಮನೆಯ ಪಕ್ಕ ಅಂದರೆ ಎದುರುಗಡೆ ಸುಳ್ಯ ಮರ್ಕಂಜ ರಸ್ತ ಹಾದು ಹೋಗುತ್ತದೆ, ತನ್ನ ಮನೆ ಆ ರಸ್ತೆಗೆ ತಾಗಿಕೊಂಡಿದೆ , ಅಲ್ಲಿ 4 ಎಕರೆ ಜಾಗ ಇದ್ದು, ಅದರಲ್ಲಿ ರಬ್ಬರ್ ಬೆಳೆಸುತ್ತೇನೆ, ನಾವು ಹೆಚ್ಚಾಗಿ ನಮ್ಮ ತೋಟದಲ್ಲೇ ಇರುತ್ತೇವೆ, ಹಾಗೂ ಮನೆಯಲ್ಲಿ ಇರುತ್ತೇವೆ, ನಮ್ಮ ಮನೆ ಪಕ್ಕ ರಸ್ತೆಯಲ್ಲಿ ಯಾರಾದರೂ ಜೀಪಿನಲ್ಲಿ ಮದ್ಯ ಮಾರಾಟ ಮಾಡುವುದನ್ನು ನೋಡಿರಲಿಲ್ಲ, ದಿ:3–3–2008ರಂದು ಸಂಜೆ 6–00 ಗಂಟೆ ನಾನು ತನ್ನ ಮನೆಯಲ್ಲಿದ್ದೆ, ತಾನು ಮನೆಯಲ್ಲಿದ್ದರೆ ರಸ್ತೆಯಲ್ಲಿ ಹೋಗುವ ವಾಹನದ ಬಗ್ಗೆ ಗೊತ್ತಾಗುತ್ತದೆ, ದಿ: 3–3–2008ರಂದು ಗಣೇಶ ಭಟ್ ರಿಗೆ ಸೇರಿದ ಜೀಪಿನ್ನು ನನ್ನ ಮನೆ

ಎದುರು ಮಾರ್ಗದಲ್ಲಿ ಅಬಕಾರಿ ಇಲಾಖೆಯವರು ಸ್ವಾದೀನಪಡಿಸುವುದನ್ನು ನಾನು ನೋಡಲಿಲ್ಲ, ಅದೇ ರೀತಿ ಆ ದಿನ ಸಂಜೆ 6–30 ಗಂಟೆಗೆ ನನ್ನ ಮನೆ ಎದುರು ರಸ್ತೆಯಲ್ಲಿ ಅಬಕಾರಿ ಇಲಾಖೆಯವರು ಯಾವುದೇ ದಾಖಲೆಗಳನ್ನು ತಯಾರಿಸುವುದಿಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

**ಪಾಟೀ ಸವಾಲು: ಸರ್ಕಾರಿ ಅಭಿಯೋಜಕರಿಂದ**

ಕಳೆದ 20 ವರ್ಷಗಳಿಂದ ನನಗೆ ಗಣೇಶ ಭಟ್‌ರವರ ಪರಿಚಯ ಇರುತ್ತದೆ, ಈಗ ತಾನು ತನ್ನ ಮುಖ್ಯ ವಿಚಾರಣೆಯಲ್ಲಿ ಹೇಳಿದ ಸುಳ್ಯ–ಮರ್ಕಂಜ ರಸ್ತೆಯಲ್ಲಿ ನನ್ನ ಮನೆ ಎದುರಿನಿಂದ ಅವರು ಜೀಪಿನಲ್ಲಿ ಆಗಾಗ ಹೋಗುತ್ತಿರುತ್ತಾರೆ, ಅವರ ಮನೆಯ ಹತ್ತಿರದವರಾದ ಕಾರಣ ನನಗೆ ಪರಿಚಯ ಇರುತ್ತದೆ, ಸಾಧಾರಣ 15 ಅಥವಾ 1 ತಿಂಗಳ ಅಂತರದಲ್ಲಿ ತಾನು ಅವರಲ್ಲಿ ಮಾತನಾಡುತ್ತಾ ಇರುತ್ತೇವೆ, ತಾನು ಅವರಲ್ಲಿ ಈಗ ಯಾವುದೇ ದ್ವೇಷವನ್ನು ಹೊಂದಿರುವುದಿಲ್ಲ, ತಾನು ತನ್ನ ಮನೆಯಿಂದ ಮದುವೆಗೆ ಹಾಗೂ ಇತರ ಕಾರ್ಯಕ್ರಮಗಳಿಗೆ ಹೋಗುತ್ತಿರುತ್ತೇವೆ, ಮನೆಯಲ್ಲಿ ಅಪ್ಪ ಅಮ್ಮ ಇರುತ್ತಾರೆ, ಹಾಗೂ ಬಂದು ಬಳಗದವರು ಸುಳ್ಯ ಹಾಗೂ ಇತರ ದೂರ ಪ್ರದೇಶಗಳಲ್ಲಿ ಇರುತ್ತಾರೆ, ತಾನು ತನ್ನ ಸ್ವಂತ ಜೀಪಿನಲ್ಲಿ ನನ್ನ ಬಂಧುಗಳ ಮನೆಗೆ ಹೋಗಿ ಬರುತ್ತೇನೆ,ಸುಳ್ಯ ಪೇಟೆಗೆ ನಾನು ವಾರಕ್ಕೊಮ್ಮೆ ಜೀಪಿನಲ್ಲಿ ಹೋಗಿ ಬರುತ್ತೇನೆ, ತಾನು ಜೀಪಿನಲ್ಲಿ ಹೋದರೆ ಬೇರೆಕಡೆಯಿಂದ ಅವಸರ ಅವಸರವಾಗಿ ಬಸ್ಸಿನಲ್ಲಿ ಹಾಗೂ ಇತರ ವಾಹನದಲ್ಲಿ ವಾಪಾಸು ಬರುವ ಅಗತ್ಯ ಇಲ್ಲ,ಯಾಕೆಂದರೆ ನಾನು ನನ್ನ ಸ್ವಂತ ಜೀಪಿನಲ್ಲಿ ಹೋಗುವ ಕಾರಣ ನನ್ನ ಅನುಕೂಲದ ಪ್ರಕಾರ ವಾಪಸು ಬರಬಹುದಾಗಿದೆ, ನಾನು ನನ್ನ ಮನೆಯಲ್ಲಿ ಹೊರಗೆ ಹೋದ ದಿವಸ, ಮನೆಯಲ್ಲಿದ್ದ ದಿನದ ಮಾಹಿತಿಯನ್ನು ಗೋಡೆಯಲ್ಲಿ ಬರೆದಿರುವುದಿಲ್ಲ, ಪ್ರತಿ ಸಲ ಎಲ್ಲಿಗೆ ಹೋಗಿರುತ್ತೇನೆ ಹಾಗೂ ಯಾವಾಗ ವಾಪಾಸು ಬಂದಿರುತ್ತೇನೆಂಬ ಬಗ್ಗೆ ನೆನಪು ನನಗೆ ಇರುವುದಿಲ್ಲ, ನಾನು ಮುಖ್ಯ ವಿಚಾರಣೆಯನ್ನು ಹೇಳಿದ ದಿ:3–3–2008 ಆಗಿರುತ್ತದೆ, ಇದಕ್ಕಿಂದ ಮೊದಲು ನಾನು 3–2–2008ರಂದು ಹೇಳಿರುತ್ತೇನೆ. ಹೀಗೆ ಪ್ರತಿ ದಿನ ನನ್ನ ಮನೆಯ ಎದುರುಗಡೆ ಏನಾಯ್ತು ಎಂಬ ಬಗ್ಗೆ ಕೆಲವು ವಿಷಯಗಳ ಬಗ್ಗೆ ಮಾತ್ರ ಹೇಳಬಲ್ಲೆ, ಆದರೆ ಎಲ್ಲ ವಿಷಯಗಳ ಬಗ್ಗೆ ಹೇಳಲು ಸಾದ್ಯವಿಲ್ಲ ಕಾರಣ ಎಲ್ಲ ವಿಷಯ ನನಗೆ ನೆನಪಿಡಲು ಸಾದ್ಯವಿಲ್ಲ, ಆ ದಿನ ಮಿತ್ತಡ್ಕ ಎಂಬಲ್ಲಿ 1 ಯಕ್ಷಗಾನ ಇದ್ದ ಕಾರಣ ಅ ದಿವಸ ಈ ಬಗ್ಗೆ ಹೇಳಲು ಸಾದ್ಯವಾಗಿರುತ್ತೆ,ಆ ದಿನ ನಾನು 9 ಗಂಟೆಯ ನಂತರ ಯಕ್ಷಗಾನಕ್ಕೆ ಹೋಗಿರುತ್ತೇನೆ, ಆ ದಿನ ಯಕ್ಷಗಾನ ಇರಲಿಲ್ಲ ಅಂದರೆ ಸರಿಯಲ್ಲ, ಈ ಕೇಸಿನಲ್ಲಿ ಅಬಕಾರಿ ಇಲಾಖೆಯವರು ಗಣೇಶ ಭಟ್‌ರ ವಿರುದ್ಧ ಏನು ಪ್ರಕರಣ ದಾಖಲಿಸಿರುತ್ತಾರೆ, ಯಾವ ದಾಖಲೆ ತಯಾರಿಸಿರುತ್ತಾರೆಂದು ನನಗೆ ಗೊತ್ತಿಲ್ಲ, ಗಣೇಶ ಭಟ್‌ರಲ್ಲಿ ಈ ಕೇಸಿನ ಬಗ್ಗೆ ಎಂದೂ ಕೂಡಾ ಮಾತನಾಡರಿರಲಿಲ್ಲ, ಸುಮಾರು 15 ದಿನಗಳ ಹಿಂದೆ ನನಗೆ ಕೇಸಿನ ನೋಟಿಸು ಬಂದಿತ್ತು, ಆ ನೋಟಿಸು ತೆಗೆದುಕೊಂಡು ನಾನು ಯಾರನ್ನು ಸಂಪರ್ಕಿಸದೇ ಇಲ್ಲಿಗೆ ನೇರವಾಗಿ ಬಂದಿರುತ್ತೇನೆ, ಆ ನೋಟಿಸಿನಲ್ಲಿ ಅದು ಗಣೇಶ ಭಟ್‌ರಿಗೆ ಸಂಬಂಧಪಟ್ಟದ್ದು ಎಂದು ಅವರ ಹೆಸರಿದ್ದ ಕಾರಣ ಗೊತ್ತಾಯಿತು, ಕಳೆದ 15 ದಿನದಲ್ಲಿ ಅವರು ನನ್ನ ಮನೆ ಮುಂದಿನ ಮಾರ್ಗದಲ್ಲಿ ಜೀಪಿನಲ್ಲಿ ಹೋಗಿದ್ದನ್ನು ನೋಡಿದೆ ,ಅದರೆ ಅವರಲ್ಲಿ ಆ ನೋಟಿಸಿನ ಬಗ್ಗೆ ಮಾತನಾಡಬೇಕೆಂದು ನನಗೆ ಅನಿಸಿರಲಿಲ್ಲ, ನಾನು ನನ್ನ ಮುಖ ವಿಚಾರಣೆಯಲ್ಲಿ ಹೇಳಿದ ಎಲ್ಲಾ ಅಂಶಗಳು ಸುಳ್ಳು ಎನ್ನುವುದು ಸರಿ ಅಲ್ಲ, ಗಣೇಶ ಭಟರು ನನ್ನ ಅಪ್ತರು, ನೆರೆಕೆರೆಯವರು ಎಂಬ ನೆಲೆಯಲ್ಲಿ ಅವರಿಗೆ ಸಹಾಯ ಮಾಡಲು ನಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೆನೆಂದರೆ ಸರಿ ಅಲ್ಲ ಎಂದು ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

ಪ್ರಕರಣದಲ್ಲಿ ಇತ್ತಂಡಗಳ ವಾದ ವಿವಾದವನ್ನು ಅಲಿಸಲಾಗಿ ರಕ್ಷಣಾ ಪರ ವಕೀಲರು ವಾದ ಮಂಡಿಸುತ್ತಾ ,ಸರ್ಚ್ ಮೆಮೋದಲ್ಲಿ ಪಂಚರ ಸಮಕ್ಷಮ ಹಾಜರಾಗಿರುವುದಾಗಿ ಹೇಳಲಾಗಿದ್ದು, ಮಹಜರಿನಲ್ಲಿ ಪಂಚರ ಸಹಿ ಪಡೆಯದೇ ಇರುವುದರಿಂದ ದಾಖಲೆಗಳು ಒಂದಕ್ಕೊಂದು ತಾಳೆಯಾಗುತ್ತಿಲ್ಲ, ಅರೋಪಿತ ವ್ಯಕ್ತಿಯು ಪರಿಸರದ ದೇವಸ್ಥಾನದ ಮುಕ್ತೇಸ್ಥರ/ ಸಮಾಜದಲ್ಲಿ ಓರ್ವ ಗಣ್ಯ ವ್ಯಕ್ತಿಯಾಗಿರುವುದರಿಂದ ಅಕ್ರಮವಾಗಿ ಮದ್ಯ ಮಾರಾಟ ಮಾಡಿ ಜೀವನ ಸಾಗಿಸುವಂತಹ ಪ್ರಮೇಯ ಒದಗಿ ಬರುವುದಿಲ್ಲ ಆದುದರಿಂದ ತನ್ನ ಕಕ್ಷಿದಾರರ ವಿರುದ್ದ ಅಬಕಾರಿ ಅಧಿಕಾರಿಗಳು ಸುಳ್ಳು ಮೊಕದ್ದಮೆ ದಾಖಲಿಸಿಕೊಂಡಿರುತ್ತಾರೆ ಎಂದು ವಾದ ಮಂಡಿಸಿದ್ದು, ಸರ್ಕಾರಿ ಅಭಿಯೋಜಕರು ಸದ್ರಿ ವಾದವನ್ನು ಅಲ್ಲಗಳೆಯುತ್ತ ಪ್ರಕರಣ ಸಂದರ್ಭದಲ್ಲಿ ತರಾತುರಿಯಲ್ಲಿ ಪ್ರಪತ್ರ ನಮೂನೆಯಲ್ಲಿದ್ದ ಸರ್ಚ್ ಮೆಮೋ ವನ್ನು ತುಂಬಿ ದಾಖಲೆ ರಚಿಸಲಾಗಿರುವುದರಿಂದ ಈ ಕಾರಣವನ್ನು ಗಂಭೀರವಾಗಿ ಪರಿಗಣಿಸಿ ಅರೋಪಿಯು ಅಕ್ರಮ ಎಸಗಿರುವುದಿಲ್ಲ ಎಂದು ಸಾಭೀತು ಗೊಳಿಸಲು ಬರುವುದಿಲ್ಲ ಹಾಗೂ ಪ್ರಕರಣವು ಯಾವುದೇ ಕ್ರಿಮಿನಲ್ ಪ್ರಕರಣವಾಗಿರದೇ, ಮುಟ್ಟುಗೋಲು ನಡವಳಿಯಾಗಿರುವುದರಿಂದ ಅಭಿಯೋಗದ ಪರ ವಿಚಾರಿಸಲಾದ ಇಲಾಖಾ ಸಾಕ್ಷಿಗಳ ಸಾಕ್ಷ್ಯ/ ದಾಖಲೆಗಳಲ್ಲಿ ಕೆಲವೊಂದು ಸಣ್ಣಪುಟ್ಟ ವ್ಯತಿರೀಕ್ತತೆಗಳು ಕಂಡುಬಂದರೂ ಅದು ಅಭಿಯೋಜನೆಗೆ ಮಾರಕವಾಗುವುದಿಲ್ಲ. ಅಭಿಯೋಗದ ಪರ ವಿಚಾರಿಸಲಾದ ಇಲಾಖಾ ಸಾಕ್ಷಿ ಗಳು ಪ್ರಕರಣವನ್ನು ಪತ್ತೆಹಚ್ಚಿ ಮುಂದಿನ ತನಿಖೆ ನಡೆಸಿ ಅರೋಪಿ /ವಾಹನದ ಮಾಲೀಕರು ತನ್ನ ವಾಹನವನ್ನು ಈ ಕೃತ್ಯದಲ್ಲಿ ನಿಯೋಜಿಸಿರುವುದು ಅಕ್ರಮವಾಗಿದ್ದು ಹಾಗೂ ಯಾವುದೇ ಮುಂಜಾಗತ್ರೆಯನ್ನು ತೆಗೆದುಕೊಳ್ಳದೇ ಇರುವುದು ಸಾಭೀತಾಗಿರುತ್ತದೆ. ಈ ಬಗ್ಗೆ ಇಲಾಖಾ ಸಾಕ್ಷಿ ಗಳು ಬಹಳ ಸ್ಪಷ್ಟವಾಗಿ ಹಾಗೂ ತಮ್ಮ ಕರ್ತವ್ಯದ ನೆಲೆಯಲ್ಲಿ ಪ್ರಮಾಣಿಕವಾಗಿ ಸಾಕ್ಷ್ಯ ನೀಡಿರುವುದರಿಂದ ಹಾಗೂ ವಾಹನದ ಮಾಲೀಕರು ವಿಚಾರಣಾ ವೇಳೆಯಲ್ಲಿ ತಾನೊಬ್ಬ ಸಮಾಜದ ಗಣ್ಯ ವ್ಯಕ್ತಿ ಎಂಬ ನೆಲೆಯಲ್ಲಿ ರಕ್ಷಣಾ ಸಾಕ್ಷ್ಯ ಹೇಳಿಕೊಂಡಿದ್ದರೂ ವಾಹನವನ್ನು ಅಕ್ರಮ ಸಾಗಾಣಿಕೆಗೆ ಬಳಸಲಾಗಿಲ್ಲ ಎಂಬ ಅಂಶದ ಬಗ್ಗೆ ಸೂಕ್ತ ಪುರಾವೆಗಳನ್ನು ಒದಗಿಸಿ ತನ್ನ ನಿರಾಪರಾಧಿತ್ವವನ್ನು ಸಾಭೀತುಪಡಿಸಿರುವುದಿಲ್ಲ. ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಬಿ ಯಲ್ಲಿ ಹೇಳಿದ ರುಜುವಾತಿನ ಭಾರವನ್ನು ವಾಹನದ ಮಾಲೀಕರು ನಿಭಾಯಿಸುವಲ್ಲಿ ವಿಫಲರಾಗಿರುವುದು ಸಾಭೀತುಪಡಿಸುತ್ತದೆ. ವಾಹನ ಶೋಧನೆ ಸಂದರ್ಭದಲ್ಲಿ ಕಲಂ 54ರಡಿ ರೆಕಾರ್ಡ್ ಆಫ್ ರೀಜನ್ಸ್‌ನ್ನು ದಾಖಲಿಸಲೇ ಬೇಕೆಂಬುದು ಕಾನೂನಡಿ ಅಜ್ಞಾಪಕವಾಗಿರುವುದಿಲ್ಲ. ಹಾಗೂ ತಯಾರಿಸಲಾದ ಸರ್ಚ್ ಮೆಮೋದಲ್ಲಿ ಆದ ಕೆಲವೊಂದು ಪ್ರಮಾದಕರ ಸಂಗತಿಯನ್ನು ಉಲ್ಲೇಖಗೊಳಿಸಿ ಮುಟ್ಟು ಗೋಲು ವ್ಯವಹರಣೆಯನ್ನು ಅಥವಾ ಅಂತಿಮ ಮುಟ್ಟುಗೋಲು ಅದೇಶ ಅಸಿಂಧು ಗೊಳಿಸಲು ಬರುವುದಿಲ್ಲ. ಹಾಗೂ ಪ್ರಕರಣವನ್ನು ಅಬಕಾರಿ ಅಧಿಕಾರಿಗಳು ದ್ವೇಷದಿಂದ ಉದ್ದೇಶ ಪೂರ್ವಕವಾಗಿ ದಾಖಲಿಸಿಕೊಂಡಿರುವುದು ಎಂದು ರಕ್ಷಣಾ ಹೇಳಿಕೆಗಳನ್ನು ನೀಡಿರುವರಾದರೂ ಈ ಬಗ್ಗೆ ಪುರಾವೆಗಳನ್ನು ಒದಗಿಸಿ ರುಜುವಾತು ಪಡಿಸಲು ವಿಫಲರಾಗಿರುತ್ತಾರೆ. ಕಾರಣ ವಾಹನ ವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಳ್ಳುವಂತೆ ತಮ್ಮ ಪ್ರತಿವಾದವನ್ನು ಮಂಡಿಸಿರುತ್ತಾರೆ.

ಈ ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯವರು ಪ್ರಕರಣಕ್ಕೆ ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರಗಳ ಮೇಲೆ ಮತ್ತು ರಕ್ಷಣಾ ಸಾಕ್ಷಿದಾರರು ನೀಡಿರುವ ಹೇಳಿಕೆಗಳು ಹಾಗೂ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ: 3–3–2008 ರಂದು ಜೀಪು ಸಂ:KA–21–3435ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಅರೋಪಿ ಮದ್ಯವನ್ನು ಹೊಂದಿ ಮಾರಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ, ಅಬಕಾರಿ ಉಪ ನಿರೀಕ್ಷಕರು(2), ಜಾರಿ ಮತ್ತು ತನಿಖೆ,ಸುಳ್ಯ ಇವರ ಪ್ರ.ಮಾ.ವ ಸಂ:16/2007–08 ದಿ:3–3–2008ರಂತೆ ಪ್ರಕರಣ ದಾಖಲಿಸಿಕೊಂಡಿರುವುದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿ ಪ್ರಕಾರ ಮದ್ಯ ಎಂದು ದೃಢ ಪಟ್ಟಿರುವುದು ಹಾಗೂ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ಮದ್ಯ ಅನಧಿಕೃತವಾಗಿ ವಾಹನದಲ್ಲಿ ಇಟ್ಟುಕೊಂಡು ಮಾರಾಟ ಮಾಡಲಾಗಿಲ್ಲ ಎಂಬುದನ್ನು ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ರಕ್ಷಣಾ ಸಾಕ್ಷಿ ವಿಚಾರಣೆ ವೇಳೆಯಲ್ಲಿ ಸಾಭೀತುಪಡಿಸಲು ವಿಫಲರಾಗಿ ಕರ್ನಾಟಕ ಅಬಕಾರಿ ಕಾಯಿದೆ 43 ಬಿ ರಡಿಯಲ್ಲಿ ಹೇಳುವಂತಹ ರುಜುವಾತುವಿನ ಭಾರವನ್ನು ಸಮಂಜಸವಾಗಿ ನಿಭಾಯಿಸದೇ ಇರುವುದರಿಂದ ಅಭಿಯೋಜನ ಪರ ಮಂಡಿಸಿದ ಸಾಕ್ಷ್ಯಾಧಾರವನ್ನು ಅವಲಂಬಿಸಿ ವಾಹನದ ಮಾಲೀಕರ ವಿರುದ್ಧ ಪ್ರತಿಕೂಲ ಭಾವನೆಯನ್ನು ಹೊಂದಿ ವಾಹನದ ಮಾಲೀಕರೇ ಈ ಕೃತ್ಯವನ್ನು ಎಸಗಿರುತ್ತಾರೆ ಎಂಬ ಬಗ್ಗೆ ನಿರ್ಣಯಕ್ಕೆ ಬರಲು ಸಾಕಷ್ಟು ವಿಷಯ ಸಾಮಾಗ್ರಿಗಳು ಕಂಡು ಬಂದಿರುವುದರಿಂದ, ಸದ್ರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕ ವಾಗಿ ಪರಿಗಣಿಸಲಾಗಿರುತ್ತದೆ.

ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ಮದ್ಯದ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಲಾಗಿದ್ದು, ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರು ವಲಯ ಇವರು ದಿ:04–04–2008ರಂದು ನೀಡಿರುವ ವಿಶ್ಲೇಷಣಾ ವರದಿಯಲ್ಲಿ ಮದ್ಯದಲ್ಲಿ ಮದ್ಯಸಾರ ಪ್ರಮಾಣ ಎಲ್ಲಾ ಮಾದರಿಗಳಲ್ಲೂ 42.0% ಇರುವುದಾಗಿ ದೃಡೀಕರಿಸ ಲ್ಪಟ್ಟಿರುವುದರಿಂದ ಜಪ್ತುಪಡಿಸಿಕೊಂಡ ವಸ್ತುವು ಅಬಕಾರಿ ಸೊತ್ತು (ಮದ್ಯ) ಆಗಿರುವುದು ಸಾಬೀತಾಗಿರುವುದರಿಂದ ಎರಡನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇಂತಹ ಅಬಕಾರಿ ಸೊತ್ತುಗಳ ಅಕ್ರಮ ಮಾರಾಟಕ್ಕೆ ವಾಹನವನ್ನು ಕಾನೂನಿನ ಅರಿವು ಇಲ್ಲದೇ ತಿಳುವಳಿಕೆಯ ಕೊರತೆಯಿಂದ ಬಳಸಲಾಗಿದೆ ಎಂಬುದನ್ನು ಸಾಕ್ಷ್ಯಾಧಾರ ಗಳೊಂದಿಗೆ ಸಾಭೀತು ಪಡಿಸುವುದು ವಾಹನದ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಪ್ರಕರಣದಲ್ಲಿ ವಾಹನದ ಮಾಲೀಕರು ಪ್ರಾದಿಕಾರದ ಮುಂದೆ ಹಾಜರಾಗಿ ಕೃತಕ /ಕಲ್ಪಿತ ರಕ್ಷಣಾ ಹೇಳಿಕೆಗಳನ್ನು ನೀಡಿರುವುದು ಮತ್ತು ನಂಬಲಾರ್ಹವಾದ ಸೂಕ್ತ ಪುರಾವೆ ಗಳನ್ನು ಒದಗಿಸಿ ತನ್ನ ರುಜುವಾತು ಭಾರವನ್ನು ಸಮರ್ಪಕವಾಗಿ ನಿರ್ವಹಿಸದೇ ಇರುವುದರಿಂದ ವಾಹನವನ್ನು ತನ್ನ ಅರಿವೆಗೆ ಬಾರದೇ ಇಂತಹ ಅಕ್ರಮ ಮದ್ಯ ಮಾರಾಟಕ್ಕೆ ಉಪಯೋಗಿಸಲಾಗಿದೆ ಎಂದು ರುಜುವಾತು ಪಡಿಸಲು ವಿಫಲರಾಗಿರುತ್ತಾರೆ. ಈ ಮೇಲಿನ ಕಾರಣಗಳಿಂದ ಮೂರನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ದಿ:03–03–2008ರಂದು ಅಬಕಾರಿ ಉಪ ನಿರೀಕ್ಷಕರು(2), ಜಾರಿ ಮತ್ತು ತನಿಖೆ, ಸುಳ್ಯ ಇವರು ಪ್ರಕರಣ ಸಂ:16/2007–08ರಂತೆ ಅಕ್ರಮವಾಗಿ 6.120 ಲೀಟರು ಮದ್ಯವನ್ನು ವಾಹನ ಸಂ: KA-21-3435 ಜೀಪಿನಲ್ಲಿ ಇಟ್ಟುಕೊಂಡು ಮಾರಾಟ ಮಾಡಿರುವುದು ಸಾಭೀತಾಗಿದ್ದು, ಇದು ಕರ್ನಾಟಕ ಅಬಕಾರಿ 1965ರ 34 ರ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಕರ್ನಾಟಕ ಅಬಕಾರಿ ಕಾಯಿದೆ 43(ಎ)2ರಂತೆ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿ ತೀರ್ಮಾನಿಸಲಾಗಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶ.

**ಆದೇಶ**

ಬಿ.ವಿ.ಹೂವಪ್ಪ ಗೌಡ, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43 ಬಿ ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ಉಪ ನಿರೀಕ್ಷಕರು(2), ಜಾರಿ ಮತ್ತು ತನಿಖೆ, ಸುಳ್ಯ ಇವರ ತಕ್ಷೀರು ಸಂ:16/2007–08,ದಿ:3–3–2008ರಲ್ಲಿ ಜಪ್ತುಪಡಿಸಿರುವ ವಾಹನ ಸಂ: KA-21-3435 ಜೀಪು (ಚಾಸೀಸ್ ಸಂ:CL50OMDI-4DX-DX-103775 ಮತ್ತು ಇಂಜಿನ್ ಸಂ: DX-103775) ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ನಿಯಮ 43 ಎ (2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿನಾಂಕ:4–7–2008ರಂದು ವಾಹನವನ್ನು ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್‌ಸಿ ಮಾಲೀಕರು ಸದರಿ ಮಧ್ಯಂತರ ಬಿಡುಗಡೆ ಹೊಂದಿರುವ ವಾಹನ ಸಂ:KA-21-3435 ಜೀಪನ್ನು ಆದೇಶದ 30 ದಿನಗಳ ಒಳಗೆ ಈ ಪ್ರಾಧಿಕಾರದ ವಶಕ್ಕೆ ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಇವರಲ್ಲಿ ಒಪ್ಪಿಸಲು ಆದೇಶಿಸಿದೆ. ಈ ಆದೇಶ ಪಾಲನೆ ಬಗ್ಗೆ ಹಾಗೂ ಸದ್ರಿ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನವನ್ನು ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಇವರು ಪ್ರಾಧಿಕಾರದ ಪರ ಅವರ ಸ್ವಾಧೀನಕ್ಕೆ ಪಡೆದುಕೊಂಡು ಈ ಪ್ರಾಧಿಕಾರಕ್ಕೆ ವರದಿ ಒಪ್ಪಿಸಲು ಆದೇಶಿಸಿದೆ.

ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನವನ್ನು ಅರ್.ಸಿ ಮಾಲೀಕರು ಈ ಅದೇಶ ಹೊರಡಿಸಿದ 30 ದಿವಸಗಳೊಳಗೆ ಪ್ರಾದಿಕಾರದ ಸುಪರ್ಧಿಗೆ ಒಪ್ಪಿಸಲು ವಿಫಲರಾದಲ್ಲಿ, ಅವರು ಈ ಮದ್ಯಂತರ ಅದೇಶದ ಷರತ್ತಿಗನುಗುಣವಾಗಿ ಈ ಪ್ರಾದಿಕಾರಕ್ಕೆ ಭದ್ರತೆಯಾಗಿ ನೀಡಿರುವ ರೂ.55,000/– ಮೊತ್ತದ ಬ್ಯಾಂಕ್ ಗ್ಯಾರೆಂಟಿಯನ್ನು ಇನ್‌ವೋಕ್ ಮಾಡಿಕೊಂಡು, ಅಡಕವಾಗಿರುವ ಮೊತ್ತವನ್ನು ಇಲಾಖಾ ಖಾತೆಗೆ ಹೊಂದಾಣಿಕೆ ಮಾಡಿ ಕೊಳ್ಳಲು ಅದೇಶಿಸಿದೆ.

ಸದ್ರಿ ಪ್ರಕರಣದಲ್ಲಿ ಜಪ್ತು ಪಡಿಸಿಕೊಳ್ಳುವ ಮದ್ಯವನ್ನು ಈ ಪ್ರಾಧಿಕಾರದ ಸಮ ಸಂಖ್ಯೆ ಅದೇಶ ದಿನಾಂಕ:12–9–08ರ ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವುದನ್ನು ಸ್ಥಿರೀಕರಿಸಿದ್ದೇನೆ.

ಈ ಆದೇಶವನ್ನು ದಿನಾಂಕ:29–12–2011ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ಬಿ.ವಿ.ಹೂವಪ್ಪ ಗೌಡ,**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:–**

ಪ್ರಾ.ಸಾ–I : ಶ್ರೀ.ಕೃಷ್ಣ ನಾಯ್ಕ್, ಅಬಕಾರಿ ಉಪ ನಿರೀಕ್ಷಕರು, ಸುಳ್ಯ ವಲಯ
ಪ್ರಾ.ಸಾ–2 : ಶ್ರೀಮತಿ.ಗೀತಾ,ಅನಿ, ಭಟ್ಕಳ ವಲಯ
ಪ್ರಾ.ಸಾ 3 : ಶ್ರೀ. ರಾಮಣ್ಣ ಗೌಡ, ಅ.ರ ,ಸುಳ್ಯ ವಲಯ

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:–**

ನಿಶಾನೆ ಪಿ– I : ಮಹಜರು ಪ್ರತಿ
ನಿಶಾನೆ ಪಿ–2 : ಜಪ್ತು ಪಟ್ಟಿ, ನಿಶಾನೆ ಪಿ–2ಎ & ಬಿ : ಅದರ ಮೇಲಿನ ಸಾಕ್ಷಿ ಸಹಿ
ನಿಶಾನೆ ಪಿ–3 : ಪ್ರಥಮ ಮಾಹಿತಿ ವರದಿ ,ನಿಶಾನೆ ಪಿ–3 ಎ : ಅದರ ಮೇಲಿನ ಸಾಕ್ಷಿ ಸಹಿ
ನಿಶಾನೆ ಪಿ–4 : ಕಲಂ 54 ರ ವರದಿ, ನಿಶಾನೆ ಪಿ–4 ಎ : ಅದರ ಮೇಲಿನ ಸಾಕ್ಷಿ ಸಹಿ
ನಿಶಾನೆ ಪಿ–5 : ಫಿರ್ಯಾದುದಾರರು ಅಧಿಕೃತ ಅಧಿಕಾರಿಗಳಿಗೆ ಬರೆದ ಕೋರಿದ ಪತ್ರ
ನಿಶಾನೆ ಪಿ–5ಎ: ಅದರ ಮೇಲಿನ ಸಾಕ್ಷಿ ಸಹಿ
ನಿಶಾನೆ ಪಿ–6 : ರಸಾಯನಿಕ ವಿಶ್ಲೇಷಣಾ ವರದಿ
ನಿಶಾನೆ ಪಿ–7 : ಬಿ ಎಕ್ಸ್ ಟ್ರಾಕ್ಟ್ ವರದಿ
ನಿಶಾನೆ ಪಿ–8 : ಮಾದರಿ ಮೊಹರು ,ನಿಶಾನೆ ಪಿ–8 ಎ : ಅದರ ಮೇಲಿನ ಸಾಕ್ಷಿ ಸಹಿ
ನಿಶಾನೆ ಪಿ–9 : ದೋಷರೋಪಣಾ ಪಟ್ಟಿ, ನಿಶಾನೆ ಪಿ–9 ಎ : ಅದರ ಮೇಲಿನ ಸಾಕ್ಷಿ ಸಹಿ
ನಿಶಾನೆ ಪಿ–10 : ತನಿಖಾ ವರದಿ, ನಿಶಾನೆ ಪಿ–10 ಎ : ಅದರ ಮೇಲಿನ ಸಾಕ್ಷಿ ಸಹಿ

**ಅನುಬಂಧ–III**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು :–**

ಡಿಡಬ್ಲ್ಯೂ–ಡಿ–1 : ಶ್ರೀ. ಕೆ.ಎಸ್.ಗಣೇಶ್ ಭಟ್, ಮರ್ಕಂಜ ಗ್ರಾಮ, ಬೊಮ್ಮಾರು,ಸುಳ್ಯ
ಡಿಡಬ್ಲ್ಯೂ–ಡಿ–2 : ಶ್ರೀ.ದಿನೇಶ್ ಗೌಡ,ಬೊಮ್ಮಾರು ಮರ್ಕಂಜ ಗ್ರಾಮ, ಸುಳ್ಯ ತಾಲೂಕು

**ಅನುಬಂಧ–IV**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು :–**

ನಿಶಾನೆ ಡಿ–1 : ಮಹಾಗಣಪತಿ ದೇವಸ್ಥಾನದ ಮೊಕ್ತೆಸರನಾಗಿರುವ ಬಗ್ಗೆ ದಾಖಲೆ
ನಿಶಾನೆ ಡಿ–2 : ಕೃಷಿ ಪಾಸ್ ಪುಸ್ತಕ
ನಿಶಾನೆ ಡಿ–3 : ಜಾಗಕ್ಕೆ ಸಂಬಂಧಿಸಿದ ಆರ್.ಟಿ.ಸಿ ಪ್ರತಿಗಳು

**ಬಿ.ವಿ.ಹೂವಪ್ಪ ಗೌಡ,**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

**ಪಿ.ಆರ್. 1422**

## ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ

**ಸಂಖ್ಯೆ : ಎಸ್‌ಡಿಕೆ/208/ಡಿಟಿಸಿಆರ್/2007–08, ದಿನಾಂಕ: 08–12–2011**

**ಉಪಸ್ಥಿತರು :** ಬಿ.ವಿ.ಹೂವಪ್ಪ ಗೌಡ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

**ಫಿರ್ಯಾದುದಾರರು:**

ಅಬಕಾರಿ ಉಪ ನಿರೀಕ್ಷಕರು(1)
ಜಾರಿ ಮತ್ತು ತನಿಖೆ, ಮಂಗಳೂರು ದಕ್ಷಿಣ ವಲಯ

**ಆರೋಪಿಗಳು**

1) ದಯಾನಂದ,ಬಿನ್:ಚಂದಪ್ಪ ಪೂಜಾರಿ , ಇರುವೈಲ್,ಮಂಗಳೂರು ತಾಲೂಕು
2) ವಿಶ್ವನಾಥ ಬಂಗೇರಾ, ಬಿನ್:ದರ್ಣಪ್ಪ ಪೂಜಾರಿ, ಕುಪ್ಪೆಪದವು,ಮಂಗಳೂರು
3) ಶ್ರೀ.ಸಂಜೀವ ಪಿ.ಎಂ.ಬಿನ್:ಸುಬ್ಬ ಪೂಜಾರಿ (ಸಿಎಲ್–9 ಸನ್ನದುದಾರರು) ನಶಾ ಬಾರ್ ಅಂಡ್ ರೆಸ್ಟೋರೆಂಟ್, ಡೋರ್ ನಂ:1–78(1) S.N.34/8 ಕುಪ್ಪೆಪದವು, ಮಂಗಳೂರು

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು (ನಂ.1), ಜಾರಿ ಮತ್ತು ತನಿಖೆ, ಮಂಗಳೂರು ದಕ್ಷಿಣ ಇವರು ತಮ್ಮ ಸಿಬ್ಬಂಧಿಯವರೊಂದಿಗೆ ದಿನಾಂಕ:9–12–2007ರಂದು ಪೂರ್ವಾಹ್ನ 10–00 ಗಂಟೆ ಸಮಯಕ್ಕೆ ಸರಿಯಾಗಿ ಮಂಗಳೂರು ತಾಲೂಕು ಕುಪ್ಪೆಪದವು ಎಂಬಲ್ಲಿರುವ ಕ.ಸಂ:1–78(1) ಎಸ್.ಎನ್ ನಂ:34–8 ರಲ್ಲಿ ಎಸ್.ಎನ್.ನಂ:34–8 ಶ್ರೀ.ಸಂಜೀವ ಪಿ.ಎಂ ಬಿನ್:ಸುಬ್ಬ ಪೂಜಾರಿ, ಕುಪ್ಪೆಪದವು, ಮಂಗಳೂರು ತಾಲೂಕು ಇವರ ಒಡೆತನಕ್ಕೆ ಸೇರಿದ ನಿಶಾ ಬಾರ್ ಅಂಡ್ ರೆಸ್ಟೋರೆಂಟ್ ಸಿಎಲ್–9 ಸನ್ನದನ್ನು ತಪಾಸಣೆ ಕೈಗೊಂಡ ಸಂದರ್ಭದಲ್ಲಿ ವಿವಿಧ ಬ್ರಾಂಡ್‌ನ ಲೇಬಲ್‌ಗಳಿರುವ 0.750 ಎಂಎಲ್‌ನ ಬಾಟಲುಗಳಲ್ಲಿ ಒಟ್ಟು 3–670 ಲೀ ನಕಲಿ ಮದ್ಯವನ್ನು ಅಸಲಿ ಮದ್ಯದೊಂದಿಗೆ ಅಕ್ರಮವಾಗಿ ಮಾರಾಟದ ಸಲುವಾಗಿ ದಾಸ್ತಾನು ಇಟ್ಟಿರುವುದನ್ನು ಪತ್ತೆಹಚ್ಚಿ,ಇದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 13,14ರಂತೆ ಅಪರಾಧವಾಗಿದ್ದು, ಕಲಂ 29,32,34,36,37 ಹಾಗೂ 43(2)ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಸ್ಥಳದಲ್ಲಿ ಇಲಾಖಾ ಸಿಬಂಧಿಗಳ ಸಮಕ್ಷಮ ಮಹಜರು ತಯಾರಿಸಿ, ಸನ್ನದು ಅವರಣದಲ್ಲಿ ಪತ್ತೆಯಾದ ನಕಲಿ ಮದ್ಯ ಮತ್ತು ರಹದಾರಿ ಮೂಲಕ ಪಡೆಯಲಾಗಿದ್ದ ಮದ್ಯ ಹಾಗೂ ಬೀರಿನ ದಾಸ್ತಾನು ಪಟ್ಟಿಯನ್ನು ತಯಾರಿಸಿ, ಸದ್ರಿ ಸನ್ನದಿನಲ್ಲಿ ದಾಸ್ತಾನು ಹೊಂದಲಾಗಿದ್ದ ಅಕ್ರಮ 3–670 ಲೀಟರು ನಕಲಿ ಮದ್ಯ ಹಾಗೂ ಸನ್ನದು ಆವರಣದಲ್ಲಿದ್ದ ಸರ್ಕಾರಕ್ಕೆ ಶುಲ್ಕ ಪಾವತಿಸಲಾದ ಅಸಲಿ ಮದ್ಯ 335–535 ಲೀ ಮತ್ತು 125–450 ಲೀ ಬಿಯರ್ ದಾಸ್ತಾನನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43(ಎ)ರೀತ್ಯಾ ಸನ್ನದುದಾರರ ಅಧಿಕೃತ ನೌಕರರ ಸಮಕ್ಷಮ ಜಪ್ತುಪಡಿಸಿಕೊಂಡು, ನೌಕರರಾದ ದಯಾನಂದ,ಬಿನ್:ಜೀನಪ್ಪ ಪೂಜಾರಿ, ಇರುವೈಲ್, ಮಂಗಳೂರು ತಾಲೂಕು 2) ವಿಶ್ವನಾಥ ಬಂಗೇರಾ, ಬಿನ್:ದರ್ಣಪ್ಪ ಪೂಜಾರಿ, ಕುಪ್ಪೆಪದವು,ಮಂಗಳೂರು ಮತ್ತು ಸನ್ನದುದಾರರಾದ ಶ್ರೀ.ಸಂಜೀವ ಪಿ.ಎಂ.ಬಿನ್: ಸುಬ್ಬ ಪೂಜಾರಿ (ಸಿಎಲ್–9 ಸನ್ನದು ದಾರರು) ನಶಾ ಬಾರ್ ಅಂಡ್ ರೆಸ್ಟೋರೆಂಟ್, ಡೋರ್ ನಂ: 1–78(1) S.N.34/8, ಕುಪ್ಪೆಪದವು, ಮಂಗಳೂರು ಇವರುಗಳ ವಿರುದ್ಧ ಅಬಕಾರಿ ಉಪ ನಿರೀಕ್ಷಕರು(1), ಜಾರಿ ಮತ್ತು ತನಿಖೆ, ಮಂಗಳೂರು ದಕ್ಷಿಣ ಇವರಿಂದ ತಕ್ಷೀರು ಸಂ: 10/2007–08 ದಿ:9–12–2007 ರಂತೆ ಮೊಕದ್ದಮೆ ದಾಖಲಿಸಲಾಗಿರುತ್ತದೆ.

**ವಶಪಡಿಸಿಕೊಂಡ ಸೊತ್ತುಗಳು:–**

1) ಮೈಸೂರು ಲ್ಯಾನ್ಸರ್ ವಿಸ್ಕಿ ಎಂಬ ಲೇಬಲ್ ಹೊಂದಿದ 750 ಮಿಲಿಯದ ಬಾಟಲಿಯಲ್ಲಿ 650 ಮಿಲಿ ಮದ್ಯ
2) ವಿಂಡ್ಸರ್ ವಿಸ್ಕಿ ಎಂಬ ಲೇಬಲ್ ಹೊಂದಿದ 750 ಮಿಲಿಯದ ಬಾಟಲಿಯಲ್ಲಿ 690 ಮಿಲಿ ಮದ್ಯ
3) ಮ್ಯಾಜಿಕ್ ಜಿನ್ ಎಂಬ ಲೇಬಲ್ ಹೊಂದಿದ 750 ಮಿಲಿಯದ ಬಾಟಲಿಯಲ್ಲಿ 690 ಮಿಲಿ ಮದ್ಯ
4) ಬೋನಿ ಸ್ಕಾಟ್ ವಿಸ್ಕಿ ಎಂಬ ಲೇಬಲ್ ಹೊಂದಿದ 750 ಮಿಲಿಯದ ಬಾಟಲಿಯಲ್ಲಿ 550 ಮಿಲಿ ಮದ್ಯ
5) ಓಲ್ಡ್ ಮಾಂಕ್ ರಂ ಎಂಬ ಲೇಬಲ್ ಹೊಂದಿದ 750 ಮಿಲಿಯದ ಬಾಟಲಿಯಲ್ಲಿ 690 ಮಿಲಿ ಮದ್ಯ
6) ಜೆ.ಡಿ ವಿಸ್ಕಿ ಎಂಬ ಲೇಬಲ್ ಹೊಂದಿದ 750 ಮಿಲಿಯದ ಬಾಟಲಿಯಲ್ಲಿ 400 ಮಿಲಿ ಮದ್ಯ

**ಒಟ್ಟು –3.670 ಲೀ ನಕಲಿ ಮದ್ಯ**

(ಮೇಲಿನ ಎಲ್ಲಾ ಮದ್ಯದ ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆಯಲಾಗಿದೆ)

7) ಸರ್ಕಾರಕ್ಕೆ ಶುಲ್ಕ ಪಾವತಿಸಿದ ಅಸಲಿ ಮದ್ಯ 335.535 ಲೀ ಮತ್ತು 125.450 ಲೀ ಬಿಯರ್ (ವಿವರ ಅನುಬಂಧ–1ರಲ್ಲಿ ತೋರಿಸಲಾಗಿದೆ)

ಸನ್ನದುದಾರರು ಸನ್ನದು ಆವರಣದಲ್ಲಿ ಅಸಲಿ ಮದ್ಯದೊಂದಿಗೆ ನಕಲಿ ಮದ್ಯವನ್ನು ಮಾರಾಟ ಮಾಡುವ ಉದ್ದೇಶದಿಂದ ದಾಸ್ತಾನು ಹೊಂದಿ ಗ್ರಾಹಕರಿಗೆ ವಂಚಿಸಿ ಅವರ ಅರೋಗ್ಯ ಹಾಗೂ ಜೀವ ಹಾನಿ ಮಾಡುವಂತಹ ಅಪರಾಧ ಎಸಗಿರುವುದರಿಂದ ಪ್ರಕರಣದ ತನಿಖೆ ಕಾರ್ಯ ಮತ್ತು ಸನ್ನದು ರದ್ದುಪಡಿಸುವ ಕ್ರಮವನ್ನು ಕಾಯ್ದಿರಿಸಿ ಸನ್ನದುದಾರರ ಸಿಎಲ್–9 ಸನ್ನದನ್ನು ಜಿಲ್ಲಾದಿಕಾರಿಗಳು ಹಾಗೂ ಸನ್ನದು ಮಂಜೂರಾತಿ ಪ್ರಾಧಿಕಾರಿ

,ದ.ಕ ಜಿಲ್ಲೆ ಮಂಗಳೂರು ಇವರ ಅದೇಶ ಸಂ: ಎಸ್‌ಡಿಕೆ:208:ಡಿಟಿಸಿಆರ್: 2007–08 ದಿ: 08–01–2008ರ ಅದೇಶದಲ್ಲಿ 15 ದಿನಗಳ ಅವಧಿಗೆ ಅಮಾನತ್ತುಗೊಳಿಸಿ, ನಂತರದಲ್ಲಿ ದಿನಾಂಕ:23–1–2008ರ ಅದೇಶದಲ್ಲಿ ಸನ್ನದ್ದನ್ನು ಸರ್ಕಾರದ ರಾಜಸ್ವದ ಹಿತದೃಷ್ಟಿಯಿಂದ ದಿ:23–1–2008ರಿಂದ ಅನ್ವಯವಾಗುವಂತೆ ವ್ಯವಹಾರಕ್ಕೆ ತೆರವುಗೊಳಿಸಿ ಅದೇಶಿಸಲಾಗಿರುತ್ತದೆ

ಸನ್ನದುದಾರರಾದ ಶ್ರೀ.ಸಂಜೀವ ಪಿ.ಎಂ ಇವರು ದಿ:1–3–2008ರಂದು ಪ್ರಾಧಿಕಾರಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಜಪ್ತುಪಡಿಸಿಕೊಳ್ಳಲಾದ ತೆರಿಗೆ ಪಾವತಿಸಿದ ಮದ್ಯ ಮತ್ತು ಬಿಯರನ್ನು ತಮಗೆ ಮಧ್ಯಂತರ ಬಿಡುಗಡೆ ಮಾಡಿಕೊಡಬೇಕಾಗಿ ಹಾಗೂ ಈ ಬಗ್ಗೆ ಪ್ರಾಧಿಕಾರದಿಂದ ನಿಗಧಿಪಡಿಸಿದ ಬ್ಯಾಂಕ್ ಗ್ಯಾರಂಟಿಯನ್ನು ನೀಡಲು ತಾನು ಬದ್ದನಾಗಿರುವುದಾಗಿ ಅರ್ಜಿಯಲ್ಲಿ ತಿಳಿಸಿರುತ್ತಾರೆ. ಅದರಂತೆ ಜಪ್ತುಪಡಿಸಿಕೊಳ್ಳಲಾದ ಮದ್ಯ , ಬಿಯರಿನ ಮೌಲ್ಯ ಮಾಪನವನ್ನು ಕೆ.ಎಸ್.ಬಿ.ಸಿ.ಎಲ್ ಘಟಕದ ಮುಖ್ಯಸ್ಥರಿಂದ ತನಿಖಾಧಿಕಾರಿಗಳ ಮುಖಾಂತರ ಪಡೆದುಕೊಂಡು ಮೌಲ್ಯ ರೂ.65,617/– ಮೊತ್ತಕ್ಕೆ ಬ್ಯಾಂಕ್ ಗ್ಯಾರೆಂಟಿಯನ್ನು ಒದಗಿಸುವ ಹಾಗೂ ಇತರೆ ಷರತ್ತುಗಳ ಮೇರಗೆ ಜಪ್ತುಪಡಿಸಿ ಕೊಳ್ಳಲಾದ 335.535 ಲೀ ಮದ್ಯ ಮತ್ತು 125.450 ಲೀ ಬಿಯರ್ ಇವುಗಳನ್ನು ಅಂದಿನ ಅದಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ದ.ಕ ಜಿಲ್ಲೆ ಮಂಗಳೂರು ಇವರ ಅದೇಶ ಸಂ: ಎಂಎನ್‌ಜಿ:ಇಐಬಿ:ಡಿಟಿಸಿಆರ್:208:2007–08, ದಿ:19–3–2008ರಲ್ಲಿ ಮದ್ಯಂತರ ಬಿಡುಗಡೆಗೊಳಿಸಿ ಅದೇಶಿಸಲಾಗಿರುತ್ತದೆ.

ಪ್ರಕರಣದ ತನಿಖೆ ಮುಂದುವರಿಸಿರುವ ಅಬಕಾರಿ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ–1 ಇವರ ದಿ:28–12–2007ರ ತನಿಖಾ ವರದಿಯೊಂದಿಗೆ ಮೊಕದ್ದಮೆಯಲ್ಲಿ ವಶಪಡಿಸಿಕೊಳ್ಳಲಾದ 750 ಎಂ.ಎಲ್.ನ 6 ಬಾಟಲ್ ನಕಲಿ ಮದ್ಯಗಳ ಮಾದರಿ ಸೀಸೆಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ ದಿನಾಂಕ: 17–12–2007ರಂದು ಮುಖ್ಯ ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ ದಿನಾಂಕ: 17–12–2007ರಂದು ಮುಖ್ಯ ರಾಸಾಯನಿಕ ತಜ್ಞರು ಮತ್ತು ಕರ್ನಾಟಕ ಸರಕಾರದ ಪದನಿಮಿತ್ತ ಸಹಾಯಕ ರಾಸಾಯನ ಪರೀಕ್ಷಕರು, ಕೇಂದ್ರ ರಾಸಾಯನಿಕ ಪ್ರಯೋಗಾಲಯ ಅಬಕಾರಿ ಇಲಾಖೆ, ಬೆಂಗಳೂರು ಇವರಿಂದ ಪಡೆಯಲಾದ ವಿಶ್ಲೇಷಣಾ ವರದಿ ಸಂಖ್ಯೆ: ಸಿಸಿಎಲ್–4891/2007ನ್ನು ಪ್ರಾಧಿಕಾರಕ್ಕೆ ಒಪ್ಪಿಸಿರುತ್ತಾರೆ. ಸದರಿ ರಾಸಾಯನಿಕ ವಿಶ್ಲೇಷಣಾ ವರದಿ ಪ್ರಕಾರ ಜಪ್ತು ಮಾಡಲಾದ ಎಲ್ಲಾ ಮದ್ಯದ ಬಾಟಲಿಗಳಲ್ಲಿ ಮದ್ಯಸಾರದ ಪ್ರಮಾಣ ಅನುಕ್ರಮವಾಗಿ $38.7^0$ ಯು.ಪಿ , $38.2^0$ ಯು.ಪಿ , $33.7^0$ ಯು.ಪಿ ,$31.2^0$ ಯು.ಪಿ , $30.3^0$ ಯು.ಪಿ ಮತ್ತು $25.6^0$ ಯು.ಪಿ ಇದ್ದು, ಕ್ರ.ಸಂ:1 ರಿಂದ 5 ರವರೆಗೆ ಈಥೈಲ್ ಅಲ್ಕೋಹಾಲ್ ಕಂಡುಬಂದಿದ್ದು,ಅವು ಬಾರತ ಮಾನಕ ಬ್ಯೂರೋದ ಮಾನಕಕ್ಕೆ ಅನುಗುಣವಾಗಿರುವುದಿಲ್ಲ ಮತ್ತು ಇದು ನಕಲಿ ಮದ್ಯವಾಗಿರುತ್ತದೆ ಹಾಗೂ ಕ್ರ.ಸಂ:6ರ ಮಾದರಿಯಲ್ಲಿ ಈಥೈಲ್ ಅಲ್ಕೋಹಾಲ್ ಕಂಡುಬಂದಿದ್ದು ಅದು ಮಾನವನ ಸೇವನೆಗೆ ಯೋಗ್ಯವಾಗಿರುತ್ತದೆ ಎಂದು ದೃಢ ಪತ್ರದೊಂದಿಗೆ ವರದಿ ಒಪ್ಪಿಸಿರುತ್ತಾರೆ. ಆದುದರಿಂದ ಸನ್ನದುದಾರರು ನಕಲಿ ಮದ್ಯವನ್ನು ಸನ್ನದು ಆವರಣದಲ್ಲಿದ್ದ ಅಸಲಿ ಮದ್ಯದೊಂದಿಗೆ ಪಾನೀಕರಿಗೆ ಮಾರಾಟ ಮಾಡಲು ಯತ್ನಿಸಿರುವುದರಿಂದ ಸನ್ನದುದಾರರ ವಿರುದ್ದ ಕಾನೂನು ರೀತ್ಯಾ ಕ್ರಮ ಜರುಗಿಸಬೇಕೆಂದು ಕೋರಿರುತ್ತಾರೆ.

ಸನ್ನದುದಾರರು ತನ್ನ ಸನ್ನದಿನ ವ್ಯವಹಾರದಲ್ಲಿ ಅಸಲಿ ಮದ್ಯದೊಂದಿಗೆ ನಕಲಿ ಮದ್ಯ ಸಂಗ್ರಹಣೆ ಹಾಗೂ ವಿತರಣೆಗೆ ಅಸ್ಪದ ನೀಡಿರುವುದು ಮೇಲಿನ ಎಲ್ಲಾ ದಾಖಲಾತಿಗಳಿಂದ ಸಾಭೀತಾಗಿರುವುದರಿಂದ, ಸದರಿ ಪ್ರಕರಣಕ್ಕೆ ಸಂಬಂಧಿಸಿ ಸಾಕ್ಷಿದಾರರನ್ನು ಹಾಗೂ ದಾಖಲೆಗಳನ್ನು ಅವಲಂಭಿಸಿ ದಿನಾಂಕ: 12–06–2009ರಂದು ಶ್ರೀ.ಸಂಜೀವ ಪಿ.ಎಂ. ಬಿನ್: ಸುಬ್ಬ ಪೂಜಾರಿ (ಸಿಎಲ್–9 ಸನ್ನದುದಾರರು) ನಶಾ ಬಾರ್ ಅಂಡ್ ರೆಸ್ಟೋರೆಂಟ್, ಡೋರ್ ನಂ: 1–78(1) S.N.34/8, ಕುಪ್ಪೆಪದವು, ಮಂಗಳೂರು ಇವರಿಗೆ ಕರ್ನಾಟಕ ಅಬಕಾರಿ ಕಾಯಿದೆ 1965 ಕಾಲಂ 43(ಬಿ) ರೀತ್ಯಾ ಕಾರಣ ಕೇಳಿ ನೊಟೀಸನ್ನು ನೀಡಲಾಗಿದ್ದು, ಸದ್ರಿ ಕಾರಣ ಕೇಳಿ ನೊಟೀಸಿಗೆ ಸಂಬಂಧಿಸಿದಂತೆ ಶ್ರೀ ಸಂಜೀವ ಪಿ.ಎಂ. ಇವರು ಈ ಕಛೇರಿಗೆ ದಿನಾಂಕ: 25–06–2009ರಂದು ಲಿಖಿತ ಉತ್ತರವನ್ನು ಸಲ್ಲಿಸಿ, ತನ್ನಿಂದಾಗಲೀ ಅಥವಾ ತನ್ನ ನೌಕರರಿಂದಾಗಲೀ ಯಾವುದೇ ಸನ್ನದು ಷರತ್ತುಗಳು ಉಲ್ಲಂಘನೆಯಾಗಿರುವುದಿಲ್ಲ ಹಾಗೂ ಫಿರ್ಯಾದುದಾರರು ತನ್ನ ವಿರುದ್ದ ಸುಳ್ಳು ಮೊಕದ್ದಮೆಯನ್ನು ದಾಖಲಿಸಿರುತ್ತಾರೆ. ಸದ್ರಿ ನಕಲಿ ಎಂದು ಹೇಳಲಾಗಿರುವ ಮದ್ಯಕ್ಕೂ ನನಗೂ ಯಾವುದೇ ರೀತಿಯ ಸಂಬಂಧವಿಲ್ಲದಿರುವುದರಿಂದ ಜಪ್ತು ಪಡಿಸಿಕೊಳ್ಳಲಾದ ಅಸಲಿ ಮದ್ಯ ಮತ್ತು ಬಿಯರಿನ ಮುಟ್ಟುಗೋಲು ಪ್ರಕ್ರಿಯೆಯನ್ನು ಕೈಬಿಟ್ಟು ಸದ್ರಿ ದಾಸ್ತಾನನ್ನು ಹಿಂತಿರುಗಿಸಲು ಕೋರಿರುತ್ತಾರೆ.

ನಂತರ ಪ್ರಕರಣದ ಮುಟ್ಟುಗೋಲು ಪ್ರಕ್ರಿಯೆಯನ್ನು ಕೈಗೊಂಡು ವಿಚಾರಣೆಯನ್ನು ಪ್ರಾಧಿಕಾರದಲ್ಲಿ ಪ್ರಾರಂಭಿಸಿ ಅಭಿಯೋಗದ ಪರ ಪ್ರಕರಣದ ಫಿರ್ಯಾದುದಾರ/ ತನಿಖಾಧಿಕಾರಿಗಳಾದ ಶ್ರೀ.ಕುಶಾಲಪ್ಪ , ಅ.ಉ.ನಿ ಮಂಗಳೂರು ದಕ್ಷಿಣ ವಲಯ–1 ಮತ್ತು ಶ್ರೀ.ಚೆನ್ನಿಯಪ್ಪ ನಾಯ್ಕ್ ಅ.ರ ಹಾಗೂ ರಕ್ಷಣಾ ಪರ ಸಾಕ್ಷಿದಾರರಾದ ಶ್ರೀ.ಸಂಜೀವ ಪಿ.ಎಂ.ಬಿನ್:ಸುಬ್ಬ ಪೂಜಾರಿ (ಸಿಎಲ್–9 ಸನ್ನದುದಾರರು) ನಶಾ ಬಾರ್ ಅಂಡ್ ರೆಸ್ಟೋರೆಂಟ್, ಡೋರ್ ನಂ: 1–78(1) S.N.34/8,ಕುಪ್ಪೆಪದವು, ಮಂಗಳೂರು ಇವರು ಗಳ ವಿಚಾರಣೆಯನ್ನು ನಡೆಸಲಾಗಿರುತ್ತದೆ.

ಪ್ರಕರಣದ ವಿಚಾರಣೆಯನ್ನು ಆರಂಭಿಸಿ ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

**1) ಮೊದಲನೇ ವಿವಾದಾಂಶ: ದಿ:** 9–12–2007–ರಂದು ಶ್ರೀ.ಸಂಜೀವ ಪಿ.ಎಂ, ಸಿಎಲ್–9 ಸನ್ನದುದಾರರು ಇವರ ಮಾಲೀಕತ್ವದ ಸನ್ನದು ಸಂ:ಎಸ್‌ಡಿಕೆ:ಐಎಂಎಲ್ :11: 2007–08 ದಿ:9–12–2007ರ ಸನ್ನದು ಆವರಣದಲ್ಲಿ ನಕಲಿ ಮದ್ಯವನ್ನು ದಾಸ್ತಾನು ಇರಿಸಿಕೊಂಡು ಮಾರಾಟ ಮಾಡಲಾಗಿದೆಯೇ?

**2) ಎರಡನೇ ವಿವಾದಾಂಶ:** ಸದರಿ ನಕಲಿ ಮದ್ಯ ಮಾರಾಟವು ಸನ್ನದುದಾರರ ಅರಿವಿಗೆ ಬಾರದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆಯೇ ಹಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತೆ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿ ಮತ್ತು ಸನ್ನದುದಾರರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

**3) ಮೂರನೇ ವಿವಾದಾಂಶ:** ಜಪ್ತುಪಡಿಸಿಕೊಳ್ಳಲಾದ 3.670 ಲೀ ನಕಲಿ ಮದ್ಯ ಮಾನವ ಸೇವನೆಗೆ ಯೋಗ್ಯವಾಗಿಲ್ಲ ಎಂದು ದೃಡೀಕೃತವಾಗಿದೆಯೇ? ಹಾಗೂ ಸನ್ನದು ಆವರಣದಿಂದ ಜಪ್ತುಪಡಿಸಿಕೊಳ್ಳಲಾದ ಅಸಲಿ 335.535 ಲೀ. ಮದ್ಯ ಹಾಗೂ 125.450 ಲೀ ಬಿಯರನ್ನು ಅಬಕಾರಿ ಕಾಯ್ದೆಯಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಸಕರಾತ್ಮಕವಾಗಿ ,ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸ–1:–**

ಶ್ರೀ.ಕುಶಾಲಪ್ಪ ಗೌಡ, ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಮಂಗಳೂರು ದಕ್ಷಿಣ ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು,ದಿ:9–12–2010ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷ್ಯ ನೀಡುತ್ತಾ ಮಂಗಳೂರು ತಾಲೂಕು ಕುಪ್ಪೆಪದವು ಎಂಬಲ್ಲಿಯ ಕ.ಸಂ:1–78(1) ಎಸ್‌ಎನ್/34–8ರಲ್ಲಿರುವ ನಶಾ ಬಾರ್ ಅಂಡ್ ರೆಸ್ಟೋರೆಂಟ್ ಸನ್ನದು ಸಂ:ಎಸ್‌ಡಿಕೆ:ಐಎಂಎಲ್: 11:07–08 ಆವರಣಕ್ಕೆ ಸಿಬ್ಬಂಧಿ ಜೊತೆ ತಪಾಸಣೆಗಾಗಿ ಭೇಟಿ ನೀಡಿರುವುದು ,ಬೇಟಿ ಸಂದರ್ಭಧಲ್ಲಿ ನೌಕರ ನಾಮೆ ಹೊಂದಿದ್ದ ದಯಾನಂದ ಬಿನ್:ಚಂದಪ್ಪ, ವಿಶ್ವನಾಥ ಬಿನ್:ದರ್ಣಪ್ಪ ಎಂಬವರು ಹಾಜರಿದ್ದು ತಪಾಸಣೆ ಪ್ರಯುಕ್ತ ಬಾರ್ ನಲ್ಲಿದ್ದ ಮದ್ಯದ ಲೆಕ್ಕ ಪುಸ್ತಕ ನೌಕರ ನಾಮ ಮೊದಲಾದ ದಾಖಲಾತಿಗಳನ್ನು ಪಡೆದುಕೊಂಡು ಸನ್ನದು ಆವರಣದಲ್ಲಿದ್ದ ಎಲ್ಲಾ ವಿಧದ ಮದ್ಯ ಮತ್ತು ಬಿಯರಿನ ಬಾಟಲಿಗಳನ್ನು ಪರಿಶೀಲಿಸಲಾಗಿ ಲೆಕ್ಕದ ಪುಸ್ತಕಕ್ಕೂ, ಭೌತಿಕ ದಾಸ್ತಾನಿಗೂ ತಾಳೆ ನೋಡಲಾಗಿ ತಾಳೆ ಕಂಡುಬಾರದೇ ಇರುವುದು, ದಿ:8–12–2007ರಿಂದ ಮದ್ಯದ ಲೆಕ್ಕ ಪುಸ್ತಕ ಬರೆಯದೇ ಇರುವುದು, 165 .710 ಲೀ ಮದ್ಯ ಮತ್ತು 38.390 ಲೀ ಬಿಯರ್ ಲೆಕ್ಕದ ಪುಸ್ತಕದ ಪ್ರಮಾಣಕ್ಕೆ ಕಡಿಮೆ ದಾಸ್ತಾನು ಕಂಡು ಬಂದಿರುವುದು, ಸನ್ನದಿನ ಕ್ಯಾಶ್ ಕೌಂಟರಿನ ಬದಿಯಲ್ಲಿದ್ದ ರಟ್ಟಿನ ಪೆಟ್ಟಿಗೆಯೊಂದರಲ್ಲಿ ಮೈಸೂರು ಲ್ಯಾನ್ಸರ್ ಎಂದು ಲೇಬಲ್ ಹಚ್ಚಿರುವ 750 ಮಿಲಿ ಬಾಟಲಿಯಲ್ಲಿ 600 ಮಿಲಿ ಮದ್ಯ ,ವಿಂಡ್ಸರ್ ವಿಸ್ಕಿ ಎಂಬ ಲೇಬಲ್ ಹಚ್ಚಿದ 750 ಮಿಲಿ 1 ಬಾಟಲಿಯಲ್ಲಿ 690 ಮಿಲಿ ಮದ್ಯ, ಮ್ಯಾಜಿಕ್ ಜಿನ್ ಎಂಬ ಲೇಬಲ್ ಹಚ್ಚಿದ 750 ಮಿಲಿಯ ಬಾಟಲಿಯಲ್ಲಿ 550 ಮಿಲಿ ಮದ್ಯ ,ಓಲ್ಡ್ ಮಾಂಕ್ ರಮ್ ಎಂಬ ಲೇಬಲ್ ಹಚ್ಚಿದ 750 ಮಿಲಿ 1 ಬಾಟಲಿಯಲ್ಲಿ 690 ಮಿಲಿ ಮದ್ಯ ಹಾಗೂ ಜಿಡಿ ವಿಸ್ಕಿ ಎಂಬ ಲೇಬಲ್ ಹೆಚ್ಚಿದ 750 ಎಂಎಲ್ ನ ಬಾಟಲಿಯಲ್ಲಿ 400 ಮಿಲಿ ಮದ್ಯ ಈ ರೀತಿಯಾಗಿ ಒಟ್ಟು 6 ಬಾಟಲಿಗಳಲ್ಲಿ ನಕಲಿ ಮದ್ಯ ಇರುವುದನ್ನು ಪತ್ತೆ ಹಚ್ಚಿ ,ಸದ್ರಿ ಬಾಟಲಿಗಳಿಗೆ ಯಾವುದೇ ಭದ್ರತಾ ಚೀಟಿ ಆಳವಡಿಸದೇ ಇರುವುದರಿಂದ ಅಲ್ಕೋಮೀಟರು ಸಹಾಯದಿಂದ ಸದ್ರಿ ಮದ್ಯವನ್ನು ಪ್ರತ್ಯೇಕ ಪ್ರತ್ಯೇಕವಾಗಿ ಪರಿಶೀಲನೆ ನಡೆಸಿದಾಗ ಅವುಗಳಲ್ಲಿ ಮದ್ಯದ ಅಂಶವು ಸರ್ಕಾರ ನಿಗಧಿಪಡಿಸಿದ ಪ್ರಮಾಣಕ್ಕಿಂತ ಕಡಿಮೆ ಕಂಡುಬಂದಿರುವುದು , ಈ ಬಗ್ಗೆ ನೌಕರರಾದ ದಯಾನಂದ ,ವಿಶ್ವನಾಥ ಇವರುಗಳನ್ನು ವಿಚಾರಣೆ ಮಾಡಲಾಗಿ ಸದ್ರಿ ಮದ್ಯ ನಕಲಿ ಮದ್ಯ ಎಂದು ತಿಳಿಸಿರುವ ಮೇರೆಗೆ ದೊರೆತ ಸದ್ರಿ ಮದ್ಯ ನಕಲಿ ಮದ್ಯವೆಂದು ಖಚಿತಪಡಿಸಿಕೊಂಡು ಸದ್ರಿ ಮದ್ಯ ಇರುವ ಬಾಟಲಿಗಳ ಮುಚ್ಚಳಗಳ ಮೇಲೆ ಬಟ್ಟೆ ದಾರ ಕಟ್ಟಿ ಸೀಲು ಹಾಕಿ ಅರೋಪಿಗಳ ಸಹಿ ಇರುವ ಚೀಟಿ ಅಂಟಿಸಿ ಸ್ಥಳದಲ್ಲಿಯೇ ಮಾದರಿ ಸೀಲು ಮಹಜರು ತಯಾರಿಸಲಾಗಿರುವುದಾಗಿ, ಸರ್ಕಾರಕ್ಕೆ ತೆರಿಗೆ ಪಾವತಿಸಿರುವ ಅಸಲಿ ಮದ್ಯದೊಂದಿಗೆ ನಕಲಿ ಮದ್ಯವನ್ನು ತುಂಬಿಸಿಟ್ಟು ಅಬಕಾರಿ ಕಾಯಿದೆ ಉಲ್ಲಂಘನೆ ಮಾಡಿದ ಪ್ರಯುಕ್ತ ಸನ್ನದು ಆವರಣದಲ್ಲಿದ್ದ ತೆರಿಗೆ ಪಾವತಿಸಿದ್ದ 335–535 ಲೀ ಮದ್ಯ ಮತ್ತು 125.450 ಲೀ ಬಿಯರನ್ನು ಜಪ್ತುಮಾಡಿ ಅರೋಪಿಗಳನ್ನು ದಸ್ತಗಿರಿ ಮಾಡಿರುವುದಾಗಿ ವಿವರಣೆಯುಕ್ತ ಸಾಕ್ಷಿ ನುಡಿಯುತ್ತ ಸ್ಥಳ ಮಹಜರನ್ನು ನಿಶಾನೆ ಪಿ–1 ಎಂದು, ಅದರ ಮೇಲಿನ ಸಹಿಯನ್ನು ನಿಶಾನೆ ಪಿ–1 ಎ ಎಂದು ಗುರುತಿಸಿರುತ್ತಾರೆ. ನಂತರ ಕಛೇರಿಯಲ್ಲಿ ಈ ಬಗ್ಗೆ ಅರೋಪಿಗಳ ವಿರುದ್ಧ ಅಬಕಾರಿ ಕಾಯಿದೆಯಡಿ ಮೊಕದ್ದಮೆ ದಾಖಲಿಸಿರುವುದಾಗಿ ಸಾಕ್ಷಿ ನೀಡಿ, ಪ್ರ.ವ.ವ ಯನ್ನು ನಿಶಾನೆ ಪಿ–2 ಎಂದು ಅದರ ಮೇಲಿನ ಸಹಿಯನ್ನು ನಿಶಾನೆ ಪಿ–2 ಎ ಎಂದು ಗುರುತಿಸಿರುತ್ತಾರೆ. ಅರೋಪಿಗಳನ್ನು ಅದೇ ದಿನ ನ್ಯಾಯಾಲಯಕ್ಕೆ ರಿಮಾಂಡ್ ವರದಿಯೊಂದಿಗೆ ಹಾಜರುಪಡಿಸಿರುವುದು , ಜಪ್ತು ಸೊತ್ತುಗಳನ್ನು ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರ ಮುಂದೆ ಹಾಜರುಪಡಿಸಿ ಸದ್ರಿ ಸೊತ್ತುಗಳನ್ನು ವಶದಲ್ಲಿಟ್ಟುಕೊಳ್ಳಲು ಅನುಮತಿ ಕೋರಿರುವುದು ಸದ್ರಿ ಕೋರಿಕೆ ಪತ್ರವನ್ನು ನಿಶಾನೆ ಪಿ–3 ಎಂದು ಗುರುತಿಸಿರುತ್ತಾರೆ. ಮೊಕದ್ದಮೆಯಲ್ಲಿ ಮಾದರಿ ತೆಗೆದ ಬಾಟಲಿಗಳನ್ನು ಶ್ರೀ.ಹರೀಶ ಕುಮಾರ ಅ.ರ ಇವರ ಮುಖೇನಾ ಮುಖ್ಯ ರಸಾಯನಿಕ ತಜ್ಞರು, ಬೆಂಗಳೂರು ಇವರ ಕಛೇರಿಗೆ ವಿಶ್ಲೇಷಣೆಗೆ ಕಳುಹಿಸಿ ದಿ:18–12–2007ರಂದು ಪಡೆದ ವರದಿಯನ್ನು ನಿಪಿ–4 ಎಂದು ಗುರುತಿಸಿರುತ್ತಾರೆ. ವಿಶ್ಲೇಷಣೆಗೆ ಒಳಪಡಿಸಲಾದ ಕ್ರ.ಸಂ:1 ರಿಂದ 5ರವರೆಗಿನ ಮದ್ಯವು ಭಾರತದ ಮಾನಕ ಬ್ಯೂರೊಗೆ ಅನುಗುಣವಾಗಿಲ್ಲದೇ ನಕಲಿ ಮದ್ಯವಾಗಿರುತ್ತದೆ. ಕ್ರ.ಸಂ:6ರ ಮದ್ಯದಲ್ಲಿ ಅಲ್ಕೋಹಾಲ್ ಕಂಡುಬಂದಿದ್ದು ಅದು ಮಾನವನ ಸೇವನೆಗೆ ಯೋಗ್ಯವಾಗಿರುತ್ತದೆ ಎಂದು , ಸನ್ನದುದಾರರಾದ 3ನೇ ಅರೋಪಿ ಮಾನ್ಯ ಪ್ರಿನ್ಸಿಪಾಲ್ ಸೆಷನ್ಸ್ ಜಡ್ಜ್ ನ್ಯಾಯಾಲಯ ಇದರ ನ್ಯಾಯಾಲಯದ ಮುಂದೆ ಹಾಜರಾಗಿ ನಿರೀಕ್ಷಣಾ ಜಾಮೀನು ಪಡೆದ ಮೇರೆಗೆ ಬಿಡುಗಡೆಗೊಳಿಸಲಾಗಿರುತ್ತದೆ , ಅರೋಪಿಗಳ ಅಪರಾಧವನ್ನು ಕಲೆಹಾಕಿ ಮಾನ್ಯ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತೇನೆ ಎಂದು ಸಾಕ್ಷಿ ನೀಡಿರುತ್ತಾರೆ.

**ಪಾಟೀ ಸವಾಲು:–** ರಕ್ಷಣಾ ಪರ ವಕೀಲರು ಪ್ರಾ.ಸಾ–1ರವರನ್ನು ದಿ:14–7–2011ರಂದು ಪಾಟೀ ಸವಾಲು ನಡೆಸಿರುತ್ತಾರೆ.

**ಪ್ರಾ.ಸ–2:–**

ಶ್ರೀ.ಚೆನ್ನಿಯಪ್ಪ ನಾಯಕ್, ಅಬಕಾರಿ ರಕ್ಷಕ, ಮಂಗಳೂರು ದಕ್ಷಿಣ ವಲಯ–1 ಇವರು ದಿ:14–7–2011ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿಯನ್ನು ನೀಡಿತ್ತಾ, ಪ್ರಾ.ಸಾ –1ರವರ ಜೊತೆ ಶ್ರೀ.ಸಂಜೀವ ಪಿ.ಎಂ ಇವರು ಹೊಂದಿರುವ ಮಂಗಳೂರು ತಾಲೂಕಿನ ಕಕ್ಕೆಪದವು ಎಂಬಲ್ಲಿ ಹೊಂದಿರುವ ನಶಾ ಬಾರ್ ಸನ್ನದು ಆವರಣಕ್ಕೆ ತಪಾಸಣೆಗೆ ಹೋದ ಸಂದರ್ಭದಲ್ಲಿ ಸನ್ನದು ಅವರಣದೊಳಗಡೆ ಅಸಲಿ ಮದ್ಯ ಮತ್ತು ಬಿಯರಿನ ಜೊತೆ ನಕಲಿ ಮದ್ಯ ಪತ್ತೆಯಾಗಿರುವ ಬಗ್ಗೆ ಹೇಳಿಕೆಗಳನ್ನು ನೀಡಿ ಪ್ರಾ.ಸಾ–1ರವರಿಂದ ಗುರುತಿಸಲಾದ ಮಹಜರು ಪ್ರತಿಯನ್ನು ನೋಡಿ ಅದರಲ್ಲಿರುವ ತನ್ನ

ಸಹಿಯನ್ನು ನಿ.ಪಿ–1 ಬಿ ಎಂದು ಗುರುತಿಸಿ ಸನ್ನದು ನೌಕರರಾದ ವಿಶ್ವನಾಥ ಮತ್ತು ದಯಾನಂದ ಇವರನ್ನು ದಸ್ತಗಿರಿಮಾಡಲಾಯಿತು ಎಂದು ಸಾಕ್ಷಿ ನೀಡುತ್ತಾ ರಕ್ಷಣಾ ಪರ ವಕೀಲರ ಅಡ್ಡ ಸವಾಲಿಗೆ ಉತ್ತರಿಸುತ್ತಾರೆ.

**ಡಿಡಬ್ಲ್ಯೂ–1:–**

ಶ್ರೀ.ಸಂಜೀವ ಪಿ.ಎಂ.ಬಿನ್: ಸುಬ್ಬ ಪೂಜಾರಿ (ಸಿಎಲ್–9 ಸನ್ನದುದಾರರು) ನಶಾ ಬಾರ್ ಅಂಡ್ ರೆಸ್ಟೋರೆಂಟ್, ಡೋರ್ ನಂ: 1–78(1) S.N.34/8,ಕುಪ್ಪೆಪದವು, ಮಂಗಳೂರು ಇವರು ದಿ:29–9–2011ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ರಕ್ಷಣಾ ಸಾಕ್ಷಿ ನುಡಿಯುತ್ತಾ, ತಾನು ನಾಶಾ ವೈನ್ ಪಾರ್ಲರ್ ನ ಮಾಲೀಕರಾಗಿರುತ್ತೇನೆ. ಅದು ಮಂಗಳೂರು ತಾಲೂಕು ಕುಪ್ಪೆಪದವು ಎಂಬಲ್ಲಿರುತ್ತದೆ. ತಾನು 15 ದಿವಸಗಳಿಂದ ಸದ್ರಿ ಬಾರನ್ನು ನಡೆಸುತ್ತಿದ್ದು ಪ್ರತಿ ವರ್ಷ ಲೈಸನ್ಸ್ ನವೀಕರಿಸುತ್ತೇನೆ. ಬಾರಿನ ವ್ಯವಹಾರವು ಬೆಳಿಗ್ಗೆ 10–00ರಿಂದ ರಾತ್ರಿ 10–30ರವರೆಗೆ ತೆರೆದಿರುತ್ತದೆ. ಆದಿನ ಅಬಕಾರಿ ನಿರೀಕ್ಷಕರು ತಮ್ಮ ಬಾರಿಗೆ ಬೆಳಿಗ್ಗೆ 10–00 ಗಂಟೆಗೆ ಬಂದಿದ್ದರು, ತಪಾಸಣೆ ಮಾಡುವಾಗ ಮದ್ಯ, ಬಿಯರ್ ಭೌತಿಕ ಪ್ರಮಾಣ ಕಡಿಮೆ ಇರಲಿಲ್ಲ, ತಪಾಸಣೆ ಸಂದರ್ಭದಲ್ಲಿ ಬಾರಿನ ಒಳಗಡೆ ಯಾವುದೇ ನಕಲಿ ಮದ್ಯ ದೊರೆತಿರುವುದಿಲ್ಲ, ತಾನಾಗಲೀ ತನ್ನ ಸಿಬ್ಬಂಧಿಯಾಗಲೀ ಯಾವುದೇ ಅವವ್ಯಹಾರ ಮಾಡಿರುವುದಿಲ್ಲ, ಈ ಬಗ್ಗೆ ಮೂಡಬಿದ್ರೆ ನ್ಯಾಯಾಲಯದಲ್ಲಿ ದಾಖಲಾದ ಮೊಕದ್ದಮೆ 2 ವರ್ಷಗಳ ಹಿಂದೆ ಅಂತ್ಯಗೊಂಡಿದೆ. ತೀರ್ಪಿನ ದೃಡೀಕೃತ ಪತ್ರವನ್ನು ಪ್ರಾದಿಕಾರದ ಮುಂದೆ ಹಾಜರುಪಡಿಸಲಾಗಿದ್ದು ಅದನ್ನು ನಿಶಾನೆ ಡಿ–1 ಎಂದು ಗುರುತಿಸಿರುತ್ತಾರೆ. ತಪಾಸಣೆ ಸಂದರ್ಭದಲ್ಲಿ ಬಾರಿನಿಂದ ಒಟ್ಟು 335.535 ಲೀ ಮದ್ಯ ಹಾಗೂ 125.450 ಲೀ ಬಿಯರನ್ನು ಸ್ವಾಧೀನಪಡಿಸಿರುತ್ತಾರೆ, ಅಬಕಾರಿ ಅಧಿಕಾರಿಗಳು ಅಂಕಿ ಅಂಶಗಳಿಗೋಸ್ಕರ ಸುಳ್ಳು ಮೊಕದ್ದಮೆ ದಾಖಲಿಸಿರುತ್ತಾರೆ, ತಾನು ಅರ್ಥಿಕ ಸಂಕಷ್ಟದಲ್ಲಿದ್ದು ಸದ್ರಿ ಮದ್ಯವನ್ನು ಮುಟ್ಟುಗೋಲು ಹಾಕಿಕೊಳ್ಳದೇ ಖಾಯಂ ಆಗಿ ತನಗೆ ಬಿಡುಗಡೆಗೊಳಿಸ ಬೇಕೆಂದು ಪ್ರಾರ್ಥಿಸಿರುತ್ತಾರೆ.

**ಪಾಟೀ ಸವಾಲು ಎಡಿಪಿರವರಿಂದ :–**

ಸರ್ಕಾರಿ ಅಭಿಯೋಗ ಉಪ ನಿರ್ದೇಶಕರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಇಲಾಖೆಯವರು ಅಂಕಿ ಅಂಶಗಳಿಗೋಸ್ಕರ ಪ್ರಕರಣ ದಾಖಲಿಸಿರುತ್ತಾರೆ ಎಂದು ಮುಖ್ಯ ವಿಚಾರಣೆಯಲ್ಲಿ ಹೇಳಿದ ಬಗ್ಗೆ ಅವರಲ್ಲಿ ಯಾವುದೇ ವೈಯಕ್ತಿಕ ಮಾಹಿತಿ ಇಲ್ಲದೇ ಕೇವಲ ಊಹೆಯಾಗಿರುತ್ತದೆ. ನಕಲಿ ಮದ್ಯ ಬಾರಿನ ತಪಾಸಣೆ ಕಾಲದಲ್ಲಿ ಸಿಗಲಿಲ್ಲ ಎಂಬ ಕಾರಣ ಹೇಳಿ ಮಾನ್ಯ ನ್ಯಾಯಾದೀಶರು ಕ್ರಿಮಿನಲ್ ಕೇಸಿನಲ್ಲಿ ಬಿಡುಗಡೆಗೊಳಿಸಿರುತ್ತಾರೆ ಎಂಬ ತೀರ್ಪನ್ನು ಖುದ್ದಾಗಿ ಓದಿರುತ್ತೇನೆ, ಸಂಶಯದ ಲಾಭ ನೀಡಿ ಮಾನ್ಯ ನ್ಯಾಯಾಧೀಶರು ಕೇಸನ್ನು ಖುಲಾಸೆಗೊಳ್ಳಿರುತ್ತಾರೆ ಎಂದರೆ ಸರಿಯಲ್ಲ, ಪಿರ್ಯಾದುದಾರರಾದ ಕುಶಾಲಪ್ಪ ಗೌಡ, ಅಉನಿ ರವರು ಬಾರಿಗೆ ಧಾಳಿ ಮಾಡಿದ ದಿನದಿಂದ ಸುಮಾರು 3 ವರ್ಷಗಳ ಹಿಂದಿನ ಪರಿಚಯರಸ್ಥರಾಗಿದ್ದು ಅಬಕಾರಿ ಇಲಾಖೆಯಲ್ಲಿ ಬಹಳ ಪ್ರಾಮಾಣಿಕ ಅಧಿಕಾರಿಯಾಗಿರುತ್ತಾರೆ ಎಂದರೆ ಸರಿ, ಹಾಗೂ ಅವರಿಗೆ ನನ್ನಲ್ಲಿ ಯಾವುದೇ ವೈಯಕ್ತಿಕ ದ್ವೇಷ ಇಲ್ಲದೇ ಇರುವುದರಿಂದ ತಮ್ಮ ಕರ್ತವ್ಯದ ಭಾಗವಾಗಿ ಕೇಸು ಮಾಡಿರುತ್ತಾರೆ ಎಂದರೆ ನಿಜ, ಪ್ರಕರಣದಲ್ಲಿ ವೈಯಕ್ತಿಕ ಹಿತಾಸಕ್ತಿ ಇದ್ದಿಲ್ಲ ಎಂದರೆ ಸರಿ ಹಾಗೂ ತನ್ನ ವಿರುದ್ದ ಸಮಾಜದಲ್ಲಿ ಯಾರಿಗೂ ದ್ವೇಷ ಇರುವುದಿಲ್ಲ, ಧಾಳಿ ಸಂದರ್ಭದಲ್ಲಿ ದಿ:8–12–2007ರಿಂದ ಮದ್ಯದ ಲೆಕ್ಕದ ಪುಸ್ತಕ ಪರಿಶೀಲಿಸಿ ಬರೆಯದೇ ಇರುವುದು ಕಂಡು ಬಂದಿರುತ್ತದೆ ಎಂದರೆ ಸರಿಯಲ್ಲ, 165.710 ಮದ್ಯ ಮತ್ತು 35.390 ಲೀಟರು ಬಿಯರ್ ಲೆಕ್ಕ ಪುಸ್ತಕದ ಪ್ರಮಾಣಕ್ಕಿಂತ ಬೌತಿಕ ಪ್ರಮಾಣದಲ್ಲಿ ಕಡಿಮೆ ಇತ್ತು ಎಂದರೆ ಸರಿಯಲ್ಲ, ಧಾಳಿ ಸಂದರ್ಭ ಬಾರ್ ನಲ್ಲಿ ನೌಕರರಾದ ದಯಾನಂದ ಮತ್ತು ವಿಶ್ವನಾಥ ಹಾಜರಿದ್ದರು ಎಂದರೆ ಸರಿ, ಕ್ಯಾಶ್ ಕೌಂಟರ್ ಬಳಿ ನೌಕರ ವಿಶ್ವನಾಥ ಎಂಬವರ ಕಾಲಿನ ಬಳಿ ಪೆಟ್ಟಿಗೆಯೊಂದರಲ್ಲಿ 750 ಎಂಎಲ್ ನ 6 ಬಾಟಲಿಗಳಲ್ಲಿ ತಲಾ 600 ಮಿಲಿ, 690 ಮಿಲಿ, 600 ಮಿಲಿ, 550 ಮಿಲಿ, 690 ಮಿಲಿ, 400 ಮಿಲಿ ಮದ್ಯ ಈ ರೀತಿಯಾಗಿ ಒಟ್ಟು 6 ಬಾಟಲಿಗಳಲ್ಲಿ ಭದ್ರತಾ ಚೀಟಿ ಅಳವಡಿಸದೇ ಇರುವಂತಹ ನಕಲಿ ಮದ್ಯ ಇತ್ತು ಎಂದರೆ ಸರಿಯಲ್ಲ, ಅಲ್ಕೋ ಮೀಟರು ಸಹಾಯದಿಂದ ಸದ್ರಿ ಮದ್ಯದ ತೀಕ್ಷ್ಣತೆ ಅಂಶ ಕಡಿಮೆ ಇದ್ದು ನಕಲಿ ಮದ್ಯ ಎಂದು ಗೊತ್ತಾಯ್ತು ಎಂದರೆ ಸರಿಯಲ್ಲ, ತನ್ನ ಬಾರನ್ನು ತಪಾಸಣೆ ಮಾಡಿದ ಬಗ್ಗೆ ನಿ.ಪಿ–1 ರಂತೆ ವಿವರವಾದ ಮಹಜರನ್ನು ತಯಾರಿಸಿರುತ್ತಾರೆ ಎಂದರೆ ಸರಿ, ಅಬಕಾರಿ ಇಲಾಖೆಯವರು ನನ್ನ ಬಾರ್‌ನಿಂದ ವಶಪಡಿಸಿ ಕೊಂಡ ನಕಲಿ ಮದ್ಯವನ್ನು ನನಗೆ ಬಿಟ್ಟುಕೊಡಬೇಕೆಂದು ಸುಳ್ಳು ಸಾಧನೆ ಮಾಡುತ್ತಿದ್ದೇನೆಂದು ಸೂಚಿಸುವುದು ಸರಿಯಲ್ಲ, ಅಬಕಾರಿ ಇಲಾಖೆರವರ ತಪಾಸಣೆಯಿಂದ ನನಗೆ ಅರ್ಥಿಕ ಸಂಕಷ್ಟ ಉಂಟಾಗಿಲ್ಲ ಎಂದರೆ ಸರಿಯಲ್ಲ, ಮುಖ್ಯ ವಿಚಾರಣೆಯಲ್ಲಿ ಅಬಕಾರಿ ಇಲಾಖೆಯವರು ತನ್ನ ವಿರುದ್ದ ಅಂಕಿ ಅಂಶಗಳಿಗೆ ಪ್ರಕರಣ ದಾಖಲಿಸಿದ್ದಾರೆ ಎಂದು ಹೇಳುವುದು ಸರಿಯಲ್ಲ ಎಂದು ಸೂಚಿಸುವುದು ಸುಳ್ಳು ಎಂದು ಪಾಟೀ ಸವಾಲಿಗೆ ಉತ್ತರಿಸುತ್ತಾರೆ.

ಪ್ರಕರಣದ ಎಲ್ಲಾ ದಾಖಲಾತಿಗಳನ್ನು ಮತ್ತು ಪ್ರಾ.ಸ– 1 ಮತ್ತು 2 ಹಾಗೂ ರಕ್ಷಣಾ ಪರ ಸಾಕ್ಷಿದಾರರಾದ ಡಿಡಬ್ಲ್ಯೂ–1ರ ಸಾಕ್ಷಿ ವಿಚಾರಣೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರಿ ಅಭಿಯೋಜಕರ ಹಾಗೂ ರಕ್ಷಣಾ ಪರ ವಕೀಲರ ವಾದ ವಿವಾದವನ್ನು ಅಲಿಸಿ ಪ್ರಕರಣವನ್ನು ಅಂತಿಮ ಅದೇಶ ಹೊರಡಿಸುವುದು ಸೂಕ್ತವೆಂದು ಪರಿಗಣಿಸಲಾಯಿತು.

ಆರೋಪಿತರಾದ ಶ್ರೀ ಸಂಜೀವ ಪಿ.ಎಂ, ಸಿಎಲ್–9 ಸನ್ನದುದಾರರು ಸನ್ನದು ಆವರಣದಲ್ಲಿ ಗ್ರಾಹಕರಿಗೆ ರಹದಾರಿ ಮೂಲಕ ಪಡೆದ ಗುಣಮಟ್ಟದ ಮದ್ಯವನ್ನು ಮಾರಾಟ ಮಾಡುವುದು ಅವರ ಬದ್ಧತೆಯಾಗಿದ್ದು, ಆದರೆ ಅವರಿಗೆ ನೀಡಿದ ಸನ್ನದನ್ನು ದುರ್ಬಳಕೆ ಮಾಡಿಕೊಂಡು ಗ್ರಾಹಕರಿಗೆ ಇಂತಹ ನಕಲಿ ಮದ್ಯವನ್ನು ಸಂಗ್ರಹಿಸಿಕೊಂಡು, ಅಸಲಿ ಮದ್ಯದ ಜೊತೆಗೆ ಮಾರಾಟ ಮಾಡುವ ಉದ್ದೇಶ ಹೊಂದಿದ್ದು ಗ್ರಾಹಕರಿಗೆ ವಂಚಿಸಿ, ಅವರ ಆರೋಗ್ಯಕ್ಕೆ ಹಾಗೂ ಜೀವಕ್ಕೆ ಹಾನಿ ಮಾಡುವಂತಹ ಕೃತ್ಯ ಎಸಗಿರುವುದು ಅಲ್ಲದೇ ಸರ್ಕಾರದ ಅದಾಯಕ್ಕೆ ನಷ್ಟ ಉಂಟುಮಾಡಿರುವುದು ದಾಖಲಿಸಿರುವ ಪ್ರಕರಣದ ದಾಖಲೆಗಳಿಂದ ಸಾಭೀತಾಗಿರುತ್ತದೆ.

ಸನ್ನದುದಾರರು ಅಸಲಿ ಅಧಿಕೃತ ಮದ್ಯದೊಂದಿಗೆ ನಕಲಿ ಮದ್ಯವನ್ನು ಹೊಂದಿ ನಕಲಿ ಮದ್ಯವನ್ನು ಅಧಿಕೃತ ಮದ್ಯದೊಂದಿಗೆ ಮಾರಾಟ ಮಾಡುತ್ತಿದ್ದಲ್ಲಿ, ಸನ್ನದು ಆವರಣದಲಿದ್ದ ಎಲ್ಲಾ ಮದ್ಯವನ್ನು ಜಪ್ತುಮಾಡಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕಾಗಿದೆ.

ಸನ್ನದುದಾರರು ತನ್ನ ಸನ್ನದಿನ ವ್ಯವಹಾರದಲ್ಲಿ ಅಸಲಿ ಮದ್ಯದೊಂದಿಗೆ ನಕಲಿ ಮದ್ಯ ಸಂಗ್ರಹಣೆ ಮಾಡಿ ಹಾಗೂ ಗ್ರಾಹಕರಿಗೆ ಮಾರಾಟ ಮಾಡಲು ಇಟ್ಟುಕೊಂಡಿರುವುದು ಮೇಲಿನ ಎಲ್ಲಾ ದಾಖಲಾತಿಗಳಿಂದ ಸಾಭೀತಾಗಿರುವುದರಿಂದ ಹಾಗೂ ಜಪ್ತುಪಡಿಸಿಕೊಂಡ ಮದ್ಯ ವನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43ಎ ರೀತ್ಯಾ ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದಾಗಿ ಸನ್ನದುದಾರರಾದ ಶ್ರೀ.ಸಂಜೀವ ಪಿ.ಎಂ, ಸಿಎಲ್–9 ಸನ್ನದುದಾರರು, ನಶಾ ಬಾರ್, ಕುಪ್ಪೆ ಪದವು,ಮಂಗಳೂರು ಇವರಿಗೆ ದಿ:12–06–09 ರಂದು ನೀಡಲಾದ ಕಾರಣ ಕೇಳಿ ನೋಟಿಸಿಗೆ ಅವರು ನೀಡಿರುವ ಉತ್ತರ ಸಮಂಜಸವಾಗಿರುವುದಿಲ್ಲ.

ಸನ್ನದು ಆವರಣದಲ್ಲಿ ಅನಧಿಕೃತವಾಗಿ ದಾಸ್ತಾನು ಇದ್ದ ನಕಲಿ ಮದ್ಯವನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಲಾಗಿದ್ದು, ವಿಶ್ಲೇಷಣಾ ವರದಿಯಲ್ಲಿ ಎಲ್ಲಾ ಮದ್ಯದ ಬಾಟಲಿಗಳಲ್ಲಿ ಮದ್ಯಸಾರದ ಪ್ರಮಾಣ ಅನುಕ್ರಮವಾಗಿ $38.7^0$ ಯು.ಪಿ , $38.2^0$ ಯು.ಪಿ $33.7^0$ ಯು.ಪಿ ,$31.2^0$ ಯು.ಪಿ , $30.3^0$ ಯು.ಪಿ ಮತ್ತು $25.6^0$ ಯು.ಪಿ ಇದ್ದು, ಕ್ರ.ಸಂ:1 ರಿಂದ 5 ರವರೆಗೆ ಈಥೈಲ್ ಅಲ್ಕೋಹಾಲ್ ಕಂಡುಬಂದಿದ್ದು,ಅವು ಬಾರತ ಮಾನಕ ಬ್ಯೂರೋದ ಮಾನಕಕ್ಕೆ ಅನುಗುಣವಾಗಿರುವುದಿಲ್ಲ ಮತ್ತು ಇದು ನಕಲಿ ಮದ್ಯವಾಗಿರುತ್ತದೆ ಈ ರಸಾಯನಿಕ ವಿಶ್ಲೇಷಣಾ ವರದಿಯಲ್ಲಿನ ಕ್ರ.ಸಂ:6ರ ಮಾದರಿಯಲ್ಲಿ ಈಥೈಲ್ ಅಲ್ಕೋಹಾಲ್ ಕಂಡುಬಂದಿದ್ದು ಅದು ಮಾನವನ ಸೇವನೆಗೆ ಯೋಗ್ಯವಾಗಿರುತ್ತದೆ ಎಂದು ಅಭಿಪ್ರಾಯ ನೀಡಿರುತ್ತಾರೆ. ಕ್ರ.ಸಂ:1ರಿಂದ 5 ರವರೆಗಿನ ಮದ್ಯವು ನಕಲಿ ಮದ್ಯ ಎಂಬುವುದು ಸ್ಪಷ್ಟವಾಗಿರುತ್ತದೆ. ಸನ್ನದುದಾರರು ಸನ್ನದು ಆವರಣದಲ್ಲಿ ರಹದಾರಿ ಮೂಲಕ ಪಡೆದಿರುವ ಅಧಿಕೃತ ಮದ್ಯವನ್ನು ಮಾತ್ರ ಮಾರಾಟ ಮಾಡಬೇಕಾಗಿತ್ತು. ಆದರೆ ಅಧಿಕ ಲಾಭವನ್ನು ಪಡೆಯುವ ಉದ್ದೇಶದಿಂದ ಪಾನೀಕರ ಅರೋಗ್ಯಕ್ಕೆ ಮಾರಕ ವಾಗುವಂತಹ ಹಾಗೂ ಜೀವ ಹಾನಿಗೆ ಎಡೆಮಾಡಿ ಕೊಡುವಂತಹ ನಕಲಿ ಮದ್ಯವನ್ನು ಅಧಿಕೃತ ಮದ್ಯದೊಂದಿಗೆ ಮಾರಾಟ ಮಾಡಿ ಸನ್ನದುದಾರರು ಅವರಿಗೆ ನೀಡಿದ ಸನ್ನದನ್ನು ದುರ್ಬಳಿಕೆ ಮಾಡಿರುವುದು ಸಾಭೀತಾಗಿರುತ್ತದೆ. ಸನ್ನದುದಾರರು ಸನ್ನದು ಆವರಣದಲ್ಲಿ ಅಸಲಿ ಮದ್ಯದೊಂದಿಗೆ ನಕಲಿ ಮದ್ಯವನ್ನು ಅವರಾಗಲೀ ಅವರ ನೌಕರರಾಗಲೀ ಮಾರಾಟ ಮಾಡಿ ಕರ್ನಾಟಕ ಅಬಕಾರಿ ಕಾಯಿದೆಯನ್ನು ಉಲ್ಲಂಘನೆ ಮಾಡಿರುವುದಿಲ್ಲ ಎಂಬುದನ್ನು ಸಾಕ್ಷಾದಾರಗಳೊಂದಿಗೆ ಸಾಭೀತುಪಡಿಸಬೇಕಾಗಿದ್ದು ಈ ನಿಟ್ಟಿನಲ್ಲಿ ಯಾವುದೇ ಪ್ರಯತ್ನ ಮಾಡಿರುವುದಿಲ್ಲ. ಅಲ್ಲದೇ ಸನ್ನದುದಾರರು ಪ್ರಾಧಿಕಾರದ ನ್ಯಾಯಾಲಯದಲ್ಲಿ ಹಾಜರಾಗಿ ರಕ್ಷಣಾ ಹೇಳಿಕೆಗಳನ್ನು ನೀಡಿರುವರಾದರೂ ಅಭಿಯೋಜಕರ ಅಡ್ಡ ಸವಾಲಿಗೆ ತನ್ನ ಹೇಳಿಕೆ ಗಳಿಗೆ ಸಾಮ್ಯತೆ ಇರುವಂತಂಹ ಉತ್ತರ ನೀಡಿರುವುದಿಲ್ಲ. ಕಾರಣ ಅರೋಪಿತರು ಸಂಶಯದ ಲಾಭವನ್ನು ಪಡೆಯಲು ಅನರ್ಹರಾಗಿರುವುದರಿಂದ ದಿನಾಂಕ: 9–12–2007 –ಲಂದು ತಪಾಸಣಾ ಸಂದರ್ಭದಲ್ಲಿ ಸನ್ನದು ಆವರಣದಲ್ಲಿ ಜಪ್ತು ಪಡಿಸಿದ ಅಧಿಕೃತ 335.535 ಲೀಟರ್ ಮದ್ಯ ಹಾಗೂ 125.450 ಲೀಟರ್ ಬೀರ್ (ಅನುಬಂಧ–1ರಲ್ಲಿ ನಮೂದಿಸಿದಂತೆ) ಹಾಗೂ ಅವರಣದಲ್ಲಿದ್ದ 3.670 ಲೀಟರು ಅಕ್ರಮ ನಕಲಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಕರ್ನಾಟಕ ಸರ್ಕಾರದ ಆದೇಶ ಸಂ: ಎಫ್ ಡಿ:06:ಪಿಇಎಸ್:07 ದಿ:13–7–2007ರ ಕಲಂ 3ರಲ್ಲಿ **Portable Liqour and Rectified Sprit** (1) All confiscated Liquor in sealed bottles or in any other receptacles shall be destroyed ಎಂದು ಆದೇಶಿಸಿರುವುದನ್ನು ಪರಿಗಣಿಸಿ ಮೇಲಿನಂತೆ ಮೊಕದ್ದಮೆಯಲ್ಲಿ ಜಪ್ತು ಪಡಿಸಿಕೊಂಡು ಮುಟ್ಟುಗೋಲು ಹಾಕಿಕೊಳ್ಳಲಾದ 3.670 ಲೀ ನಕಲಿ ಮದ್ಯ (ಮಾದರಿ ಹೊರತುಪಡಿಸಿ) ವನ್ನು ನಾಶಪಡಿಸಬಹುದಾಗಿರುತ್ತದೆ. ಈ ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ಅಸಲಿ ಮದ್ಯ 335.535 ಮತ್ತು ಬಿಯರ್ 125.450 ಲೀಟರನ್ನು ಈಗಾಗಲೇ ಸನ್ನದುದಾರರ ವಶಕ್ಕೆ ಮಧ್ಯಂತರ ಆದೇಶದಲ್ಲಿ ಬಿಡುಗಡೆಗೊಳಿಸಿರುವುದರಿಂದ ಈ ಮಧ್ಯಂತರ ಅದೇಶದಲ್ಲಿನ ಷರತ್ತಿನಂತೆ ಮದ್ಯ ಮತ್ತು ಬಿಯರಿನ ಮೌಲ್ಯಕ್ಕೆ ನೀಡಲಾದ ರೂ.65,617/– ಮೊತ್ತದ ಬ್ಯಾಂಕ್ ಗ್ಯಾರೆಂಟಿಯನ್ನು ಮುಟ್ಟುಗೋಲು ಹಾಕಿಕೊಂಡು ಸರ್ಕಾರದ ಖಾತೆಗೆ ಹೊಂದಾಣಿಕೆ ಮಾಡಿಕೊಳ್ಳಬೇಕಾಗಿರುತ್ತದೆ. ಆದುದರಿಂದ ಈ ಆದೇಶ.

**ಆದೇಶ ಸಂಖ್ಯೆ : ಎಸ್‌ಡಿಕೆ/ಡಿಟಿಸಿಆರ್/208/2007–08, ದಿನಾಂಕ: 08–12–2011**

ಬಿ.ವಿ.ಹೂವಪ್ಪ ಗೌಡ, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ)ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ನಿರೀಕ್ಷಕರು, ಜಾರಿ ಮತ್ತು ತನಿಖೆ, ಮಂಗಳೂರು ದಕ್ಷಿಣ ಇವರ ತಕ್ಷೀರು ಸಂಖ್ಯೆ:10/2007–08, ದಿನಾಂಕ:9–12–2007ರಂದು ವಶಪಡಿಸಿಕೊಂಡ ಈ ಕೆಳಕಂಡ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

**I – ಅನಧಿಕೃತವಾಗಿ ಶೇಖರಿಸಿ ಇಡಲಾದ ನಕಲಿ ಮದ್ಯ**

1) ಮೈಸೂರು ಲ್ಯಾನ್ಸರ್ ವಿಸ್ಕಿ ಎಂಬ ಲೇಬಲ್ ಹೊಂದಿದ 750 ಮಿಲಿಯದ ಬಾಟಲಿಯಲ್ಲಿ 650 ಮಿಲಿ ಮದ್ಯ (ಎಲ್ಲಾ ಪ್ರಮಾಣವನ್ನು ಮಾದರಿ ತೆಗೆಯಲಾಗಿದೆ)

2) ವಿಂಡ್ಸರ್ ವಿಸ್ಕಿ ಎಂಬ ಲೇಬಲ್ ಹೊಂದಿದ 750 ಮಿಲಿಯದ ಬಾಟಲಿಯಲ್ಲಿ 690 ಮಿಲಿ ಮದ್ಯ (ಎಲ್ಲಾ ಪ್ರಮಾಣವನ್ನು ಮಾದರಿ ತೆಗೆಯಲಾಗಿದೆ)

3) ಮ್ಯಾಜಿಕ್ ಜಿನ್ ಎಂಬ ಲೇಬಲ್ ಹೊಂದಿದ 750 ಮಿಲಿಯದ ಬಾಟಲಿಯಲ್ಲಿ 690 ಮಿಲಿ ಮದ್ಯ (ಎಲ್ಲಾ ಪ್ರಮಾಣವನ್ನು ಮಾದರಿ ತೆಗೆಯಲಾಗಿದೆ)

4) ಬೋನಿ ಸ್ಕಾಟ್ ವಿಸ್ಕಿ ಎಂಬ ಲೇಬಲ್ ಹೊಂದಿದ 750 ಮಿಲಿಯದ ಬಾಟಲಿಯಲ್ಲಿ 550 ಮಿಲಿ ಮದ್ಯ (ಎಲ್ಲಾ ಪ್ರಮಾಣವನ್ನು ಮಾದರಿ ತೆಗೆಯಲಾಗಿದೆ)

5) ಓಲ್ಡ್ ಮಾಂಕ್ ರಂ ಎಂಬ ಲೇಬಲ್ ಹೊಂದಿದ 750 ಮಿಲಿಯದ ಬಾಟಲಿಯಲ್ಲಿ 690 ಮಿಲಿ ಮದ್ಯ (ಎಲ್ಲಾ ಪ್ರಮಾಣವನ್ನು ಮಾದರಿ ತೆಗೆಯಲಾಗಿದೆ)

6) ಜೆ.ಡಿ ವಿಸ್ಕಿ ಎಂಬ ಲೇಬಲ್ ಹೊಂದಿದ 750 ಮಿಲಿಯದ ಬಾಟಲಿಯಲ್ಲಿ 400 ಮಿಲಿ ಮದ್ಯ (ಎಲ್ಲಾ ಪ್ರಮಾಣವನ್ನು ಮಾದರಿ ತೆಗೆಯಲಾಗಿದೆ)

ಮೇಲಿನ ನಕಲಿ ಮದ್ಯದಲ್ಲಿ ಎಲ್ಲಾ ಪ್ರಮಾಣವನ್ನು ರಸಾಯನಿಕ ವಿಶ್ಲೇಷಣೆಗೆ ಒಳಪಡಿಸಿರುವುದರಿಂದ ನಾಶಪಡಿಸಲು ಯಾವುದೇ ನಕಲಿ ಮದ್ಯದ ಅಂಶ ಉಳಿದಿರುವುದಿಲ್ಲ.

II. ಮದ್ಯಂತರ ಬಿಡುಗಡೆಗೊಳಿಸಲಾದ 335.535 ಲೀಟರ್ ಮದ್ಯ ಹಾಗೂ 125.450 ಲೀಟರ್ ಬೀರ್ (ಮದ್ಯ ಮತ್ತು ಬೀಯರಿನ ವಿವರಗಳ ಪಟ್ಟಿ ಅನುಬಂಧ–1ರಲ್ಲಿ ನಮೂದಿಸಿದಂತೆ) ನ ಭದ್ರತೆಯಾಗಿ ಸನ್ನದುದಾರ/ಅರೋಪಿತರಿಂದ ಮದ್ಯಂತರ ಅದೇಶದ ಷರತ್ತಿಗನುಗುಣವಾಗಿ ಪಡೆಯಲಾದ ರೂ. 65617/– ಮೊತ್ತದ ಬ್ಯಾಂಕ್ ಗ್ಯಾರೆಂಟಿಯನ್ನು ಮುಟ್ಟುಗೋಲು ಹಾಕಿಕೊಂಡು ಅಡಕವಾಗಿರುವ ಮೊತ್ತವನ್ನು ಸರ್ಕಾರದ ಖಾತೆಗೆ ಹೊಂದಾಣಕೆ ಮಾಡಿಕೊಳ್ಳಲು ಅದೇಶಿಸಿದೆ.

ಈ ಆದೇಶದ ಪಾಲನೆ ಕುರಿತು ಕೈಗೊಂಡ ಕ್ರಮದ ವಿವರವಾದ ವರದಿಯನ್ನು ಈ ಪ್ರಾಧಿಕಾರಕ್ಕೆ ಒಪ್ಪಿಸಲು ಅಬಕಾರಿ ನಿರೀಕ್ಷಕರು, ಮಂಗಳೂರು ಪೂರ್ವ ವಲಯ–II ಇವರಿಗೆ ಆದೇಶಿಸಿದೆ.

ಈ ಆದೇಶವನ್ನು ದಿ:08–12–2011ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ಬಿ.ವಿ.ಹೂವಪ್ಪ ಗೌಡ,**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:–**

ಪ್ರಾ.ಸಾ –1 : ಶ್ರೀ.ಕುಶಾಲಪ್ಪ ಗೌಡ,ಅ ಉನಿ, ಮಂಗಳೂರು ದಕ್ಷಿಣ ವಲಯ–I

ಪ್ರಾ.ಸಾ –2 : ಶ್ರೀ.ಚೆನ್ನಿಯಪ್ಪ ನಾಯ್ಕ್ ,ಅ.ರ .ಮಂಗಳೂರು ದ.ವ–1

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:–**

ನಿಶಾನೆ ಪಿ–1 : – ಮಹಜರು ಪ್ರತಿ

ನಿಶಾನೆ ಪಿ–1ಎ :– ಅದರ ಮೇಲಿನ ಸಹಿ (ಪ್ರಾ.ಸಾ–1)

ನಿಶಾನೆ ಪಿ–1ಬಿ :– ಅದರ ಮೇಲಿನ ಸಹಿ (ಪ್ರಾ.ಸಾ–2)

ನಿಶಾನೆ ಪಿ–2 :– ಪ್ರಥಮ ವರ್ತಮಾನ ವರದಿ

ನಿಶಾನೆ ಪಿ–2ಎ :– ಅದರ ಮೇಲಿನ ಸಹಿ

ನಿಶಾನೆ ಪಿ–3 :– ಅಧಿಕೃತ ಅಧಿಕಾರಿಗಳಿಗೆ ಬರೆದ ವರದಿ

ನಿಶಾನೆ ಪಿ–4 :– ರಾಸಾಯನಿಕ ವಿಶ್ಲೇಷಕರ ವರದಿ

**ಅನುಬಂಧ–III**

**ಎದುರುದಾರರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು :–**

**ಡಿಡಬ್ಲ್ಯೂ–1 :–** ಶ್ರೀ.ಸಂಜೀವ ಪಿ.ಎಂ.ಬಿನ್:ಸುಬ್ಬ ಪೂಜಾರಿ (ಸಿಎಲ್–9 ಸನ್ನದುದಾರರು) ನಶಾ ಬಾರ್ ಅಂಡ್ ರೆಸ್ಟೋರೆಂಟ್, ಡೋರ್ ನಂ:1–78(1) S.N.34/8 ಕುಪ್ಪೆಪದವು, ಮಂಗಳೂರು

**ಅನುಬಂಧ–IV**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು :–**

ನಿಶಾನೆ ಡಿ–1 :– ಮಾನ್ಯ ಜೆ.ಎಂ.ಎಫ್.ಸಿ ನ್ಯಾಯಾಲಯ,ಮೂಡಬಿದ್ರೆ ಇದರ ಸಿ.ಸಿ ನಂ:59/2008ರ ತೀರ್ಪು ಆದೇಶ

**ಬಿ.ವಿ.ಹೂವಪ್ಪ ಗೌಡ,**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

**ಅನುಬಂಧ–1**

| ಕ್ರ.ಸಂ | ಸನ್ನದು ಆವರದಲ್ಲಿ ದಾಸ್ತಾನು ಇದ್ದ ಮದ್ಯದ ಹೆಸರು | ಮದ್ಯದ ಪ್ರಮಾಣ (ಬಾಟಲಿಗಳಲ್ಲಿ) | | | ಒಟ್ಟು ಲೀಟರು ಗಳಲ್ಲಿ |
|---|---|---|---|---|---|
| | | **750 ML** | **375 ML** | **180 ML** | |
| 1 | ಬ್ಯಾಗ್ ಪೈಪರ್ ವಿಸ್ಕಿ | 3 | – | 35 | 8.550 |
| 2 | ಬೋನಿಸ್ ಸ್ಕಾಟ್ ವಿಸ್ಕಿ | 9 | – | 53 | 16.290 |
| 3 | ಡಿ.ಎಸ್.ಪಿ ವಿಸ್ಕಿ | 2 | 20 | 45 | 17.100 |
| 4 | ಮೆಕ್ ಡೆವೆಲ್ ನಂ.1 ವಿಸ್ಕಿ | 13 | 1 | 45 | 18.225 |
| 5 | ಮೈಸೂರು ಲ್ಯಾನ್ಸರ್ ವಿಸ್ಕಿ | 58 | 47 | 3 | 61.665 |
| 6 | ವೆಲ್ಲಿಂಗ್ ಟನ್ ವಿಸ್ಕಿ | 6 | – | 27 | 9.360 |
| 7 | ಒರಿಜಿನಲ್ ಚಾಯ್ಸ್ ವಿಸ್ಕಿ | – | 10 | 14 | 6.270 |
| 8 | ರಾಯಲ್ ಚಾಲೆಂಜ್ ವಿಸ್ಕಿ | – | – | 49 | 8.820 |
| 9 | ಮ್ಯಾಜಿಕ್ ವಿಸ್ಕಿ | 12 | – | 48 | 17.640 |
| 10 | ಜಿ.ಡಿ . ವಿಸ್ಕಿ | 15 | – | 319 | 68.670 |
| 11 | ವಿಂಡ್ಸರ್ ವಿಸ್ಕಿ | 6 | – | 38 | 11.340 |
| 12 | ಒಲ್ಡ್ ಮಂಕ್ ತ್ರಿಬಲ್ ಎಕ್ಸ್ ರಂ | 14 | 31 | 12 | 24.285 |
| 13 | ರಾಯಲ್ ತ್ರಿಬಲ್ ಎಕ್ಸ್ ರಂ | 21 | – | 13 | 18.090 |
| 14 | ಮ್ಯಾಜಿಕ್ ಜಿನ್ | 1 | 14 | – | 6.000 |
| 15 | ಗೋಲ್ಕಂಡ ರೂಬಿ ವೈನ್ | 1 | – | – | 0.750 |
| 16 | ಹೆರಿಟೇಜ್ ವೈನ್ | 13 | 6 | 35 | 18.300 |
| 17 | ಗ್ಯಾಗರಿಗ್ ವಡ್ಕಾ | 14 | – | 32 | 16.260 |
| 18 | ರಾಮ್ ನೋವಾ ಒಡ್ಕ | – | – | 44 | 7.920 |
| | **ಒಟ್ಟು** | **188** | **129** | **812** | **335.535** |

| **ಬಿಯರ್** | | **650 ML** | **330 ML** | **ಒಟ್ಟು ಲೀಟರುಗಳಲ್ಲಿ** |
|---|---|---|---|---|
| 1 | ಯು.ಬಿ. ಬಿಯರ್ | 47 | 22 | 37.810 |
| 2 | ಕಿಂಗ್ ಫಿಶರ್ ಬಿಯರ್ | 18 | – | 11.700 |
| 3 | ಕಿಂಗ್ ಫಿಶರ್ ಸ್ಟ್ರಾಂಗ್ ಬಿಯರ್ | 37 | – | 24.050 |
| 4 | ನಾಕ್‌ಟ್ ಬೀರ್ | 25 | – | 16.250 |
| 5 | ನಾಕ್‌ಟ್ ಪಿಂಟ್ ಬೀರ್ | – | 71 | 23.430 |
| 6 | ಲಂಡನ್ ನಂ:1 ಬೀರ್ | – | 37 | 12.210 |
| **ಒಟ್ಟು** | | **127** | **130** | **125.450** |

**ಬಿ.ವಿ.ಹೂವಪ್ಪ ಗೌಡ,**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

**ಪಿ.ಆರ್. 1420**

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ–ವಿಭಾಗ ನಂ–2, ವಿಜಾಪೂರ.**

**ಸಂಖ್ಯೆ:ಕಾ.ಅ.ಬಿ–2:ಕಾ.ನ.ಪ:ಮಪ್ರ:ಎಸ್.ಆರ್.ನಂ:137/2011, ದಿನಾಂಕ :01–12–2011**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| ಶ್ರೀಮತಿ ಮಮತಾಜ ಸೈಫನ್‌ಸಾಬ ಮುಲ್ಲಾ, ಮತ್ತು ಇತರರು, ಸಾ:ಬಸವನಬಾಗೇವಾಡಿ, ಜಿಲ್ಲೆ:ವಿಜಾಪುರ. | 1) ಡಾ:ಸೋಮಶೇಖರ ಹತ್ತರ್ಕಿ, ಅಶ್ವಿನಿ ಸ್ಕ್ಯಾನಿಂಗ್ ಸೆಂಟರ್, ಸಾ: ಬಸವನಬಾಗೇವಾಡಿ,<br>2) ಶ್ರೀಮತಿ ಸುಷ್ಮಾ ಗಂಡ ಸೋಮಶೇಖರ ಹತ್ತರ್ಕಿ ಅಶ್ವಿನಿ ಸ್ಕ್ಯಾನಿಂಗ್ ಸೆಂಟರ್, ಸಾ: ಬಸವನಬಾಗೇವಾಡಿ, |

**ಕರೆಯಾಜ್ಞೆ**

ಮೇಲೆ ನಮೂದಿಸಿದ ಅರ್ಜಿದಾರರು ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ, 1923ರ ಅಡಿಯಲ್ಲಿ ನಿಮ್ಮ ವಿರುದ್ಧ ಈ ನ್ಯಾಯಾಲಯದಲ್ಲಿ ದಾವಾ ಅರ್ಜಿ ಹಾಗೂ ಅದರ ಪ್ರತಿಯನ್ನು ಸಲ್ಲಿಸುತ್ತಾ ಅದರಲ್ಲಿ ಶ್ರೀ ಸೈಫನ್‌ಸಾಬಮುಲ್ಲಾ ಇವರು ಉದ್ಯೋಗದಲ್ಲಿದ್ದಾಗ ಹಾಗೂ ಉದ್ಯೋಗದಿಂದ ಉಂಟಾದ ಅಪಘಾತದಿಂದ ಮರಣ ಹೊಂದಿರುತ್ತಾರೆಂದು, ಅದರ ಪರಿಹಾರ ಧನಕ್ಕಾಗಿ ಕೋರಿ ಅರ್ಜಿ ದಾಖಲು ಮಾಡಿರುತ್ತಾರೆ. ದಿನಾಂಕ: –03–01–2012 ರಂದು ಮಧ್ಯಾಹ್ನ 3–00 ಗಂಟೆಗೆ ಸದರಿ ಅರ್ಜಿಯಲ್ಲಿದ್ದ ಭೌತಿಕ ಅಂಶಗಳ ಬಗ್ಗೆ ಉತ್ತರಿಸಲು ನೀವು ಖುದ್ದಾಗಿ ಅಥವಾ ನಿಮ್ಮ ಪರವಾಗಿ ಯಾರಾದರೂ ವಕೀಲರಿಗೆ ಅಥವಾ ನಿಮ್ಮಿಂದ ಅಧಿಕಾರ ಹೊಂದಿದ ವ್ಯಕ್ತಿಗೆ ಈ ನ್ಯಾಯಾಲಯದಲ್ಲಿ ಹಾಜರಾಗಲು ಆದೇಶಿಸಲಾಗಿದೆ. ಅಂದು ನಿಮ್ಮ ರಕ್ಷಣೆಯ ಸಾಕ್ಷ್ಯಾಧಾರ ಹಾಗೂ ದಾಖಲಾತಿಗಳೊಂದಿಗೆ, ದ್ವಿಪ್ರತಿಯಲ್ಲಿ ಲಿಖಿತ ಹೇಳಿಕೆಯನ್ನು ಸಲ್ಲಿಸುವುದು. ಸದರಿ ದಿನಾಂಕದಂದು ನೀವು ಗೈರು ಹಾಜರಿಯಾದಲ್ಲಿ ನಿಮ್ಮ ಗೈರು ಹಾಜರಾತಿಯಲ್ಲಿ ಮುಂದಿನ ವಿಚಾರಣೆ ನಡೆಸಲಾಗುವುದೆಂದು ಈ ನೋಟೀಸು ನೀಡಲಾಗಿದೆ. ತಾವು ಅಪಘಾತದ ಜವಾಬ್ದಾರಿ ಒಪ್ಪುವುದಾದರೆ ಕನಿಷ್ಟ ಪರಿಹಾರ ಮೊತ್ತವನ್ನು ಠೇವಣಿ ಮಾಡುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಪ–ವಿಭಾಗ–2, ವಿಜಾಪೂರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ–ವಿಭಾಗ ನಂ–2, ವಿಜಾಪೂರ.**

**ಸಂಖ್ಯೆ:ಕಾ.ಅ.ಬಿ–2:ಕಾ.ನ.ಪ:ಮಪ್ರ:ಎಸ್.ಆರ್.ನಂ:131/2011, ದಿನಾಂಕ : 22–11–2011**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| ಶ್ರೀಮತಿ ಗುಡುಮಾ ಗಂಡ ಹುಸೇನಬಾಶಾ ದಫೇದಾರ, ಮತ್ತು ಇತರರು, ಸಾ:ತಾಳಿಕೋಟಿ, ತಾ: ಮುದ್ದೇಬಿಹಾಳ, ಜಿಲ್ಲಾ:ವಿಜಾಪುರ. | 1) ಶ್ರೀ ಮಹ್ಮದ ರಫೀಕ್ ತಂದೆ ಡೊಂಗ್ರಿಸಾಬ, ಸತರಕರ, ಸಾ:ವಾರ್ಡ ನಂ.7, ಆಸರ ಗಲ್ಲಿ, ಮೊಹಲ್ಲಾ, ವಿಜಾಪುರ.<br>2) ದಿ ಮ್ಯಾನೇಜರ್ ಲಿಗಲ್, ರಿಲಾಯನ್ಸ್ ಜನರಲ್ ಇನ್ಸೂರನ್ಸ ಕಂ.ಲಿ. ಗುಲ್ಬರ್ಗಾ. |

**:: ಪ್ರಕಟಣೆ ::**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, **ಶ್ರೀ ಹುಸೇನಬಾಷ ತಂದೆ ರಸೂಲಸಾಬ ದಫೇದಾರ** ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: **11–9–2011 ರಂದು** ಅಪಘಾತಕ್ಕೀಡಾಗಿ ಮೃತ ನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತ ರಾಗಿರುವದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ / ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಪ–ವಿಭಾಗ–2, ವಿಜಾಪೂರ.

**ಪಿ.ಆರ್. 1353**

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ–ವಿಭಾಗ ನಂ–2, ವಿಜಾಪೂರ.**

**ಸಂಖ್ಯೆ:ಕಾ.ಅ.ಬಿ–2:ಕಾ.ನ.ಪ:ಮಪ್ರ:ಎಸ್.ಆರ್.ನಂ:129/2011 ದಿನಾಂಕ : 22–11–2011**

**ಅರ್ಜಿದಾರರು**

ಶ್ರೀ ಯಲಗುರ್ದಪ್ಪ ತಂದೆ ನಿಂಗಪ್ಪ ಅರಸನಾಳ
ಮತ್ತು ಇತರರು, ಸಾ:ಇಟಗಿ,
ತಾ: ಬಿ.ಬಾಗೇವಾಡಿ, ಜಿಲ್ಲಾ:ವಿಜಾಪುರ.

**ಪ್ರತಿವಾದಿಗಳು**

1) ಕೆ.ಮಲ್ಲಿಕಾರ್ಜುನ ತಂದೆ ಕೆ.ವಿ.ಚಲಪತಿ,
ನಂ.43ನೇ ಕ್ರಾಸ್, ಕೆ.ಪಿ.ಎನ್ ಎಕ್ಸಟೈಷನ್, ಬೆಂಗಳೂರು.

2) ದಿ ಮ್ಯಾನೇಜರ್, ಶ್ರೀ ರಾಮ ಜನರಲ್ ಇನ್ಸೂರನ್ಸ ಕಂ.ಲಿ., ವಿಜಾಪುರ.

**:: ಪ್ರಕಟಣೆ ::**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, **ಶ್ರೀ ಹನಮಂತ ಯಲಗುರ್ದಪ್ಪ ಅರಸನಾಳ** ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: 6–11–2010 ರಂದು ಅಪಘಾತಕ್ಕೀಡಾಗಿ ಮೃತ ನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತ ರಾಗಿರುವದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ / ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಪ–ವಿಭಾಗ–2, ವಿಜಾಪೂರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ–ವಿಭಾಗ ನಂ–2, ವಿಜಾಪೂರ.**

**ಸಂಖ್ಯೆ:ಕಾ.ಅ.ಬಿ–2:ಕಾ.ನ.ಪ:ಮಪ್ರ:ಎಸ್.ಆರ್.ನಂ:130/2011 ದಿನಾಂಕ : 22–11–2011**

**ಅರ್ಜಿದಾರರು**

ಶ್ರೀಮತಿ ನಿಂಗಮ್ಮ ಗಂಡ ಪರಮಾನಂದ ಪಾಟೀಲ್,
ಮತ್ತು ಇತರರು, ಸಾ:ಕಾಶಿನಕುಂಟಿ,ತಾ:ಮುದ್ದೇಬಿಹಾಳ
ಮತ್ತು ಶ್ರೀಮತಿ ಸಿದ್ದವ್ವ ಗಂಡ ಶಿವನಗೌಡ ಪಾಟೀಲ್,
ಸಾ:ಜಾಯವಾಡಗಿ, ತಾ: ಬಿ.ಬಾಗೇವಾಡಿ.

**ಪ್ರತಿವಾದಿಗಳು**

1) ಮೆ: ಕಾರ್ಗೊ ವಿಂಗ್ಸ ಮದ್ರಾಸ್ ಪ್ರೈಲಿ.,
ಎಲ್.54,ಎಲ್ ಎಂ ಡಿ ಎ ಟ್ರಕ್ ಟರ್ಮಿನಲ್ ಜಿ ಎನ್ ಟಿ ರೋಡ,
ಮಾಧವರಾಮ, ಚನ್ನೈ, 50 ಪಿ ಪಿ ಮಾರುತಿ ಪಾರ್ಕಿಂಗ್,
ಓಲ್ಡ ಪಾಲಮ ರೋಡ, ಗೋರಗಾಂವ,

2) ಭಾರತಿ ಜನರಲ್ ಇನ್ಸೂರನ್ಸ ಕಂ. ಲಿ., ಬೆಂಗಳೂರು.

**:: ಪ್ರಕಟಣೆ ::**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, **ಶ್ರೀ ಪರಮಾನಂದ @ ಪರಮಪ್ಪ ತಂದೆ ಶಿವನಗೌಡ ಪಾಟೀಲ್** ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: 18–5–2011 ರಂದು ಅಪಘಾತಕ್ಕೀಡಾಗಿ ಮೃತ ನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತ ರಾಗಿರುವದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ / ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು

ಕಾರ್ಮಿಕ ಅಧಿಕಾರಿ, ಉಪ–ವಿಭಾಗ–2, ವಿಜಾಪೂರ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ–ವಿಭಾಗ ನಂ–2, ವಿಜಾಪೂರ.

**ಸಂಖ್ಯೆ:ಕಾ.ಅ.ಬಿ–2:ಕಾ.ನ.ಪ:ಮಪ್ರ:ಎಸ್.ಆರ್.ನಂ:124/2011 ದಿನಾಂಕ : 10–11–2011**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| ಶ್ರೀಮತಿ ಸಪನಾ ಗಂಡ ಧಾನಾಜಿ ಕದಮ ಮತ್ತು ಇತರರು, ಸಾ:ಕದಮವಾಡಿ, ಹಾಲಿ: ಬಂಜಾರಾ ಕ್ರಾಸ್, :ವಿಜಾಪುರ. | 1) ಶ್ರೀ ಆನಂದ ತಂದೆ ಗೋವಿಂದ ಚವ್ಹಾಣ, ಸಾ:ಕದಮವಾಡಿ, ಪೋಸ್ಟ ಧಾಲಗಾಂವ, ತಾ:ಕವಟೆಮಹಾಂಕಾಳ್.<br>2) ದಿ ಬ್ರ್ಯಾಂಚ್ ಮ್ಯಾನೇಜರ್, ದಿ ಓರಿಯಂಟಲ್ ಇನ್ಸೂರನ್ಸ ಕಂ.ಲಿ., ವಿಜಾಪುರ. |

**:: ಪ್ರಕಟಣೆ ::**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ **ಧಾನಾಜಿ ತಂದೆ ಉತ್ತಮ ಕದಮ** ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: 08–06–2010 ರಂದು ಅಪಘಾತಕ್ಕೀಡಾಗಿ ಮೃತ ನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ / ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಪ–ವಿಭಾಗ–2, ವಿಜಾಪೂರ.

ಪಿ.ಆರ್. 1351

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ–ವಿಭಾಗ ನಂ–2, ವಿಜಾಪೂರ.

**ಸಂಖ್ಯೆ:ಕಾ.ಅ.ಬಿ–2:ಕಾ.ನ.ಪ:ಮಪ್ರ:ಎಸ್.ಆರ್.ನಂ:121/2011 ದಿನಾಂಕ : 4–11–2011**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| ಶ್ರೀಮತಿ ತಸ್ಲಿಮ್‌ಬಾನು @ ತಸ್ಲಿಮ್‌ಬಿಬಿ ಗಂಡ ಮಹ್ಮದ ರಬಿಉಲ್ ವ್ಯಾಪಾರಿ @ ಶೇಖ ಮತ್ತು ಇತರರು ವಿಜಾಪುರ. | 1) ಮಿ.ರಯಿಸ್ ಅಹ್ಮದ ನೈಮುಲ್ಲಾ ಶೇಖ ಸಾ: ಎಎಲ್ 69/8, ಎಸ್‌ಇಸಿಟಿ ನಂ.5 ಐರೋಳಿ, ನವಿ ಮುಂಬೈ.<br>2) ದಿ ಬ್ರ್ಯಾಂಚ್ ಮ್ಯಾನೇಜರ್, ಶ್ರೀ ರಾಮ ಜನರಲ್ ಇನ್ಸೂರನ್ಸ ಕಂ.ಲಿ., ಬೆಂಗಳೂರು. |

**:: ಪ್ರಕಟಣೆ ::**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಮಹ್ಮದ @ ರಬಿಉಲ್ ತಂದೆ ಅಬಿಜ್ @ ಹರುನ ವ್ಯಾಪಾರಿ @ ಶೇಖ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: 6–2–2011 ರಂದು ಅಪಘಾತಕ್ಕೀಡಾಗಿ ಮೃತ ನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತ ರಾಗಿರುವದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ / ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು

ಕಾರ್ಮಿಕ ಅಧಿಕಾರಿ, ಉಪ–ವಿಭಾಗ–2, ವಿಜಾಪೂರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ–ವಿಭಾಗ ನಂ–2, ವಿಜಾಪೂರ.**

**ಸಂಖ್ಯೆ:ಕಾ.ಅ.ಬಿ–2:ಕಾ.ನ.ಪ:ಮಪ್ರ:ಎಸ್.ಆರ್.ನಂ:133/2011, ದಿನಾಂಕ : 23–11–2011**

**ಅರ್ಜಿದಾರರು**

ಶ್ರೀಮತಿ ಶ್ರೀದೇವಿ ಗಂಡ ಶರಣಪ್ಪ ಹಾಲೂರ,
ಮತ್ತು ಇತರರು, ಸಾ:ಭಗವತಿ,
ತಾ:ಜಿ:ಬಾಗಲಕೋಟ

**ಪ್ರತಿವಾದಿಗಳು**

1) ಶ್ರೀ ಮಲ್ಲಪ್ಪ ತಂದೆ ಕೊನಪ್ಪ ಮೆಟಿ,
ಸಾ: ಮುಗಳೊಳ್ಳಿ, ತಾ:ಜಿ:ಬಾಗಲಕೋಟ.
2) ದಿ ಮ್ಯಾನೇಜರ್ ಲಿಗಲ್, ಶ್ರೀ ರಾಮ ಜನರಲ್ ಇನ್ಸೂರನ್ಸ ಕಂ.ಲಿ.,
ಬೆಂಗಳೂರು.

**:: ಪ್ರಕಟಣೆ ::**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, **ಶ್ರೀ ಶರಣಪ್ಪ ಬಸವಂತಪ್ಪ ಹಾಲೂರು** ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: 5–4–2011 ರಂದು ಅಪಘಾತಕ್ಕೀಡಾಗಿ ಮೃತ ನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತ ರಾಗಿರುವದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ / ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಪ–ವಿಭಾಗ–2, ವಿಜಾಪೂರ.

**ಪಿ.ಆರ್. 1352**

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ–ವಿಭಾಗ ನಂ–2, ವಿಜಾಪೂರ.**

**ಸಂಖ್ಯೆ:ಕಾ.ಅ.ಬಿ–2:ಕಾ.ನ.ಪ:ಮಪ್ರ:ಎಸ್.ಆರ್.ನಂ:134/2011, ದಿನಾಂಕ : 23–11–2011**

**ಅರ್ಜಿದಾರರು**

ಶ್ರೀ ಲಕ್ಷ್ಮಣ ತಂದೆ ಹನುಮಂತ ಯಂಡಿಗೇರಿ,
ಮತ್ತು ಇತರರು, ಸಾ:ಭಗವತಿ,
ತಾ:ಜಿ:ಬಾಗಲಕೋಟ

**ಪ್ರತಿವಾದಿಗಳು**

1) ಶ್ರೀ ಮಲ್ಲಪ್ಪ ತಂದೆ ಕೊನಪ್ಪ ಮೆಟಿ,
ಸಾ: ಮುಗಳೊಳ್ಳಿ, ತಾ:ಜಿ:ಬಾಗಲಕೋಟ.
2) ದಿ ಮ್ಯಾನೇಜರ್ ಲಿಗಲ್, ಶ್ರೀ ರಾಮ ಜನರಲ್ ಇನ್ಸೂರನ್ಸ ಕಂ.ಲಿ.,
ಬೆಂಗಳೂರು.

**:: ಪ್ರಕಟಣೆ ::**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, **ಶ್ರೀಮತಿ ಲಕ್ಷ್ಮಿಬಾಯಿ ಗಂಡ ಲಕ್ಷ್ಮಣ ಯಂಡಿಗೇರಿ** ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: 5–4–2011 ರಂದು ಅಪಘಾತಕ್ಕೀಡಾಗಿ ಮೃತ ನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತ ರಾಗಿರುವದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ / ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಪ–ವಿಭಾಗ–2, ವಿಜಾಪೂರ

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ–ವಿಭಾಗ ನಂ–2, ವಿಜಾಪೂರ.**

**ಸಂಖ್ಯೆ:ಕಾ.ಅ.ಬಿ–2:ಕಾ.ನ.ಪ:ಮಪ್ರ:ಎಸ್.ಆರ್.ನಂ:135/2011, ದಿನಾಂಕ : 2–12–2011**

**ಅರ್ಜಿದಾರರು**

ಶ್ರೀ ನೀಲುಹೆಮಲಾ ರಾಠೋಡ ಮತ್ತು ಇತರರು
ಸಾ: ಮಿಂಜನಾಳ ತಾಂಡಾ, ತಾ: ಜಿ: ವಿಜಾಪುರ

**ಪ್ರತಿವಾದಿಗಳು**

1) ಶ್ರೀ ಬಾಬು ಕಿಸನ ರಾಠೋಡ, ಸಾ: ಜಲಕೋಟ ವಾಡಿ, ತಾ: ತುಳಜಾಪುರ, ಜಿಲ್ಲೆ : ಉಸ್ಮಾನಾಬಾದ
2) ದಿ ಮ್ಯಾನೇಜರ್, ಚೋಲಮಂಡಲಂ ಎಂ.ಎಸ್. ಜನರಲ್ ಇನ್ಸೂರನ್ಸ ಕಂ.ಲಿ., ಬೆಂಗಳೂರು.

**::ಪ್ರಕಟಣೆ::**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, **ಶ್ರೀ ಸುಭಾಶ ನೀಲು ರಾಥೋಡ** ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: **21–09–2011 ರಂದು** ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ / ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಪ–ವಿಭಾಗ–2, ವಿಜಾಪೂರ.

**ಪಿ.ಆರ್. 1354**

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ–ವಿಭಾಗ ನಂ–2, ವಿಜಾಪೂರ.**

**ಸಂಖ್ಯೆ:ಕಾ.ಅ.ಬಿ–2:ಕಾ.ನ.ಪ:ಮಪ್ರ:ಎಸ್.ಆರ್.ನಂ:96/2011, ದಿನಾಂಕ : 25–08–2011**

**ಅರ್ಜಿದಾರರು**

ಶ್ರೀಮತಿ ತುಳಸಾಬಾಯಿ ಗಂಡ ರಾಜಕುಮಾರ @ ರಾಜೇಂದ್ರ ಮತ್ತು ಇನ್ನೊಬ್ಬರು, ಶಹಾಪೇಟೆ, ಹನುಮಾನ ಹುಡಿ ಹತ್ತಿರ, ತಾ:ಜಿ: ವಿಜಾಪುರ

**ಪ್ರತಿವಾದಿಗಳು**

1) ದಿ ಮ್ಯಾನೇಜರ, ಮೆ: ಲೋಕಮಂಗಲ ಶುಗರ ಎಥೆನಲ್ & ಕಂ., ಜನರೇಷನ್ ಇಂಡಸ್ಟ್ರೀಸ್ ಲಿ., ಪೋಸ್ಟ್: ಬಂಧರಕವಾಟೆ, ತಾ: ಜಿ: ಸೌಥ ಸೋಲಾಪುರ
2) ದಿ ಮ್ಯಾನೇಜರ್, ರಿಲೆಯನ್ಸ್ ಜನರಲ್ ಇನ್ಸೂರನ್ಸ ಕಂ.ಲಿ., ಗುಲಬರ್ಗಾ

**::ಪ್ರಕಟಣೆ::**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, **ಶ್ರೀ ರಾಜಕುಮಾರ @ ರಾಜೇಂದ್ರ ತಳವಾರ @ ಯಾಳಗಿ** ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: **07–11–2008 ರಂದು** ಅಪಘಾತಕ್ಕೀಡಾಗಿ ಮೃತ ನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಪ–ವಿಭಾಗ–2, ವಿಜಾಪೂರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ–ವಿಭಾಗ ನಂ–2, ವಿಜಾಪೂರ.**

**ಸಂಖ್ಯೆ:ಕಾ.ಅ.ಬಿ–2:ಕಾ.ನ.ಪ:ಮಪ್ರ:ಎಸ್.ಆರ್.ನಂ:97/2011, ದಿನಾಂಕ : 27–08–2011**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| ಶ್ರೀಮತಿ ಸೀತಾಬಾಯಿ ಗಂಡ ತಿಪ್ಪಣ್ಣ ಬಳಗಾನೂರ, ಮತ್ತು ಇತರರು, ಸಾ: ಗಾಂಧಿ ನಗರ, ವಿಜಾಪುರ | 1) ಶ್ರೀ ಸಂಜೇಯ ತಂದೆ ರೇವಣ್ಣಸಿದ್ದಪ್ಪ ಹೋರ್ತಿ, ಸಾ: ಬೀರಪ್ಪ ನಗರ, ಇಂಡಿ, ಜಿಲ್ಲೆ : ವಿಜಾಪುರ<br>2) ದಿ ಬ್ರಾಂಚ್ ಮ್ಯಾನೇಜರ್, ದಿ ಓರಿಯಂಟಲ್ ಇನ್ಸೂರನ್ಸ ಕಂ.ಲಿ., ವಿಜಾಪುರ |

**::ಪ್ರಕಟಣೆ::**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, **ಶ್ರೀ ಚಂದ್ರಕಾಂತ ತಿಪ್ಪಣ್ಣ ಬಳಗಾನೂರ** ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: **05–12–2010 ರಂದು** ಅಪಘಾತಕ್ಕೀಡಾಗಿ ಮೃತ ನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತ ರಾಗಿರುವದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ / ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಪ–ವಿಭಾಗ–2, ವಿಜಾಪೂರ.

**ಪಿ.ಆರ್. 958**

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ–ವಿಭಾಗ ನಂ–2, ವಿಜಾಪೂರ.**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ/ಎಸ್.ಆರ್. 106/2011, ದಿನಾಂಕ : 03–10–2011**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| 1. ಮಲ್ಲಯ್ಯ ಮಹದೇವ ಸ್ವಾಮಿ<br>ಭಾಗೀರತಿ ಮಲ್ಲಯ್ಯ ಸ್ವಾಮಿ<br>ಇಬ್ಬರು ಇರುವುದು ವಿಜಾಪುರ | 1) ಸತೀಶ ಅಂಬಾದಾಸ ಡಿಗೆ ವಯ: ವಯಸ್ಕ ಉ. ಮಿನಿ ಲಾರಿ ಮಾಲೀಕರು, ನಂ. ಎಂ.ಹೆಚ್./45/0337, ಸಾ: ವಾಡೆಗಾವ, ತಾ: ಸಾಂಗೋಲಾ.ಜಿ. ಸೋಲ್ಲಾಪುರ<br>2) ಬಜಾಜ್ ಅಲಿಯಾಂಜ ಜನರಲ್ ಇನ್ಸೂರನ್ಸ ಕಂ.ಲಿ., ಮಡಿವಾಳ ಆರ್ಕೆಡ, ಕ್ಲಬ್ ರೋಡ, ಬೆಳಗಾಂ. |

**::ಪ್ರಕಟಣೆ::**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, **ಶ್ರೀ ಪಪ್ಪಯ್ಯಾ ಮಲ್ಲಯ್ಯ ಸ್ವಾಮಿ** ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: **17–09–2009 ರಂದು** ಅಪಘಾತಕ್ಕೀಡಾಗಿ ಮೃತ ನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತ ರಾಗಿರುವದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಪ–ವಿಭಾಗ–2, ವಿಜಾಪೂರ.

**ಪಿ.ಆರ್. 1147**

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು.

### ಅಧಿಕೃತ ಜ್ಞಾಪನ

**ಸಂಖ್ಯೆ: ಎಲ್‌ಆರ್‌ಎಫ್ (109) ಸಿಆರ್. 07/2011–12, ಬೆಂಗಳೂರು, ದಿನಾಂಕ: 29–11–2011.**

**ವಿಷಯ:** ಮೆ. ಎನ್.ಎ. ಮಹಮ್ಮದ್ ಸೆಂಟರ್ ಫಾರ್ ಎಜುಕೇಷನ್, ನಲಪಾಡ್ ಛೇಂಬರ್ಸ್, ನಂ. 19, ಕೆ.ಜಿ. ರಸ್ತೆ, ಬೆಂಗಳೂರು–9 ಇವರು ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಹೊಮ್ಮದೇವನಹಳ್ಳಿ ಗ್ರಾಮದ ಸ.ನಂ. 60/3 ರಲ್ಲಿ 1–20 ಎಕರೆ/ಗುಂಟೆ ವಿಸ್ತೀರ್ಣದ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣಾ (ತಿದ್ದುಪಡಿ) ಕಾಯ್ದೆ 2003ರ ಕಲಂ 109 (1) (ii) ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

**ಉಲ್ಲೇಖ:**

1. ಸರ್ಕಾರದ ಅಧಿಸೂಚನೆ ಸಂಖ್ಯೆ. ಶಾಸನ/47/ಶಾಸನ/2011, ಬೆಂಗಳೂರು, ದಿನಾಂಕ : 23–4–2003.
2. ಉಪ ವಿಭಾಗಾಧಿಕಾರಿಗಳು, ಈ ಕಛೇರಿ ಅಧಿಕೃತ ಜ್ಞಾಪನ ಪತ್ರದ ಸಂಖ್ಯೆ : ಎಲ್‌ಆರ್‌ಎಫ್ (109) (ಎಸ್) 16/2011–12, ದಿನಾಂಕ : 9–9–2011.
3. ತಹಸೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು ಇವರ ಪತ್ರದ ಸಂಖ್ಯೆ : ಎಲ್‌ಆರ್‌ಎಫ್ (ಬಿ.ಹೆಚ್) (109) ಸಿಆರ್ 16/2011–12, ದಿನಾಂಕ 17–11–2011.
4. ಮೆ. ಎನ್.ಎ. ಮಹಮ್ಮದ್ ಸೆಂಟರ್ ಫಾರ್ ಎಜುಕೇಷನ್, ನಲಪಾಡ್ ಛೇಂಬರ್ಸ್, ನಂ. 19, ಕೆ.ಜಿ. ರಸ್ತೆ, ಬೆಂಗಳೂರು–9 ಇವರ ಮನವಿ ದಿನಾಂಕ : 2–11–2011.

ಮೆ. ಎನ್.ಎ. ಮಹಮ್ಮದ್ ಸೆಂಟರ್ ಫಾರ್ ಎಜುಕೇಷನ್, ನಲಪಾಡ್ ಛೇಂಬರ್ಸ್, ನಂ. 19, ಕೆ.ಜಿ. ರಸ್ತೆ, ಬೆಂಗಳೂರು–9 ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಹೊಮ್ಮದೇವನಹಳ್ಳಿ ಗ್ರಾಮದ ಸ.ನಂ. 60/3 ರಲ್ಲಿ 1–20 ಎಕರೆ/ಗುಂಟೆ (ಒಂದು ಎಕರೆ ಇಪ್ಪತ್ತು ಗುಂಟೆ) ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ–15ಎ ಮತ್ತು ನಮೂನೆ–15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಲ್ಲೇಖ (3) ರ ತಹಸೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಇವರ ವರದಿಯಲ್ಲಿ ಪ್ರಸ್ತಾಪಿತ ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಹೊಮ್ಮದೇವನಹಳ್ಳಿ ಗ್ರಾಮದ ಸ.ನಂ. 60/3 ರಲ್ಲಿ 1–20 ಎಕರೆ/ಗುಂಟೆ (ಒಂದು ಎಕರೆ ಇಪ್ಪತ್ತು ಗುಂಟೆ) ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕೆ ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 1961 ರ ಕಲಂ 109(1) (ii) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಸಂಸ್ಥೆಯವರು ಪ್ರಸ್ತುತ ಜಮೀನಿನ ಖಾತೆದಾರರೊಂದಿಗೆ ಕ್ರಯದ ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಈ ಪ್ರಸ್ತಾವನೆ ಬಗ್ಗೆ ಉಲ್ಲೇಖ (1) ರ ಸರ್ಕಾರದ ಪತ್ರದಲ್ಲಿ ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961ರ ಕಲಂ 109 (1) (ii) ರಲ್ಲಿ ಶೈಕ್ಷಣಿಕ ಉದ್ದೇಶಕ್ಕಾಗಿ 2 ಯುನಿಟ್‌ವರೆಗೆ ಜಮೀನು ಖರೀದಿಸಲು ಅನುಮತಿ ನೀಡಲು ಜಿಲ್ಲಾಧಿಕಾರಿಗಳಿಗೆ ಅಧಿಕಾರ ಪ್ರದತ್ತವಾಗಿದ್ದು, ಅದರಂತೆ ಕ್ರಮ ಕೈಗೊಳ್ಳಲು ನಿರ್ದೇಶಿಸಲಾಗಿರುತ್ತದೆ.

ಆದ್ದರಿಂದ, ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಹೊಮ್ಮದೇವನಹಳ್ಳಿ ಗ್ರಾಮದ ಸ.ನಂ. 60/3 ರಲ್ಲಿ 1–20 ಎಕರೆ/ಗುಂಟೆ ವಿಸ್ತೀರ್ಣದ ಜಮೀನನ್ನು ಮೆ. ಎನ್.ಎ. ಮಹಮ್ಮದ್ ಸೆಂಟರ್ ಫಾರ್ ಎಜುಕೇಷನ್, ನಲಪಾಡ್ ಛೇಂಬರ್ಸ್ ನಂ. 19, ಕೆ.ಜಿ. ರಸ್ತೆ, ಬೆಂಗಳೂರು–9 ಇವರ ಹೆಸರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣಾ (ತಿದ್ದುಪಡಿ) ಕಾಯ್ದೆ 2003 ರ ಕಲಂ 109 (1) (ii) ರ ಪ್ರಕಾರ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ : ಶಾಇ 47/ಶಾಸನ/2011 ಬೆಂಗಳೂರು ದಿನಾಂಕ : 23–4–2003 ರಂತೆ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ, ಅನುಮತಿ ನೀಡಿದೆ.

ಷರತ್ತುಗಳು

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡಾ 55 ಪೇಯ್ಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ–ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೋಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ. ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೇ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಕೃಷಿ ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ನಿರ್ಮಾಣದ ಉದ್ದೇಶಕ್ಕೆ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೇ ಹಾಗೂ ಅನ್ಯಕ್ರಾಂತ ಪಡಿಸದೇ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಶೈಕ್ಷಣಿಕ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95(2) ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.

5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಇವರಿಂದ ಅನುಮೋದಿತಗೊಂಡಿರುವ ಆರ್.ಎಂ.ಪಿ. 2015 ರ ಸಿ.ಡಿ.ಪಿ ಆಧರಿಸಿ, ಹಸಿರು/ ಕೃಷಿ ವಲಯ ವ್ಯಾಪ್ತಿಯೊಳಗೆ ಬಂದರೆ ಅದರಿಂದ ಅನುಮತಿ ಪಡೆದು, ಜಮೀನನ್ನು ಉಪಯೋಗಿಸಿಕೊಳ್ಳತಕ್ಕದ್ದು.

6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿಸಿ, ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.

7. ಈ ಅನುಮತಿ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 ರನ್ವಯ ಮಾತ್ರ ನೀಡಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

8. ಪ್ರಸ್ತುತ ಸಂಸ್ಥೆ ಎರಡು ವರ್ಷಗಳಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಸೂಕ್ತ ಅನುಮೋದನೆ ಪಡೆದುಕೊಳ್ಳುವ ಷರತ್ತಿಗೊಳಪಡಿಸಿ, ಅನುಮತಿ ನೀಡಿದೆ.

**ಎಂ.ಕೆ. ಅಯ್ಯಪ್ಪ**
ಜಿಲ್ಲಾಧಿಕಾರಿಗಳು,
ಬೆಂಗಳೂರು. ಜಿಲ್ಲೆ, ಬೆಂಗಳೂರು.

**ಪಿ.ಆರ್. 205**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ. ಕಾಅದಾ:ಕಾನಪ:ಸಿಆರ್–160/11 ದಿನಾಂಕ 14–10–2011**

**ಅರ್ಜಿದಾರರು:**

1) ಶ್ರೀ ಅಂಜೀನಪ್ಪ ಬಿನ್ ಲೇಟ್ ಮರಿಯಪ್ಪ
2) ಲಕ್ಷ್ಮಮ್ಮ ಕೋಂ ಅಂಜೀನಪ್ಪ
ನೀಲಗುಂದ ಗ್ರಾಮ, ಹರಪನಹಳ್ಳಿ ತಾಲ್ಲೂಕು,
ದಾವಣಗೆರೆ ಜಿಲ್ಲೆ.

**ಪ್ರತಿವಾದಿಗಳು:**

1) ಹೆಚ್. ಹುಚ್ಚಪ್ಪ ಬಿನ್ ಹನುಮಂತಪ್ಪ ಟ್ರ್ಯಾಕ್ಟರ್ ಮಾಲೀಕರು
ನಂ. ಕೆ.ಎ. 17 ಟಿಎ 8393 ನೀಲಗುಂದ ಗ್ರಾಮ,
ಹರಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ
2) ದಿ. ಮ್ಯಾನೇಜರ್
ನ್ಯಾಷನಲ್ ಇನ್ಸೂರೆನ್ಸ್ ಕಂ. ಲಿ.,
ಮೆಲಗಿರಿ ಪ್ಲಾಜಾ ಎಂ.ಸಿ.ಸಿ. ಬಿ. ಬ್ಲಾಕ್,
ಡೆಂಟಲ್ ಕಾಲೇಜ್ ರಸ್ತೆ, ದಾವಣಗೆರೆ

**ಪ್ರಕಟಣೆ**

ಶ್ರೀ ಅಂಜೀನಪ್ಪ ಮತ್ತು ಲಕ್ಷ್ಮಮ್ಮ ಇವರುಗಳಾದ ನಾವು ಮೃತ ಮಂಜುನಾಥ ಇವರ ತಾಯಿ, ತಂದೆ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮಂಜುನಾಥರವರು ಒಂದನೇ ಪ್ರತಿವಾದಿಗಳಾದ ಹೆಚ್. ರುದ್ರಪ್ಪ ಇವರ ಟ್ರ್ಯಾಕ್ಟರ್‌ರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂಥವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು
ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ.ಸಂ. ಕಾಅದಾಕನಪ:ಸಿಆರ್–159/11 ದಿನಾಂಕ 14–10–2011**

**ಅರ್ಜಿದಾರರು:**

1) ಶ್ರೀಮತಿ ಅನಿತಾ ಕೋಂ ಲೇಟ್ ರಾಮವೀರ್ @ ರಾಮ್‌ಧೀರ್

2) ಸಚಿನ್ ಬಿನ್ ಲೇಟ್ ರಾಮವೀರ್ @ ರಾಮಧೀರ್ 12 ವರ್ಷ

3) ರಿಮಾ ಬಿನ್ ಲೇಟ್ ರಾಮವೀರ್ @ ರಾಮಧೀರ್ 8 ವರ್ಷ

ಮನಸ ನೀಮಚ್ ಜಿಲ್ಲೆ,

ಪ್ರಸ್ತುತ: ರಾಮ್ ದಯಾಳ್, ಶಂಕರ್ ವಿಹಾರ ಲೇಔಟ್,

ಬಾಪೂಜಿ ಬ್ಲಡ್ ಬ್ಯಾಂಕ್ ಹಿಂಭಾಗ, ದಾವಣಗೆರೆ

**ಪ್ರತಿವಾದಿಗಳು:**

1) ಮೆ॥ ಟ್ರಾನ್ಸ್‌ಲೈನ್ ಲಾಜಿಸ್ಟಿಕ್ಸ್ ಪ್ರವೈಟ್ ಲಿ.,

ನಂ. 54, ಸೆಕ್ಟರ್ 16ಎ ಗೂಡ್ಸ್ ಟ್ರಕ್ ಮಾಲೀಕರು

ಪರಿಬದಬಾದ್, ಹರಿಯಾಣ ರಾಜ್ಯ

2) ದಿ. ಮ್ಯಾನೇಜರ್

ಐ.ಸಿ.ಐ.ಸಿ.ಐ ಲಾಂಬಾರ್ಡ್ ಜನರಲ್ ಇನ್ಸೂರೆನ್ಸ್ ಕಂ. ಲಿ,

ಹಿರೋ ಹೊಂಡ ಷೋರೂಂ ಹತ್ತಿರ ಗೋಕುಲ ರಸ್ತೆ ಹುಬ್ಬಳ್ಳಿ

**ಪ್ರಕಟಣೆ**

ಶ್ರೀಮತಿ (1) ಅನಿತಾ (2) ಸಚೀನ್ (3) ರೀಮಾ ಇವರುಗಳಾದ ನಾವು ಮೃತ ರಾಮವೀರ್ @ ರಾಮಧೀರ್ ಇವರ ಹೆಂಡತಿ ಮತ್ತು ಮಕ್ಕಳು ಎಂದೂ ಅವರ ಸಾವಿಗಾಗಿ ನಷ್ಠ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಲೇಟ್ ರಾಮವೀರ್ @ ರಾಮ್‌ಧೀರ್‌ರವರು ಒಂದನೇ ಪ್ರತಿವಾದಿಗಳಾದ ಮೆ: ಟ್ರಾನ್ಸ್‌ಲೈನ್ ಲಾಜಿಸ್ಟಿಕ್ಸ್ ಪ್ರೈ. ಲಿ., ಇವರ ಟ್ರಕ್‌ರಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂಥವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು
ಆಯುಕ್ತರು ಕಾರ್ಮಿಕ ನಷ್ಠ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ

ಪಿ.ಆರ್. 1135

## LABOUR DEPARTMENT

**Corrigendum**

**No. LD 89 LWA 2011, Bangalore, Dated 16-9-2011**

In the Government Notification No. LD 75 LWA 2010, dated 15-6-2010 at Sl.No. 5 under Gulbarga Region, the Davangere District be deleted in the 3rd column and Sl.No. 4 under Mangalore Region, Davangere District be added in the 3rd Column.

By Order and in the name of the Governor of Karnataka

**N.R. PRABHU**
Under Secretary to Government,
Labour Department

P.R. 1138

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರು,**

**ದ.ಕ. ಉಪ ವಿಭಾಗ–2, ಬೆಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು–2 ಇವರ ನ್ಯಾಯಾಲಯ**

**ಅಧಿಸೂಚನೆ**

**ಸಂಖ್ಯೆ : ಡಬ್ಲ್ಯೂಸಿಎ/ಎಸ್ಆರ್/18/2011 ಎಪ, ದಿನಾಂಕ 29ನೇ ನವೆಂಬರ್ 2011**

**ಅರ್ಜಿದಾರರು :–**

1. ಶೇಸಪ್ಪ ಗೌಡ, 60 ವರ್ಷ ಪ್ರಾಯ
   ದಿ. ಈರಪ್ಪ ಯಾನೆ ವೀರಪ್ಪ ಗೌಡರ ಮಗ
2. ಶ್ರೀಮತಿ ನೀಲಮ್ಮ ಯಾನೆ ಲೀಲಮ್ಮ, 55 ವರ್ಷ ಪ್ರಾಯ
   ಶೇಸಪ್ಪ ಗೌಡರ ಮಡದಿ
3. ವಾರಿಜಾ, 31 ವರ್ಷ ಪ್ರಾಯ
   ಶೇಸಪ್ಪ ಗೌಡರ ಮಗಳು
4. ರತ್ನ ಯಾನೆ ರತ್ನಾವತಿ 28 ವರ್ಷ ಪ್ರಾಯ
   ಶೇಸಪ್ಪ ಗೌಡರ ಮಗಳು
   ಅಗರ್ತ ಕೋಣಲ ಗ್ರಾಮ ಮತ್ತು ಅಂಚೆ ಪುತ್ತೂರು ತಾಲ್ಲೂಕು

**ವಿರುದ್ಧ**

**ಪ್ರತಿವಾದಿಗಳು :–**

1. ಅಬ್ದುಲ್ ಕುಂಞ 33 ವರ್ಷ ಪ್ರಾಯ
   ಅಬ್ದುಲ್ ಖಾದರರ ಮಗ ವಾಸೆ ನೆಕ್ಕರ್ ಮನೆ
   ಅಲಂಕಾರು ಗ್ರಾಮ ಮತ್ತು ಅಂಚೆ, ಪುತ್ತೂರು ತಾಲ್ಲೂಕು
   ದ.ಕ.
2. ಶಾಖಾಧಿಕಾರಿಗಳು
   ದಿ ಒರಿಯಂಟಲ್ ಇನ್ಶೂರೆನ್ಸ್ ಕಂಪನಿ ಲಿಮಿಟೆಡ್,
   ಕೃಷ್ಣ ಪ್ರಸಾದ ಕಟ್ಟಡ ಮುಖ್ಯ ರಸ್ತೆ, ಪುತ್ತೂರು.

ಅರ್ಜಿದಾರರಾದ ಶ್ರೀಮತಿ/ಶ್ರೀ ಶೇಸಪ್ಪ ಗೌಡ ಇವರು ತಮ್ಮ ಮಗನಾದ/ಶ್ರೀ ರಾಮಣ್ಣ ಗೌಡ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ 06–09–2011 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಎಂ. ಆನಂದಮೂರ್ತಿ,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ. ಉಪ ವಿಭಾಗ–2, ಮಂಗಳೂರು

**ಪಿ.ಆರ್. 1292**

**IN THE COURT OF THE 8TH ADDITIONAL CHIEF METROPOLITAN MAGISTRATE, BANGALORE CITY**

**Dated 30th November 2011**

It is hereby notified for the information of the public that the under mentioned Two Wheeler which is in the custody of J.C. Nagar Police Station Bangalore City has unclaimed shall be Confiscated to the Government and Disposed to Law, if not claimed by the owner with Proof of ownership within three months from the date of the publication of this Notification.

| Sl. | C Miss No. | P.F. No | Vehicle No. | ENG & CHA No. | Nature of Property |
|---|---|---|---|---|---|
| 1 | 389/2011 | 86/11 | | E.NO.oF1A61498028<br>C.NO.MD625AF1562A 74393 | TVS VICTOR |
| 2 | 389/2011 | 86/11 | KA-41-3719 | C.NO.MD621BD194IH 93413 | TVS HEAVY DUTY |
| 3 | 389/2011 | 86/11 | KA-03-EZ-2649 | E.NO.JNGBPB08002<br>NO.MD2DSJMZZPCB 08098 | BAJAJ DISCOVER |
| 4 | 389/2011 | 86/11 | TN-05-1211 | E.NO.1612 M783607<br>C.NO. 1612F7377 | SUZUKI SAMURAI |
| 5 | 389/2011 | 86/11 | KA-04-2044 | E.NO.31MBEE51145,<br>C.NO. 31FBEE 24026 | BAJAJ BOXER |
| 6 | 389/2011 | 86/11 | KA-03-L-1099 | C.NO.06F94E62882 | BAJAJ CHETAK |

| | | | | | |
|---|---|---|---|---|---|
| 7 | 389/2011 | 86/11 | KA-03-ES-2786 | E.NO.DHGBKM28701<br>C.NO.DHVDKM29241 | BAJAJ PULSER |
| 8 | 203/2009 | 36/09 | KA-04-R-2953 | E.NO.694468NIE-NA<br>C.NO.NIFNA-700K41 | KINETIC HONDA |

VIII Addl. Chief Metropolitan Magistrate
Bangalore City

PR-1290

## ಸಹಕಾರ ಇಲಾಖೆ

### ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ. 1, ಆಲಿ ಆಸ್ಕರ್ ರಸ್ತೆ, ಬೆಂಗಳೂರು–52

**ಸಂಖ್ಯೆ: ಯುಬಿಸಿ–3/166/ಸಮಾಪನೆ/2011–12, ದಿನಾಂಕ: 05–11–2011.**

**ವಿಷಯ:** ಸ್ಥಗಿತಗೊಂಡಿರುವ ಚನ್ನರಾಯಪಟ್ಟಣ ತಾಲ್ಲೂಕು ನ್ಯಾಯಾಂಗ ಇಲಾಖಾ ನೌಕರರ ಪತ್ತಿನ ಸಹಕಾರ ಸಂಘ ನಿ., ಚನ್ನರಾಯಪಟ್ಟಣ ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ಇವರ ಪತ್ರ ಸಂಖ್ಯೆ: ಜೆಆರ್ಎಂ/ಎಸ್–10/ಎಲ್‌ಕ್ಯೂಡಿ/ಸಿಆರ್–23/2011–12, ದಿನಾಂಕ: 10–10–2011.

**ಪ್ರಸ್ತಾವನೆ :**

ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ ಇವರು ಉಲ್ಲೇಖದ ಪ್ರಸ್ತಾವೆಯಲ್ಲಿ ಚನ್ನರಾಯಪಟ್ಟಣ ತಾಲ್ಲೂಕು ನ್ಯಾಯಾಂಗ ಇಲಾಖಾ ನೌಕರರ ಪತ್ತಿನ ಸಹಕಾರ ಸಂಘ ನಿ., ಚನ್ನರಾಯಪಟ್ಟಣ ಇದನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನರಾಯಪಟ್ಟಣ ಇವರನ್ನು ಸಮಾಪಕರನ್ನಾಗಿ ನೇಮಿಸುವಂತೆ ಕೋರಿರುತ್ತಾರೆ.

ಚನ್ನರಾಯಪಟ್ಟಣ ತಾಲ್ಲೂಕು ನ್ಯಾಯಾಂಗ ಇಲಾಖಾ ನೌಕರರ ಪತ್ತಿನ ಸಹಕಾರ ಸಂಘ ನಿ., ಚನ್ನರಾಯಪಟ್ಟಣ ಇದು ಸಹಕಾರ ಸಂಘಗಳ ಜಂಟಿ ನಿಬಂಧಕರು, ಪಟ್ಟಣ ಬ್ಯಾಂಕುಗಳ ವಿಭಾಗ ಇವರಿಂದ ನೋಂದಣಿ ಸಂಖ್ಯೆ ಯುಬಿಸಿ/ಯುಒಬಿ/128/17325/1990–91, ದಿನಾಂಕ 3–1–1991 ರಲ್ಲಿ ನೋಂದಣಿಯಾಗಿರುತ್ತದೆ. ಇದರ ಕಾರ್ಯವ್ಯಾಪ್ತಿಯು ತಾಲ್ಲೂಕಿಗಿಂತ ಹೆಚ್ಚಿದ್ದು ಜಿಲ್ಲೆಗಿಂತ ಕಡಿಮೆ ಇರುತ್ತದೆ.

ಸಂಘದ ಆಡಳಿತ ಮಂಡಳಿಗೆ 2010–11 ರಿಂದ 2014–15 ನೇ ಸಾಲುಗಳಿಗೆ ಚುನಾವಣೆ ನಡೆಸಲು ಉಪನಿಬಂಧಕರು, ಹಾಸನ ಇವರ ಆದೇಶದನ್ವಯ ಚುನಾವಣಾಧಿಕಾರಿಯವರು ಸಂಘಕ್ಕೆ ಭೇಟಿ ನೀಡಲಾಗಿ ಸಂಘದ ಕಾರ್ಯದರ್ಶಿಯವರು ಮರಣ ಹೊಂದಿದ್ದು ಸಂಘದಲ್ಲಿ ನಿರ್ದೇಶಕರ ವಿವರಗಳು ಹಾಗೂ ಇನ್ನಿತರ ಯಾವುದೇ ದಾಖಲಾತಿಗಳು ಲಭ್ಯವಿಲ್ಲದ ಕಾರಣ ಚುನಾವಣಾ ಪ್ರಕ್ರಿಯೆ ನಡೆಸಲು ಸಾಧ್ಯವಾಗದಿದ್ದಾಗ ಸಂಘಕ್ಕೆ ಕಾಯ್ದೆ ಕಲಂ 28(ಎ)(5) ರೀತ್ಯಾ ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನರಾಯಪಟ್ಟಣರವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಿದ್ದುದಾಗಿ ವರದಿ ಮಾಡಿದ್ದಾರೆ. ಸದರಿ ಆದೇಶದ ರೀತ್ಯಾ ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನರಾಯಪಟ್ಟಣ ಇವರು ಪ್ರಭಾರ ಪಡೆಯಲು ಅನೇಕ ಬಾರಿ ಪ್ರಯತ್ನಿಸಿದರೂ ಪ್ರಭಾರ ಪಡೆಯಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸಿರುವುದಾಗಿ ವರದಿ ಮಾಡಿದ್ದು ಸಂಘದ ಲೆಕ್ಕ ಪತ್ರಗಳು ದಿನಾಂಕ 31–3–2004 ಕ್ಕೆ ಆಡಿಟ್ ಆದ ಬಗ್ಗೆ ಆಸ್ತಿ–ಜವಾಬ್ದಾರಿ ತಃಖ್ತೆ ಮಾತ್ರ ಲಭ್ಯವಿದ್ದು 2007–08ನೇ ಸಾಲಿನಲ್ಲಿ ವಾರ್ಷಿಕ ಮಹಾಸಭೆ ಮತ್ತು ಚುನಾವಣೆ ನಡೆದ ಬಗ್ಗೆ ಉಪನಿಬಂಧಕರ ಕಛೇರಿಯಲ್ಲಿ ನಮೂದಾಗಿದ್ದರೂ ಈ ಕುರಿತು ಸಂಘದಲ್ಲಿ ಯಾವುದೇ ದಾಖಲಾತಿಗಳು ಲಭ್ಯವಿರುವುದಿಲ್ಲವೆಂದು ತಿಳಿಸಿರುತ್ತಾರೆ. ಆಡಳಿತ ಮಂಡಳಿಯ ಹೆಸರು ಮತ್ತು ವಿಳಾಸ ಲಭ್ಯವಿಲ್ಲದಿದ್ದ ಕಾರಣ ಸಂಘವನ್ನು ಸಮಾಪನೆಗೊಳಿಸುತ್ತಿರುವ ಕುರಿತು ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನರಾಯಪಟ್ಟಣ ಇವರು ದಿನಾಂಕ 26–4–2010 ರಲ್ಲಿ ಪ್ರಕಟಣೆ ಹೊರಡಿಸಿ ಪ್ರಕಟಣೆಯು ಒಂದು ವಾರದೊಳಗೆ ಸಂಘಕ್ಕೆ ಸಂಬಂಧಿಸಿದ ಮಾಹಿತಿಯನ್ನು ಸಲ್ಲಿಸಲು ತಿಳಿಸಿದ್ದಾಗ್ಯೂ ಯಾರೂ ಮಾಹಿತಿ ಸಲ್ಲಿಸದೆ ಇದ್ದು ಸಮಾಪನೆಗೊಳಿಸುವ ಬಗ್ಗೆ ಆಕ್ಷೇಪಣೆಯನ್ನು ಸಹ ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಸಂಘವು 2007–08ನೇ ಸಾಲಿನಿಂದ ತನ್ನ ಉದ್ದೇಶಿತ ಕಾರ್ಯ ನಡೆಸದೆ ಸ್ಥಗಿತಗೊಂಡಿದೆ. ಸಂಘದಲ್ಲಿ ಆಡಳಿತ ಮಂಡಳಿ ಅಸ್ತಿತ್ವದಲ್ಲಿ ಇಲ್ಲದೆ ಇದ್ದು ಆಡಳಿತ ಮಂಡಳಿ ರಚಿಸಿ ಸಂಘವನ್ನು ಮುನ್ನಡೆಸಲು ಯಾವುದೇ ಸದಸ್ಯರಿಗೆ ಆಸಕ್ತಿ ಇಲ್ಲದಿರುವುದರಿಂದ ಸದರಿ ಸಂಘವನ್ನು ಯಥಾ ಸ್ಥಿತಿಯಲ್ಲಿ ಮುಂದುವರಿಸುವುದರಿಂದ ಸಂಘದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನ ಇಲ್ಲವಾದ್ದರಿಂದ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ ಇವರು ಉಲ್ಲೇಖದ ಪತ್ರದಲ್ಲಿ ಶಿಫಾರಸ್ಸು ಮಾಡಿರುವುದನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72(2) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ 139 ಸಿಎಲ್ಎಂ 2010 ದಿನಾಂಕ 17–2–2011 ರಲ್ಲಿ ಎಸ್.ಎನ್. ಅರುಣ್‌ಕುಮಾರ್, ಸಹಕಾರ ಸಂಘಗಳ ಜಂಟಿ ನಿಬಂಧಕರು, (ಪಟ್ಟಣ ಬ್ಯಾಂಕುಗಳ ವಿಭಾಗ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಆದ ನನಗೆ ದತ್ತವಾದ ಅಧಿಕಾರದಂತೆ ಚನ್ನರಾಯಪಟ್ಟಣ

ತಾಲ್ಲೂಕು, ನ್ಯಾಯಾಂಗ ಇಲಾಖಾ ನೌಕರರ ಪತ್ತಿನ ಸಹಕಾರ ಸಂಘ ನಿ., ಚನ್ನರಾಯಪಟ್ಟಣ ಇದನ್ನು ಸಮಾಪನೆಗೊಳಿಸಿ ಕಲಂ 73(1) ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನರಾಯಪಟ್ಟಣ ಇವರನ್ನು ಸಮಾಪಕರನ್ನಾಗಿ ಹೆಚ್ಚುವರಿ ಪ್ರಭಾರದಲ್ಲಿ ನೇಮಿಸಿರುತ್ತೇನೆ.

ಸಮಾಪಕರು ಕೂಡಲೇ ಸಂಘದ ಪ್ರಭಾರವನ್ನು ವಹಿಸಿಕೊಂಡು ಪ್ರಭಾರ ಪಟ್ಟಿ ಸಲ್ಲಿಸತಕ್ಕದ್ದು. ಅಲ್ಲದೆ ಸಂಘದ ಲೆಕ್ಕ ಪರಿಶೋಧನಾ ಅಢಾವೆ ಪತ್ರದ ಆಧಾರದ ಮೇಲೆ ಆದ್ಯತಾ ಪಟ್ಟಿ ತಯಾರಿಸಿ, ಈ ಕಚೇರಿಯಿಂದ ಅನುಮತಿ ಪಡೆದು ಆಸ್ತಿಯು ವಸೂಲಾದಂತೆ ಆದ್ಯತೆ ಮೇಲೆ ಜವಾಬ್ದಾರಿ ತೀರುವಳಿ ಮಾಡಿ ಸಂಘದ ನೋಂದಣಿ ರದ್ದತಿಗೆ 90 ದಿನಗಳೊಳಗೆ ಪ್ರಸ್ತಾವೆ ಸಲ್ಲಿಸಲು ಜರೂರು ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಹಾಗೂ ಕಚೇರಿ ಮೊಹರಿನೊಂದಿಗೆ ದಿನಾಂಕ 5–11–2011 ರಂದು ಹೊರಡಿಸಲಾಗಿದೆ.

**ಎಸ್.ಎನ್. ಅರುಣ್‌ಕುಮಾರ್,**
ಸಹಕಾರ ಸಂಘಗಳ ಜಂಟಿ ನಿಬಂಧಕರು,
(ಪಟ್ಟಣ ಬ್ಯಾಂಕುಗಳ ವಿಭಾಗ)

**ಪಿ.ಆರ್. 1224**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ. 1, ಆಲಿ ಆಸ್ಕರ್ ರಸ್ತೆ, ಬೆಂಗಳೂರು–52

**ವಿಷಯ:** ಸ್ಥಗಿತಗೊಂಡಿರುವ ಇಂಡಿಯನ್ ಕಮರ್ಷಿಯಲ್ ಅಂಡ್ ಇಂಡಸ್ಟ್ರಿಯಲ್ ಕೋ–ಆಪರೇಟಿವ್ ಇಂಪ್ರೂಮೆಂಟ್ ಸೊಸೈಟಿ ಲಿ. ಬೆಳಗಾವಿ ಇದರ ಸಮಾಪನೆ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಪತ್ರ ಸಂಖ್ಯೆ : ಅನಿ/ಕೈಸಸಂ–1/07/2010–22, ದಿನಾಂಕ 19–04–2011
2. ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಳಗಾವಿ ಪ್ರಾಂತ, ಇವರ ಅ.ಸ. ಪತ್ರ ಸಂಖ್ಯೆ: ಜೆಆರ್‌ಎಲ್/ಎ/ಸಿಆರ್–5/ ಆರ್‌ಎಸ್‌ಆರ್/2010–2011, ದಿನಾಂಕ: 23–04–2011.
3. ಈ ಕಛೇರಿ ಸಮಸಂಖ್ಯೆಯ ಪತ್ರ ದಿನಾಂಕ 24–05–2011.
4. ಸಹಕಾರ ಸಂಘಗಳ ಉಪ ನಿಬಂಧಕರು, ಬೆಳಗಾವಿ ಜಿಲ್ಲೆ ಇವರ ಪತ್ರ ಸಂಖ್ಯೆ : ಡಿಆರ್‌ಎಲ್/ಆರ್‌ಎಸ್‌ಆರ್/ 2011–12, ದಿನಾಂಕ 03–08–2011.

**ಪ್ರಸ್ತಾವನೆ :**

ಸ್ಥಗಿತಗೊಂಡಿರುವ ಇಂಡಿಯನ್ ಕಮರ್ಷಿಯಲ್ ಅಂಡ್ ಇಂಡಸ್ಟ್ರಿಯಲ್ ಕೋ–ಆಪರೇಟಿವ್ ಇಂಪ್ರೂಮೆಂಟ್ ಸೊಸೈಟಿ ಲಿ. ಬೆಳಗಾವಿ ಈ ಸಂಘವನ್ನು ಸಮಾಪನೆಗೊಳಿಸಬೇಕೆಂದು ಸಹಕಾರ ಸಂಘಗಳ ಉಪ ನಿಬಂಧಕರು, ಬೆಳಗಾವಿ ಜಿಲ್ಲೆ ಇವರು ಉಲ್ಲೇಖ (4)ರ ಪತ್ರದ ಮೂಲಕ ಶಿಫಾರಸ್ಸು ಮಾಡಿರುತ್ತಾರೆ.

ಭಾರತೀಯ ವಾಣಿಜ್ಯ ಮತ್ತು ಕೈಗಾರಿಕಾ ಸಹಕಾರ ಪ್ರಗತಿ ಸಂಸ್ಥೆ ನಿ. ಕಾರವಾರ ಎಂಬ ಹೆಸರಿನ ಸಹಕಾರ ಸಂಘವು ಸಹಕಾರ ಸಂಘಗಳ ನಿಬಂಧಕರ ಕಛೇರಿಯಲ್ಲಿ ನೋಂದಣಿಯಾಗಿರುವುದಿಲ್ಲವೆಂದು, ಆದರೆ ಇದೇ ನೋಂದಣಿ ಸಂಖ್ಯೆ ಅನಿಕೈ/ಸಸನಿಕ/01/2006–2007/344555 ದಿನಾಂಕ 3–3–2007ರ ಪ್ರಕಾರ ಇಂಡಿಯನ್ ಕಮರ್ಷಿಯಲ್ ಅಂಡ್ ಇಂಡಸ್ಟ್ರಿಯಲ್ ಕೋ–ಆಪರೇಟಿವ್ ಇಂಪ್ರೂಮೆಂಟ್ ಸೊಸೈಟಿ ಲಿ. ಪ್ಲಾಟ್ ನಂ. 70/06, ರುಕ್ಮಿಣಿ ಬಿಲ್ಡಿಂಗ್, ಪೆಟ್ರೋಲ್‌ಬಂಕ್ ಎದುರು, ನ್ಯೂ ಸಾಂಬ್ರಾ ಏರ್‌ಪೋರ್ಟ್ ರೋಡ್, ಗಾಂಧಿನಗರ, ಬೆಳಗಾವಿ–590015 ಎಂಬ ಸಹಕಾರ ಸಂಘವು ನೋಂದಣಿಯಾಗಿದ್ದು, ಇದರ ಕಾರ್ಯಕ್ಷೇತ್ರವು ಬೆಳಗಾವಿ ಜಿಲ್ಲೆಗೆ ಮಾತ್ರ ಸೀಮಿತವಾಗಿರುತ್ತದೆಂದೂ, ಆದರೆ ಭಾರತೀಯ ವಾಣಿಜ್ಯ ಮತ್ತು ಕೈಗಾರಿಕಾ ಸಹಕಾರ ಪ್ರಗತಿ ಸಂಸ್ಥೆ ನಿ. ಕಾರವಾರ ಎಂಬ ಸಂಘವು ನಾನಾ ರೀತಿಯ ಹುದ್ದೆಗಳನ್ನು ನೇಮಕಾತಿ ಮಾಡಿಕೊಳ್ಳುವ ಬಗ್ಗೆ ಪ್ರಕಟಣೆ ಮಾಡಿ ನೇಮಕಾತಿಗಾಗಿ ಭದ್ರತಾ ಠೇವಣಿ ಪಡೆಯುತ್ತಿರುವುದು ತಿಳಿದುಬಂದಿದ್ದರಿಂದ, ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಸದರಿ ಸಂಸ್ಥೆಯು ನಿಯಮಬಾಹಿರ ನೇಮಕಾತಿ ಮಾಡುತ್ತಿರುವುದು ಕಂಡು ಬಂದರೆ, ಅದನ್ನು ಕೂಡಲೇ ನಿಲ್ಲಿಸಿ, ಅಗತ್ಯಬಿದ್ದರೆ ಸಂಬಂಧಪಟ್ಟವರ ಮೇಲೆ ಕ್ರಿಮಿನಲ್ ಮೊಕದ್ದಮೆ ಹೂಡಲು ಸೂಕ್ತ ಕ್ರಮ ಕೈಗೊಂಡು ವರದಿ ಸಲ್ಲಿಸುವಂತೆ ಬೆಳಗಾವಿ ಪ್ರಾಂತದ ಸಹಕಾರ ಸಂಘಗಳ ಜಂಟಿ ನಿಬಂಧಕರನ್ನು ಉಲ್ಲೇಖ (1)ರ ಪತ್ರದಲ್ಲಿ ಕೋರಲಾಗಿರುತ್ತದೆ.

ಭಾರತೀಯ ವಾಣಿಜ್ಯ ಮತ್ತು ಕೈಗಾರಿಕಾ ಸಹಕಾರ ಪ್ರಗತಿ ಸಂಸ್ಥೆ ನಿ. ಕಾರವಾರ ಈ ಸಂಸ್ಥೆಯು ಕಛೇರಿಯನ್ನು ಪ್ರಾರಂಭಿಸಿ ನೇಮಕಾತಿ ಪ್ರಕ್ರಿಯೆಗೆ ಚಾಲನೆ ನೀಡಿದ್ದರಿಂದ, ಕಾರವಾರ ನಗರದಲ್ಲಿನ ಅಪರಾಧ ವಿಭಾಗದ ಪೋಲೀಸ್ ಠಾಣೆಯ ಪೋಲೀಸ್ ಉಪ ಪರಿವೀಕ್ಷಕರ ಮುಂದೆ ಸಂಬಂಧಪಟ್ಟವರ ಮೇಲೆ ಖಾಸಗಿ ಕ್ರಿಮಿನಲ್ ಮೊಕದ್ದಮೆಯನ್ನು ದಾಖಲಿಸಿರುವುದಾಗಿ ಹಾಗೂ ನೇಮಕಾತಿ ಪ್ರಕ್ರಿಯೆ ತಡೆಹಿಡಿಯಲಾಗಿರುವುದಾಗಿ ಉಲ್ಲೇಖ (2)ರ ಪತ್ರದಲ್ಲಿ ಬೆಳಗಾವಿ ಪ್ರಾಂತದ ಸಹಕಾರ ಸಂಘಗಳ ಜಂಟಿ ನಿಬಂಧಕರು ವರದಿ ಮಾಡಿರುತ್ತಾರೆ. ಮುಂದುವರೆದು, ಸದರಿ ಸಂಘವು ನೋಂದಾಯಿತ ವಿಳಾಸದಲ್ಲಿ ಕಾರ್ಯನಿರ್ವಹಿಸುತ್ತಿಲ್ಲದಿರುವುದನ್ನು ಪರಿಶೀಲಿಸಿ ಖಚಿತಪಡಿಸಿಕೊಂಡು ಸಂಘವನ್ನು ಸಮಾಪನೆಗೆ ಒಳಪಡಿಸಿ

ನೋಂದಣಿಯನ್ನು ರದ್ದುಪಡಿಸುವ ಬಗ್ಗೆ ಕ್ರಮಕೈಗೊಳ್ಳಲು ಬೆಳಗಾವಿ ಪ್ರಾಂತದ ಸಹಕಾರ ಸಂಘಗಳ ಜಂಟಿ ನಿಬಂಧಕರಿಗೆ ಉಲ್ಲೇಖ (3)ರ ಪತ್ರದಲ್ಲಿ ಕೋರಲಾಗಿರುತ್ತದೆ.

ಇಂಡಿಯನ್ ಕಮರ್ಷಿಯಲ್ ಅಂಡ್ ಇಂಡಸ್ಟ್ರಿಯಲ್ ಕೋ–ಆಪರೇಟಿವ್ ಇಂಪ್ರೂಮೆಂಟ್ ಸೊಸೈಟಿ ಲಿ. ಬೆಳಗಾವಿ ಈ ಸಂಘವು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 7ರ ಅಡಿಯಲ್ಲಿ ದಿನಾಂಕ 3–3–2007ರಂದು ನೋಂದಣಿ ಸಂಖ್ಯೆ ಅನಿಕೈ/ಸಸನಿಕ/01/2006–2007/ 344555ರ ಪ್ರಕಾರ ನೋಂದಣಿ ಮಾಡಲಾಗಿದೆ. ಸಂಘದ ಬೈಲಾ 3ರ ರೀತ್ಯಾ ನೋಂದಾಯಿತ ಕಛೇರಿ ವಿಳಾಸದಲ್ಲಿಯೇ ಕಾರ್ಯನಿರ್ವಹಿಸಬೇಕಾಗಿದ್ದು, ಈ ಸಂಘವು ಸದರಿ ವಿಳಾಸದಲ್ಲಿ ಕಾರ್ಯನಿರ್ವಹಿಸದೇ ಮತ್ತೊಂದು ಹೆಸರಿನ ಜಯಶಂಕರ ಕಾಲಕುಂದ್ರಿಕರ್ ಮಲ್ಟಿಪರ್ಪಸ್ ಸೌಹಾರ್ದ ಸಹಕಾರಿ ಲಿ., ಬೆಳಗಾವಿ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದು, ನೋಂದಾಯಿತ ಕಛೇರಿ ವಿಳಾಸದಲ್ಲಿ ಕಾರ್ಯನಿರ್ವಹಿಸದೇ ಬೇರೆ ಜಿಲ್ಲೆಯಲ್ಲಿ ಅಂದರೆ ಉತ್ತರ ಕನ್ನಡ ಜಿಲ್ಲೆಯ ಕಾರವಾರದಲ್ಲಿ ಮೇಲ್ಕಂಡ ನೋಂದಣಿ ಸಂಖ್ಯೆಯೊಂದಿಗೆ ಭಾರತೀಯ ವಾಣಿಜ್ಯ ಮತ್ತು ಕೈಗಾರಿಕೆ ಸಹಕಾರ ಪ್ರಗತಿ ಸಂಸ್ಥೆ ನಿ. ಎಂಬ ಹೆಸರಿನಲ್ಲಿ ಇಲಾಖೆಯ ಅನುಮತಿ ಪಡೆಯದೇ ಕಾರ್ಯನಿರ್ವಹಿಸುತ್ತಾ, ಹುದ್ದೆಗಳ ನೇಮಕಾತಿಗೆ ಅನುಮತಿ ಪಡೆಯದೇ, ಸಂಘದ ದೈನಂದಿನ ಕೆಲಸಕ್ಕೆ ವಿವಿಧ ಹುದ್ದೆಗಳ ನೇಮಕಾತಿಗಾಗಿ ಅಮಾಯಕರಿಂದ/ಅಭ್ಯರ್ಥಿಗಳಿಂದ ಸೆಕ್ಯೂರಿಟಿ ಡೆಪಾಸಿಟ್ ಪಡೆಯುತ್ತಿರುವುದು ಇಲಾಖೆಯ ಗಮನಕ್ಕೆ ಬಂದಿದ್ದರಿಂದ, ಸಂಘವು 2006–2007 ರಲ್ಲಿ ನೋಂದಣಿಯಾಗಿದ್ದರೂ, ಈವರೆವಿಗೂ ಲೆಕ್ಕಪರಿಶೋಧನೆಯಾಗಿರುವುದಿಲ್ಲವೆಂದು ಬೆಳಗಾವಿ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಸಹಾಯಕ ನಿರ್ದೇಶಕರು ವರದಿ ಮಾಡಿರುವುದರಿಂದ, ಸಂಘವನ್ನು ಸಮಾಪನೆಗೊಳಿಸುವ ಉದ್ದೇಶದಿಂದ ಸಂಬಂಧಿಸಿದ ಆಡಳಿತ ಸಮಿತಿ, ಅಧ್ಯಕ್ಷರು ಮತ್ತು ಉಪಾಧ್ಯಕ್ಷರು ಯಾರಾದರೂ ಇದ್ದರೆ ದಿನಾಂಕ 27–06–2011 ರೊಳಗೆ ಇಲಾಖೆಯನ್ನು ಸಂಪರ್ಕಿಸಬೇಕೆಂದು ದಿನಾಂಕ 19–06–2011ರ ಹಸಿರು ಕ್ರಾಂತಿ ಪತ್ರಿಕೆಯಲ್ಲಿ ಪ್ರಕಟಣೆಗೊಳಿಸಿದ್ದರೂ, ಈವರೆಗೂ ಸಂಘಕ್ಕೆ ಸಂಬಂಧಿಸಿದಂತೆ ಯಾರೂ ಸಂಪರ್ಕಿಸದಿರುವುದರಿಂದ ಹಾಗೂ ಈ ಬಗ್ಗೆ ಯಾವುದೇ ಪತ್ರ ಕೂಡ ಬಾರದಿರುವುದರಿಂದ ಇಂಡಿಯನ್ ಕಮರ್ಷಿಯಲ್ ಅಂಡ್ ಇಂಡಸ್ಟ್ರಿಯಲ್ ಕೋ–ಆಪರೇಟಿವ್ ಇಂಪ್ರೂಮೆಂಟ್ ಸೊಸೈಟಿ ಲಿ. ಬೆಳಗಾವಿ ಈ ಸಂಘವನ್ನು ಸಮಾಪನೆಗೊಳಿಸುವುದು ಅಗತ್ಯವಾಗಿರುತ್ತದೆಂದು ಉಪ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವೆಯನ್ನು ಪರಿಶೀಲಿಸಲಾಗಿ, ಇಂಡಿಯನ್ ಕಮರ್ಷಿಯಲ್ ಅಂಡ್ ಇಂಡಸ್ಟ್ರಿಯಲ್ ಕೋ–ಆಪರೇಟಿವ್ ಇಂಪ್ರೂಮೆಂಟ್ ಸೊಸೈಟಿ ಲಿ. ಬೆಳಗಾವಿ ಈ ಸಂಘವು ನೋಂದಣಿಯಾದ ನಂತರ ಆಡಳಿತ ಸಮಿತಿ ರಚನೆಯಾಗಿರುವುದಾಗಲೀ, ಪ್ರಾರಂಭಿಸಿರುವುದಾಗಲೀ, ಕಾರ್ಯನಿರ್ವಹಿಸಿರುವುದಾಗಲೀ, ಕಾರ್ಯನಿರ್ವಹಿಸಿ ಸ್ಥಗಿತಗೊಳಿಸಿರುವುದಾಗಲೀ ಅಥವಾ ಮುಖ್ಯವಾಗಿ ಅಸ್ತಿತ್ವದಲ್ಲಿದ್ದ ಬಗ್ಗೆ ಯಾವುದೇ ಮಾಹಿತಿ ಲಭ್ಯತೆಯಿರುವುದಿಲ್ಲ. ಇಂತಹ ಪ್ರಸಂಗದಲ್ಲಿ ಈ ಸಂಘವನ್ನು ಪ್ರಕರಣ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 72ರನ್ವಯ ಸಮಾಪನಗೊಳಿಸುವುದು ಅಗತ್ಯವೆಂದು ಅಭಿಪ್ರಾಯಪಟ್ಟು ಈ ಕೆಳಗಿನ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ : ಅನಿ/ಕೈಸಸಂ–1/07/2011, ದಿನಾಂಕ 14–9–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ವಯ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 72(2)ರಡಿ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಒ 139 ಸಿಎಲ್ಎಂ 2010 ದಿನಾಂಕ 04–07–2011ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರ್.ಎಸ್. ಹುಚ್ಚಾಚಾರಿ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಹೈನುಗಾರಿಕೆ) ಆದ ನಾನು ಸ್ಥಗಿತಗೊಂಡಿರುವ ಇಂಡಿಯನ್ ಕಮರ್ಷಿಯಲ್ ಅಂಡ್ ಇಂಡಸ್ಟ್ರಿಯಲ್ ಕೋ–ಆಪರೇಟಿವ್ ಇಂಪ್ರೂಮೆಂಟ್ ಸೊಸೈಟಿ ಲಿ. ಪ್ಲಾಟ್ ನಂ. 70/06, ರುಕ್ಮಿಣಿ ಬಿಲ್ಡಿಂಗ್, ಪೆಟ್ರೋಲ್‌ಬಂಕ್ ಎದುರು, ನ್ಯೂ ಸಾಂಬ್ರಾ ಏರ್‌ಪೋರ್ಟ್ ರೋಡ್, ಗಾಂಧಿನಗರ, ಬೆಳಗಾವಿ–590015 ಈ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೆಳಗಾವಿ ಉಪ ವಿಭಾಗ, ಬೆಳಗಾವಿ ಇವರನ್ನು ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಕೂಡಲೇ ಒಂದು ತಿಂಗಳೊಳಗಾಗಿ ವಸ್ತುಸ್ಥಿತಿಯ ಬಗ್ಗೆ ವರದಿ ಸಲ್ಲಿಸುವಂತೆ ಹಾಗೂ ನಿಯಮಾನುಸಾರ ಸಮಾಪನಾ ಪ್ರಕ್ರಿಯೆ ಪೂರ್ಣಗೊಳಿಸಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆಯನ್ನು 60 ದಿನದೊಳಗೆ ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ದಿನಾಂಕ 14–09–2011 ರಂದು ಹೊರಡಿಸಲಾಗಿದೆ.

**ಆರ್.ಎಸ್. ಹುಚ್ಚಾಚಾರಿ,**
ಸಹಕಾರ ಸಂಘಗಳ ಅಪರ ನಿಬಂಧಕರು,
(ಕೈಗಾರಿಕೆ ಮತ್ತು ಹೈನುಗಾರಿಕೆ)

**ಪಿ.ಆರ್. 998**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ. 1, ಆಲಿ ಆಸ್ಕರ್ ರಸ್ತೆ, ಬೆಂಗಳೂರು-52

**ವಿಷಯ:** ಸಮಾಪನೆಗೊಂಡಿರುವ ದಕ್ಷಿಣ ಕನ್ನಡ ಕುಲಾಲ ಶ್ರೀರಾಮ ಸೇವಾ ಮಡಿಕೆ ಗುಡಿ ಕೈಗಾರಿಕಾ ಸಹಕಾರ ಸಂಘ ನಿ., ಮಂಗಳೂರು ಇದರ ಸಮಾಪಕರನ್ನು ಬದಲಾಯಿಸುವ ಬಗ್ಗೆ.

**ಉಲ್ಲೇಖ:** 1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಗಳೂರು ಉಪ ವಿಭಾಗ, ಇವರ ಪತ್ರ ಸಂಖ್ಯೆ : ಎಆರ್ 36/ಎಸ್ 8/ಎಲ್‌ಕ್ಯೂಡಿ/2001-02, ದಿನಾಂಕ 29-10-2011.

2. ಈ ಕಛೇರಿ ಸಮಾಪನಾ ಆದೇಶ ಸಂಖ್ಯೆ : ಸಸನಿ/ಸಮಾಪನೆ/76/2010-11, ದಿನಾಂಕ 25-3-2011.

**ಪ್ರಸ್ತಾವನೆ :**

ಸಮಾಪನೆಗೊಂಡಿರುವ ದಕ್ಷಿಣ ಕನ್ನಡ ಕುಲಾಲ ಶ್ರೀರಾಮ ಸೇವಾ ಮಡಿಕೆ ಗುಡಿ ಕೈಗಾರಿಕಾ ಸಹಕಾರ ಸಂಘ ನಿ., ಮಂಗಳೂರು ಈ ಸಂಘದ ಸಮಾಪಕರನ್ನು ಬದಲಾಯಿಸಲು ಕೋರಿ ಪ್ರಸ್ತಾವೆಯನ್ನು ಉಲ್ಲೇಖಿತ (1) ರ ಪತ್ರದೊಡನೆ ಸಲ್ಲಿಸಿರುತ್ತಾರೆ.

ಸದರಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಸಂಘಗಳ ಪರಿವೀಕ್ಷಕರಾಗಿರುವ ಶ್ರೀ ಗುರುಮೂರ್ತಿ, ಇವರನ್ನು ಸಮಾಪಕರನ್ನಾಗಿ ಉಲ್ಲೇಖ (2)ರ ಈ ಕಛೇರಿ ಆದೇಶದಲ್ಲಿ ನೇಮಿಸಲಾಗಿದೆ. ಆದರೆ ಸದರಿ ಸಮಾಪಕರನ್ನು ಇಲಾಖೆಗೆ ಸಂಬಂಧಪಟ್ಟ ಹೆಚ್.ಡಿ.ಸಿ.ಎಂ. ತರಬೇತಿಗೆ ನಿಯೋಜಿಸಲಾಗಿರುವುದರಿಂದ ಅವರ ಸ್ಥಾನಕ್ಕೆ ಮಂಗಳೂರು ಉಪ ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎನ್.ಹೆಚ್. ಗೋಪಾಲ ಇವರನ್ನು ನೇಮಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಗಳೂರು ಉಪ ವಿಭಾಗ ರವರು ಕೋರಿರುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ಸಂಖ್ಯೆ : ಅನಿ/ಕೈಸಸಂ-2/80/ಸಮಾಪನೆ/2010-11, ದಿನಾಂಕ 22-12-2011**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 72(2) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಒ 139 ಸಿಎಲ್‌ಎಂ 2010 ದಿನಾಂಕ 4-7-2011 ಮತ್ತು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 73 (1) ರಡಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀರಾಮ ಸೇವಾ ಮಡಿಕೆ ಗುಡಿ ಕೈಗಾರಿಕಾ ಸಹಕಾರ ಸಂಘ ನಿ., ಮಂಗಳೂರು ಇದರ ಸಮಾಪಕರನ್ನಾಗಿ ಶ್ರೀ ಎನ್.ಹೆಚ್. ಗೋಪಾಲ, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಮಂಗಳೂರು ಇವರನ್ನು ಶ್ರೀ ಗುರುಮೂರ್ತಿ, ಸಹಕಾರ ಸಂಘಗಳ ಪರಿವೀಕ್ಷಕರು, ಇವರ ಸ್ಥಾನದಲ್ಲಿ ನೇಮಿಸಿ ಆದೇಶಿಸಿರುತ್ತೇನೆ.

**ಆರ್.ಎಸ್. ಹುಚ್ಚಾಚಾರಿ,**
ಸಹಕಾರ ಸಂಘಗಳ ಅಪರ ನಿಬಂಧಕರು,
(ಕೈಗಾರಿಕೆ ಮತ್ತು ಹೈನುಗಾರಿಕೆ)

**ಪಿ.ಆರ್. 1369**

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ, ವಿಧಾನಸೌಧ, ಬೆಂಗಳೂರು-1

**ಸಂಖ್ಯೆ : ಕವಿಪ/ಶಾರಶಾ/138/ಇತರೆ/2007-10, ಬೆಂಗಳೂರು ದಿನಾಂಕ 03-11-2011**

**ವಿಷಯ:** ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಲಹರ್ ಸಿಂಗ್ ಸಿರೋಯಾ ಇವರ ವಿಳಾಸ ಬದಲಾವಣೆಯ ಬಗ್ಗೆ.

**ಉಲ್ಲೇಖ:** ಮಾನ್ಯ ಸದಸ್ಯರ ಪತ್ರ ದಿನಾಂಕ 24-10-2011.

ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ ಲಹರ್ ಸಿಂಗ್ ಸಿರೋಯಾ ರವರ ಹೆಸರಿಗೆ ಕಳುಹಿಸುವ ಎಲ್ಲಾ ಕಾಗದ ಪತ್ರ ಹಾಗೂ ಮಾಹಿತಿಗಳನ್ನು ಈ ಕೆಳಕಂಡ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಉಲ್ಲೇಖಿತ ಪತ್ರದಲ್ಲಿ ಕೋರಿರುವ ಹಿನ್ನೆಲೆಯಲ್ಲಿ ವಿಳಾಸ ಬದಲಾವಣೆ ಬಗ್ಗೆ ರಾಜ್ಯ ಪತ್ರದಲ್ಲಿ ಪ್ರಕಟಿಸಿ ಎಲ್ಲಾ ಇಲಾಖೆಗಳ ಮಾಹಿತಿಗಾಗಿ ರವಾನಿಸಲು ಕ್ರಮಕೈಗೊಳ್ಳಬೇಕೆಂದು ಕೋರಲು ನಿರ್ದೇಶಿತಳಾಗಿದ್ದೇನೆ.

ಶ್ರೀ ಲಹರ್ ಸಿಂಗ್ ಸಿರೋಯಾ,
ವಿಧಾನ ಪರಿಷತ್ತಿನ ಸದಸ್ಯರು,
ಮನೆ ನಂ. 145, 9ನೇ ಕ್ರಾಸ್, 3ನೇ ಮೈನ್,
ಹೆಚ್.ಐ.ಜಿ. ಲೇಔಟ್, ಆರ್.ಎಂ.ವಿ. ಎಕ್ಸ್‌ಟೆನ್‌ಷನ್,
2ನೇ ಸ್ಟೇಜ್, ಬೆಂಗಳೂರು-560094

**ಎಸ್. ನಿರ್ಮಲ**
ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನ ಪರಿಷತ್ತು.

**ಪಿ.ಆರ್. 1237**

## ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಮುಖ್ಯ ಇಂಜಿನೀಯರವರ ಕಛೇರಿ, ಸಣ್ಣ ನೀರಾವರಿ (ಉತ್ತರ) ವಲಯ, ವಿಜಾಪೂರ

### ಕಛೇರಿ ಆದೇಶ

**ಸಂಖ್ಯೆ : ಮುಇಂ/ಸನೀ(ಉ)ವ.ಬಿಜೆಪಿ/ಸಿ–9/2011–12, ದಿನಾಂಕ 11–11–2011**

**ವಿಷಯ:** ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ (ಉ) ವಲಯ, ವಿಜಾಪೂರ ಕಛೇರಿಯಲ್ಲಿ ಮಾಹಿತಿ ಹಕ್ಕು ಅಧಿನಿಯಮ 2005 ರಡಿಯಲ್ಲಿ ಸಾರ್ವಜನಿಕ ಮಾಹಿತಿ ಅಧಿಕಾರಿಯವರನ್ನು ನೇಮಿಸಿರುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಅಧಿಸೂಚನೆ ಪತ್ರ ಸಂಖ್ಯೆ ಮುಇ/ಸನೀಇ/ಬಿಜೆಪಿ/ಸಿ–2/2009–10/1551, ದಿನಾಂಕ 11–3–2010.
2. ಸರ್ಕಾರದ ಆದೇಶ ಸಂಖ್ಯೆ ಸನೀಇ 114 ಸೇಎಸು ದಿನಾಂಕ 24–10–2011
3. ಈ ಕಛೇರಿಯ ವರ್ಗಾವಣೆಯ ಪ್ರಮಾಣ ಪತ್ರ ದಿನಾಂಕ

ಸಾರ್ವಜನಿಕ ಮಾಹಿತಿ ಹಕ್ಕು ಅಧಿನಿಯಮ 2005ರಡಿಯಲ್ಲಿ ಸೆಕ್ಷನ್ 5(1) ರಡಿಯಲ್ಲಿ ಈ ಕಛೇರಿಯಲ್ಲಿ ಶ್ರೀ ಎಚ್.ಎಂ. ಚಿದಾನಂದ, ಅಧೀಕ್ಷಕ ಅಭಿಯಂತರು, ಇವರನ್ನು ಉಲ್ಲೇಖ 1 ರಡಿಯಲ್ಲಿ ಸಾರ್ವಜನಿಕ ಮಾಹಿತಿ ಅಧಿಕಾರಿಗಳೆಂದು ನೇಮಿಸಲಾಗಿತ್ತು. ಸದರಿ ಅಧಿಕಾರಿಗಳು ಸರ್ಕಾರದ ಆದೇಶ ದಿನಾಂಕ ರನ್ವಯ ವರ್ಗಾವಣೆಯಾಗಿದ್ದು, ಅವರ ಸ್ಥಾನದಲ್ಲಿ ಶ್ರೀ ಜಗನ್ನಾಥ ಹಲಿಂಗೆ, ಅಧೀಕ್ಷಕ ಅಭಿಯಂತರರನ್ನು ನಿಯುಕ್ತಿಗೊಳಿಸಿರುವುದು. ಸದರಿ ಅಧಿಕಾರಿಗಳು ಅಧೀಕ್ಷಕ ಅಭಿಯಂತರರ ಪ್ರಭಾರವನ್ನು ದಿನಾಂಕ 24–10–2011 ರಂದು ವಹಿಸಿಕೊಂಡ ಪ್ರಯುಕ್ತ, ಶ್ರೀ ಜಗನ್ನಾಥ ಹಲಿಂಗೆ, ಅಧೀಕ್ಷಕ ಅಭಿಯಂತರರನ್ನು ಈ ಕಛೇರಿಯ ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನಾಗಿ, ಸಾರ್ವಜನಿಕ ಮಾಹಿತಿ ಹಕ್ಕು ಕಾಯ್ದೆ –2005ರ ಸೆಕ್ಷನ್ 5(1) ರನ್ವಯ ಈ ಕೆಳಗಿನಂತೆ ಅಧಿಸೂಚನೆಯನ್ನು ಹೊರಡಿಸಲಾಗಿದೆ.

| ಕ್ರಮ ಸಂಖ್ಯೆ | ಕಛೇರಿಯ ಹೆಸರು | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಷರಾ |
|---|---|---|---|
| 1 | ಮುಖ್ಯ ಇಂಜಿನೀಯರ್‌ರವರ ಕಛೇರಿ, ಸಣ್ಣ ನೀರಾವರಿ (ಉ) ವಲಯ, ವಿಜಾಪೂರ | ಶ್ರೀ ಜಗನ್ನಾಥ ಹಲಿಂಗೆ, ಅಧೀಕ್ಷಕ ಅಭಿಯಂತರು, ಮುಖ್ಯ ಇಂಜಿನೀಯರ್‌ರವರ ಕಛೇರಿ, ಸಣ್ಣ ನೀರಾವರಿ (ಉ) ವಲಯ, ವಿಜಾಪೂರ | |

**ಎಸ್.ಬಿ. ಸಿದ್ಧಗಂಗಪ್ಪ,**
ಮುಖ್ಯ ಇಂಜಿನಿಯರ್,
ಸಣ್ಣ ನೀರಾವರಿ(ಉ) ವಲಯ, ವಿಜಾಪೂರ

**ಪಿ.ಆರ್. 1238**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ.ಸಂ. ಕಾಅದಾ : ಕಾನಪ : ಸಿಆರ್–174/11, ದಿನಾಂಕ 9ನೇ ನವೆಂಬರ್ 2011**

**ಅರ್ಜಿದಾರರು :–**

1. ಶ್ರೀಮತಿ ಪರಂಜೀತ್‌ಕುರ್ ಕೋಂ ರೇಷಂಸಿಂಗ್
2. ಮನ್‌ಪ್ರೀತ್ ಸಿಂಗ್ ಬಿನ್ ಲೇಟ್ ರೇಷಂ ಸಿಂಗ್, 5 ವರ್ಷ ವಯಸ್ಸು
ಕೇರಾಫ್ : ಜಾಸ್ಬೀರ್ ಸಿಂಗ್
ಗ್ರೀನ್ ಪಾರ್ಕ್, ಪಂಜಾಬಿ ಡಾಬ, ಬೈಪಾಸ್,
ಎನ್.ಹೆಚ್.4, ಶ್ಯಾಮನೂರು ಗ್ರಾಮ ಹತ್ತಿರ ಭರತ ಪೆಟ್ರೋಲ್ ಬಂಕ್ ಎದುರು, ದಾವಣಗೆರೆ

ವಿರುದ್ಧ

**ಪ್ರತಿವಾದಿಗಳು :–**

1. ಚರಣ್ ಸಿಂಗ್ ಬಿನ್ ಪಾಲ್ ಸಿಂಗ್ ಲಾರಿ ಮಾಲೀಕರು ನಂ. ಕೆಎ–25–ಬಿ–5014, ಮನೆ 1745 ನೇ ಕ್ರಾಸ್, ಸಾಯಿನಗರ, ಅಂಕಲ್ ಕ್ರಾಸ್, ಹುಬ್ಬಳ್ಳಿ.
2. ದಿ. ಡಿವಿಜನಲ್ ಮ್ಯಾನೇಜರ್, ನ್ಯೂ ಇಂಡಿಯಾ ಆಶ್ಯೂರೆನ್ಸ್ ಕಂ. ಲಿ. ಡಿವಿಜನಲ್ ಆಫೀಸ್, ಎ.ಎಂ. ಆರ್ಕೇಡ್, ಸಿ.ಜಿ. ಆಸ್ಪತ್ರೆ ರಸ್ತೆ, ದಾವಣಗೆರೆ

### ಪ್ರಕಟಣೆ

ಶ್ರೀ/ಶ್ರೀಮತಿ (1) ಪರಂಜೀತ್ ಕುರ್ (2) ಮನ್‌ಪ್ರೀತ್ ಸಿಂಗ್ ಇವರುಗಳಾದ ನಾವು ಮೃತ ರೇಷಂ ಸಿಂಗ್ ಇವರ ಹೆಂಡತಿ ಮತ್ತು ಮಗ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ರೇಷಂ ಸಿಂಗ್ ರವರು ಒಂದನೇ ಪ್ರತಿವಾದಿಗಳಾದ ಚರಣ್ ಸಿಂಗ್ ಇವರ ಲಾರಿ ರಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು

ಪ್ರಾರ್ಥಿಸುವುದಾದರೇ, ಅಂತಹವರು ಈ ಪ್ರಕಟಣೆಯು ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪಿ.ಆರ್. 1239**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

### ಅಧಿಸೂಚನೆ

**ಸಂಖ್ಯೆ : ಅಪಜೀ 159 ಅಪಸೇ 2011, ಬೆಂಗಳೂರು, ದಿನಾಂಕ 28ನೇ ಅಕ್ಟೋಬರ್ 2011**

ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಸಲ್ಲಿಸಿದ್ದ ಅರ್ಜಿ ಸಂಖ್ಯೆ : ಆರ್ಎ 34/2006, ಸಿ/ಡಬ್ಲ್ಯೂ. ಆರ್ಎ 37/2006 ಮತ್ತು ಅರ್ಜಿ ಸಂಖ್ಯೆ 3580 ಮತ್ತು 3581/2006, 3493 ಮತ್ತು 3494/2005, 2287/2006, 2292/2006 ಮತ್ತು 3459 ರಿಂದ 3461/2002 ಗೆ ಸಂಬಂಧಿಸಿದಂತೆ, ನ್ಯಾಯಮಂಡಳಿಯು ದಿನಾಂಕ 23–03–2009 ರಂದು ನೀಡಿರುವ ಆದೇಶದನ್ವಯ, ಸರ್ಕಾರದ ಅಧಿಸೂಚನೆ ಸಂಖ್ಯೆ : ಅಪಜೀ 33 ಅಪಸೇ 2002, ದಿನಾಂಕ 22–03–2005 ರಲ್ಲಿ ಪ್ರಕಟಿಸಲಾದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ವೃಂದದ ಜೇಷ್ಠತಾ ಪಟ್ಟಿಯಲ್ಲಿನ ಕ್ರ.ಸಂ. 151 ರಲ್ಲಿ ಕಾಣಿಸಲಾದ ಶ್ರೀ ಟಿ. ಬಾಲಚಂದ್ರ ಇವರ ಜೇಷ್ಠತೆಯನ್ನು ಪರಿಷ್ಕರಿಸಿ, ಈ ಕೆಳಕಂಡಂತೆ ಪರಿಷ್ಕೃತ ಜೇಷ್ಠತೆಯನ್ನು ನಿಗಧಿಪಡಿಸಿ ಆದೇಶಿಸಿದೆ.

| ಕ್ರ.ಸಂ. | ಹೆಸರು | ವ.ಅ.ಅ. ವೃಂದದಲ್ಲಿನ ಜೇಷ್ಠತಾ ಕ್ರ.ಸಂ. | ನೇರ ನೇಮಕಾತಿ ಬಡ್ತಿ | ಮೀಸಲಾತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನಿರ್ದಿಷ್ಟವಾಗಿ ಬಡ್ತಿ/ನೇರ ನೇಮಕಾತಿ ಹೊಂದಿದ ದಿನಾಂಕ | ವೃಂದಕ್ಕೆ ಅರ್ಹತೆ ಪಡೆದ ದಿನಾಂಕ |
|---|---|---|---|---|---|---|---|---|
| 312ಎ | ಶ್ರೀ ಟಿ. ಬಾಲಚಂದ್ರ | – | ನೇರ | ಸಾಮಾನ್ಯ | 29–10–60 | 09–02–93 | 09–02–93 | 09–02–93 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಬಾಲಕೃಷ್ಣಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ. (ಸೇವೆಗಳು)

**ಪಿ.ಆರ್.1212**

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

**ಸಂಖ್ಯೆ : ಎಲ್ಎನ್ಡಿ (109) (ಎನ್ಎ)–ಸಿಆರ್ 2/2011–12, ಬೆಂಗಳೂರು, ದಿನಾಂಕ 31ನೇ ಅಕ್ಟೋಬರ್ 2011**

**ವಿಷಯ :** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ ಆವಲಹಳ್ಳಿ ಗ್ರಾಮದ ಸ.ನಂ. 80ರ ಬ್ಲಾಕ್ ನಂ.4 ರಲ್ಲಿ 0–10 ಎಕರೆ/ಗುಂಟೆ ಸರ್ಕಾರಿ ಜಮೀನನ್ನು ಶ್ರೀ ಟಿ.ಎನ್. ಮೂರ್ತಿ ಮತ್ತು ಟಿ. ಪ್ರಸಾದ್ ರಾವ್, ನಂ. 160, ಚಲ್ಲಕೆರೆ ಮುಖ್ಯರಸ್ತೆ, ಕಲ್ಯಾಣನಗರ, ಬೆಂಗಳೂರು ಇವರು ಹರಾಜು ಮೂಲಕ ಖರೀದಿಸಿ, ಕರ್ನಾಟಕ ಭೂ ಸುಧಾರಣಾ ಕಾಯ್ದೆ (ತಿದ್ದುಪಡಿ) 2003ರ ಕಲಂ 109 (1) (ii) ರಡಿಯಲ್ಲಿ ಅನುಮತಿ ನೀಡುವ ಬಗ್ಗೆ.

**ಉಲ್ಲೇಖ :** 1) ಸರ್ಕಾರದ ಅಧಿಸೂಚನೆ ಸಂಖ್ಯೆ : ಶಾಇ/47/ಶಾಸನ/2011, ಬೆಂಗಳೂರು, ದಿನಾಂಕ 23–4–2003.

2) ಸರ್ಕಾರದ ಆದೇಶ ಸಂಖ್ಯೆ : ಆರ್ಡಿ 545 ಎಲ್ಜಿಬಿ 2008 (2) ದಿನಾಂಕ 26–12–2008.

3) ಶ್ರೀ ಟಿ.ಎನ್. ಮೂರ್ತಿ ಮತ್ತು ಟಿ. ಪ್ರಸಾದ್ ರಾವ್, ನಂ. 160, ಚಲ್ಲಕೆರೆ ಮುಖ್ಯರಸ್ತೆ, ಕಲ್ಯಾಣನಗರ, ಬೆಂಗಳೂರು ಇವರ ಮನವಿ ದಿನಾಂಕ 28–02–2011.

ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ ಆವಲಹಳ್ಳಿ ಗ್ರಾಮದ ಸ.ನಂ. 80ರ ಬ್ಲಾಕ್ ನಂ.4 ರಲ್ಲಿ 0–10 ಎಕರೆ/ಗುಂಟೆ ಸರ್ಕಾರಿ ಜಮೀನನ್ನು ಸರ್ಕಾರದ ಆದೇಶ ಸಂಖ್ಯೆ : ಆರ್ಡಿ 265 ಎಲ್ಜಿಬಿ 2007 ದಿನಾಂಕ 19–10–2007 ರಂತೆ ಬಹಿರಂಗ ಹರಾಜು ಮಾಡಲು ಅನುಮತಿ ನೀಡಲಾಗಿರುತ್ತದೆ. ಅದರಂತೆ, ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಇವರು ಹೊರಡಿಸಿರುವ ಹರಾಜು ಇಸ್ತಿಹಾರ್ ಆಧರಿಸಿ, ದಿನಾಂಕ 03–11–2007 ರಂದು ಬಹಿರಂಗ ಹರಾಜು ಮಾಡಲಾಗಿದೆ. ಸದರಿ ಜಮೀನಿಗೆ ಶ್ರೀ ಟಿ.ಎನ್. ಮೂರ್ತಿ ಮತ್ತು ಟಿ. ಪ್ರಸಾದ್ ರಾವ್, ನಂ. 160, ಚಲ್ಲಕೆರೆ ಮುಖ್ಯರಸ್ತೆ, ಕಲ್ಯಾಣನಗರ, ಬೆಂಗಳೂರು ಇವರು ರೂ. 41.00 ಲಕ್ಷಗಳಿಗೆ ಅಂತಿಮ ಬಿಡ್ದಾರರಾಗಿದ್ದಾರೆ. ಈ ಹರಾಜನ್ನು ಸರ್ಕಾರದ ಆದೇಶ ಸಂಖ್ಯೆ : ಆರ್ಡಿ 265 ಎಲ್ಜಿಬಿ 2007 (ಪಿ5) ದಿನಾಂಕ 23–11–2007 ರಲ್ಲಿ ಹರಾಜು ಸ್ಥಿರೀಕರಿಸಲು ಅನುಮತಿ ನೀಡಿರುತ್ತಾರೆ.

ವಿಶೇಷ ಜಿಲ್ಲಾಧಿಕಾರಿಗಳು, ಜಾರಿದಳ ಇವರಿಂದ ಹೊರಡಿಸಿದ ಹರಾಜು ಸ್ಥಿರೀಕರಣ ಆದೇಶ ಸಂಖ್ಯೆ ವಿಜಿ (ಜಾ.ದ.) (ಉ.ಅ.) ಹರಾಜು/ಸಿಆರ್/60/2007–08, ದಿನಾಂಕ 11–11–2007 ರನ್ವಯ ರೂ.41,00,000–00 ಗಳನ್ನು ಚಲನ್ ಸಂಖ್ಯೆ 63/110, ದಿನಾಂಕ 1–03–2011, ಚಲನ್ ನಂ. 18995/3 ದಿನಾಂಕ 24–02–2011 ಗಳನ್ವಯ ಸರ್ಕಾರಕ್ಕೆ ಹಣ ಪಾವತಿಸಿರುತ್ತಾರೆ.

ಸರ್ಕಾರದ ಪತ್ರ ಸಂಖ್ಯೆ : ಆರ್‌ಡಿ 6 ಎಲ್‌ಆರ್‌ಎಂ 2008 ದಿನಾಂಕ 31–05–2008 ರನ್ವಯ ಮೇಲ್ಕಂಡ ಸರ್ಕಾರಿ ಜಮೀನನ್ನು ಹರಾಜಿನ ಮೂಲಕ ಖರೀದಿಸಿರುವುದರಿಂದ, ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 2003ರ ಕಲಂ 109 (1) ರ ಪ್ರಕಾರ ಕೃಷಿ ಜಮೀನು ಹೊಂದಲು ಅನುಮತಿ ನೀಡುವ ಬಗ್ಗೆ ಜಿಲ್ಲಾಧಿಕಾರಿಗಳಿಗೆ ಪ್ರದತ್ತವಾದ ಅಧಿಕಾರವಿರುತ್ತದೆ ಎಂದು ತಿಳಿಸಿ, ಅದರಂತೆ ಹರಾಜಿನ ಸ್ಥಿರೀಕರಣದಾರರಿಗೆ ಅನುಮತಿ ನೀಡುವಂತೆ ನಿರ್ದೇಶಿಸಲಾಗಿರುತ್ತದೆ.

ಸದರಿ ಹರಾಜು ಜಮೀನಿನ ಬಿಡ್‌ದಾರರಾದ ಶ್ರೀ ಟಿ.ಎನ್. ಮೂರ್ತಿ ಮತ್ತು ಟಿ. ಪ್ರಸಾದ್ ರಾವ್, ನಂ. 160, ಚಲ್ಲಕೆರೆ ಮುಖ್ಯರಸ್ತೆ, ಕಲ್ಯಾಣನಗರ, ಬೆಂಗಳೂರು ಇವರು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 2003ರ ಕಲಂ 109 (1) (ii) ರಡಿ ಕ್ರಯಕ್ಕೆ ಪಡೆಯಲು ನಮೂನೆ–15ಎ ರಲ್ಲಿ ಅರ್ಜಿ ಸಲ್ಲಿಸಿ, ವಿನಾಯಿತಿ ಕೋರಿರುತ್ತಾರೆ.

ಸದರಿ ಬಿಡ್‌ದಾರರಾದ ಶ್ರೀ ಟಿ.ಎನ್. ಮೂರ್ತಿ ಮತ್ತು ಟಿ. ಪ್ರಸಾದ್ ರಾವ್ ಇವರು ಸ್ವಯಂವೇದ್ಯಿತವಾಗಿ ಹರಾಜಿನಲ್ಲಿ ಪಡೆದುಕೊಂಡಿರುತ್ತಾರೆ.

ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 2003ರ ಕಲಂ 109 (1) (ii) ರ ಪ್ರಕಾರ ಶೈಕ್ಷಣಿಕ ನಿರ್ಮಾಣಕ್ಕಾಗಿ ಸಂಸ್ಥೆಗಳಿಗೆ 10 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಬಗ್ಗೆ ಉಲ್ಲೇಖ (2)ರ ಸರ್ಕಾರದ ಪತ್ರದಲ್ಲಿ ಕರ್ನಾಟಕ (ತಿದ್ದುಪಡಿ) ಕಾಯ್ದೆ 2003ರ ಕಲಂ 109 (1) (ii) ರಡಿ ಶೈಕ್ಷಣಿಕ ಉದ್ದೇಶಕ್ಕಾಗಿ ಅನುಮತಿ ನೀಡುವ ಅಧಿಕಾರ ಜಿಲ್ಲಾಧಿಕಾರಿಗಳಿಗೆ ಪ್ರದತ್ತವಾಗಿರುವುದರಿಂದ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ ಆವಲಹಳ್ಳಿ ಗ್ರಾಮದ ಸ.ನಂ. 80ರ ಬ್ಲಾಕ್ ನಂ. 4 ರಲ್ಲಿ 0–10 ಎಕರೆ/ಗುಂಟೆ ಜಮೀನನ್ನು ಶ್ರೀ ಟಿ.ಎನ್. ಮೂರ್ತಿ ಮತ್ತು ಟಿ. ಪ್ರಸಾದ್ ರಾವ್, ನಂ. 160, ಚಲ್ಲಕೆರೆ ಮುಖ್ಯರಸ್ತೆ, ಕಲ್ಯಾಣನಗರ, ಬೆಂಗಳೂರು ಇವರ ಹೆಸರಿಗೆ ವ್ಯವಸಾಯದ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣಾ (ತಿದ್ದುಪಡಿ) ಕಾಯ್ದೆ 2003ರ ಕಲಂ 109 (1) (ii) ರ ಪ್ರಕಾರ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ ಶಾಇ 47/ಶಾಸನ/2011 ಬೆಂಗಳೂರು ದಿನಾಂಕ 23–04–2003 ರಂತೆ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ, ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯ್ಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ –ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೋಣೆಮಾಡಿ ಸಾಲ ಪಡೆಯುವುದನ್ನು ಹೊರತು ಪಡಿಸಿ, ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೇ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಕೃಷಿ ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ನಿರ್ಮಾಣದ ಉದ್ದೇಶಕ್ಕೆ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೇ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95(2) ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು ಹಾಗೂ ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಇವರಿಂದ ಅನುಮೋದಿತಗೊಂಡಿರುವ ಆರ್.ಎಂ.ಪಿ. 2015ರ ಸಿ.ಡಿ.ಪಿ. ಆಧರಿಸಿ, ಹಸಿರು/ಕೃಷಿ ವಲಯ ವ್ಯಾಪ್ತಿಯೊಳಗೆ ಬಂದರೆ ಅದರಿಂದ ಅನುಮತಿ ಪಡೆದು, ಜಮೀನನ್ನು ಉದ್ದೇಶಿತ ಉಪಯೋಗಕ್ಕೆ ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿಸಿ, ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರನ್ವಯ ಮಾತ್ರ ನೀಡಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
8. ಪ್ರಸ್ತುತ ಬಿಡ್‌ದಾರರು ಎರಡು ವರ್ಷಗಳಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಸೂಕ್ತ ಅನುಮೋದನೆ ಪಡೆದುಕೊಳ್ಳುವ ಷರತ್ತಿಗೊಳಪಡಿಸಿ, ಅನುಮತಿ ನೀಡಿದೆ.

**ಎಂ.ಕೆ. ಅಯ್ಯಪ್ಪ,**

ಪಿ.ಆರ್.1213

ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು

ನಗರಾಭಿವೃದ್ಧಿ ಇಲಾಖೆ

**ಅಧಿಸೂಚನೆ**

**ಸಂಖ್ಯೆ : ನಅಇ 468 ಬೆಂಭೂಸ್ವಾ 2011, ಬೆಂಗಳೂರು, ದಿನಾಂಕ 04ನೇ ನವೆಂಬರ್ 2011**

ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಹಲಗೇವಡೇರಹಳ್ಳಿ ಗ್ರಾಮದ ಸರ್ವೆ ನಂ. 251 ರಲ್ಲಿ 5 ಎಕರೆ ಜಮೀನನ್ನು ಭೂಸ್ವಾಧೀನ ಕಾಯ್ದೆ ಕಲಂ 48(1) ರನ್ವಯ ಭೂಸ್ವಾಧೀನದಿಂದ ಕೈಬಿಟ್ಟು ಹೊರಡಿಸಲಾಗಿದ್ದ ದಿನಾಂಕ 12–01–2010ರ ಅಧಿಸೂಚನೆ ಸಂಖ್ಯೆ UDD 165 MNX 2004 ನ್ನು ಪುನರ್ ಪರಿಶೀಲಿಸಲಾಗಿದ್ದು, ಸದರಿ ದಿನಾಂಕ 12–01–2010ರ ಅಧಿಸೂಚನೆಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಪ್ರೇಮಚಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಪಿ.ಆರ್.1215**

## IN THE COURT OF THE CIVIL AND J.M.F.C., HARAPANAHALLI

## NOTIFICATION

It is notified that the unclaimed property vehicle i.e., T.V.S. X.L. Motor Bike Chassi No. P3302 F. 724476 seized by the Police Sub Inspector. Of Harapanahalli Police Station. In Crime No. 31/2010 (C.C.215/2010) under P.F. No. 13/2010, against the accused. This case was disposed on 27-12-2010 and nobody claimed the property.

Hence, it is notified to the public that if anybody is owner of these properties may claim by showing its ownership and shall appear before the Civil Judge and J.M.F.C., Harapanahalli and shall prove the ownership within two months from this day of Notification. Otherwise, The vehicle will be sold in public auction before this Court within 6 months after the date of the Gazette Notification.

Given Under my hand and seal of this Court dated 17th day of November 2011.

...................................
Civil Judge and J.M.F.C.,
Harapanahalli.

**P.R. 1240**

## IN THE COURT OF THE CIVIL AND J.M.F.C., HARAPANAHALLI

## NOTIFICATION

It is notified that the unclaimed property vehicle i.e., Red colored C.D. 100 Delex Hero Honda Motor Bike bearing Regn. No. kA-35/5737 Charsi No. 00 M13 F 09270, Engine No. 00 M13 E 16249 seized by the Police Sub Inspector, Of Harapanahalli Police Station, in Crime No. 01/2004 under P.F. No. 01/2004, against the accused. This case was disposed on 06-06-2005 and nobody claimed the property.

Hence, it is notified to the public that if anybody is owner of these properties may claim by showing its ownership and shall appear before The Civil Judge and J.M.F.C., Harapanahalli and shall prove the ownership within two months from this day of Notification. Otherwise, the vehicle will be sold in public auction before this Court within 6 months after the date of the Gazette Notification.

Given Under my hand and seal of this Court dated 09th day of November 2011.

...................................
Civil Judge and J.M.F.C.,
Harapanahalli.

**P.R. 1241**

## ವಿಮಾ ಇಲಾಖೆ

**ನಿರ್ದೇಶನಾಲಯ, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೆಂಗಳೂರು–1**

**ಅಧಿಸೂಚನೆ**

**ಸಂಖ್ಯೆ : ವಿನಿ/ಸಿಶಾ/ಮುಂಬಡ್ತಿ/1313/2011–12, ಬೆಂಗಳೂರು, ದಿನಾಂಕ 04ನೇ ನವೆಂಬರ್ 2011**

ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ಈ ಕೆಳಕಂಡ ಅಧೀಕ್ಷಕರುಗಳಿಗೆ ರೂ.11400–300–12300–350–14400–400–16800–450–19500–525–21600 ವೇತನ ಶ್ರೇಣಿಯಲ್ಲಿ ಸಹಾಯಕ ನಿರ್ದೇಶಕರು/ಜಿಲ್ಲಾ ವಿಮಾಧಿಕಾರಿಗಳ ಹುದ್ದೆಗೆ ಮುಂಬಡ್ತಿ ನೀಡಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರ ಹೆಸರಿನ ಮುಂದೆ ನಮೂದಿಸಿರುವ ಸ್ಥಳಕ್ಕೆ ನೇಮಿಸಿದೆ.

| ಕ್ರಮ ಸಂಖ್ಯೆ | ಹೆಸರು ಹಾಗೂ ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಹುದ್ದೆ ಮತ್ತು ಕಛೇರಿ<br>ಶ್ರೀಯುತರು: | ಮುಂಬಡ್ತಿಯ ನಂತರ ನೇಮಿಸಲಾದ ಹುದ್ದೆ, ಕಛೇರಿ ಮತ್ತು ಸ್ಥಳ |
|---|---|---|
| 1. | ಆರ್. ಮುನಿರಾಜು,<br>ಅಧೀಕ್ಷಕರು, ವಿಮಾ ನಿರ್ದೇಶನಾಲಯ, ಬೆಂಗಳೂರು | ಸಹಾಯಕ ನಿರ್ದೇಶಕರು, ಕೇಂದ್ರ ಕಛೇರಿ, ಬೆಂಗಳೂರು |
| 2. | ಜಿ.ಎಂ. ಕುಮಾರ್<br>ಅಧೀಕ್ಷಕರು, ಜಿಲ್ಲಾ ವಿಮಾ ಕಛೇರಿ, ಶಿವಮೊಗ್ಗ | ಜಿಲ್ಲಾ ವಿಮಾಧಿಕಾರಿ, ಶಿವಮೊಗ್ಗ |
| 3. | ಆರ್.ಎಸ್. ಮಠ್,<br>ಅಧೀಕ್ಷಕರು, ಜಿಲ್ಲಾ ವಿಮಾ ಕಛೇರಿ, ಬಳ್ಳಾರಿ | ಜಿಲ್ಲಾ ವಿಮಾಧಿಕಾರಿ, ಬಳ್ಳಾರಿ |
| 4. | ಪಿ.ಎಸ್.ಡಿ. ಮಠ್,<br>ಅಧೀಕ್ಷಕರು, ಜಿಲ್ಲಾ ವಿಮಾ ಕಛೇರಿ, ಕಾರವಾರ (ಉತ್ತರ ಕನ್ನಡ) | ಜಿಲ್ಲಾ ವಿಮಾಧಿಕಾರಿ, ಕಾರವಾರ |

ನಿರ್ದೇಶಕರು,
ವಿಮಾ ಇಲಾಖೆ

**ಪಿ.ಆರ್. 1243**

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ಅಧಿಸೂಚನೆ**

**ಸಂಖ್ಯೆ : ಮಮಇ 141 ಎಸ್‌ಜೆಡಿ 2009, ಬೆಂಗಳೂರು ದಿನಾಂಕ : 30–6–2011.**

ಸರ್ಕಾರದ ಅಧಿಸೂಚನೆ ಸಂಖ್ಯೆ : ಮಮಇ 141 ಎಸ್‌ಜೆಡಿ 2009, ದಿನಾಂಕ : 10–11–2010ನ್ನು ಕೂಡಲೇ ಜಾರಿಗೆ ಬರುವಂತೆ ಹಿಂಪಡೆದು ಈ ಕೆಳಕಂಡ ಉಪ ನಿರ್ದೇಶಕರ ವೃಂದದ ಅಧಿಕಾರಿಗಳಿಗೆ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ದಿನಾಂಕಗಳಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಆರ್.ಪಿ.ಪಿ.ಪಿ) ನಿಯಮಾವಳಿ 1978ರ ನಿಯಮ 2(1)(3)ರಡಿ (ವೇತನ ಶ್ರೇಣಿ ರೂ. 9580–14220) ಪೂರ್ವಾನ್ವಯವಾಗಿ ಸಹಾಯಕ ನಿರ್ದೇಶಕರ ವೃಂದದ ಜೇಷ್ಠತಾ ಪಟ್ಟಿಯ ಪುನರಾವಲೋಕನೆಯ ಷರತ್ತಿಗೊಳಪಟ್ಟು ನಿಗಧಿಪಡಿಸಲು ಆದೇಶಿಸಿದೆ.

| ಕ್ರ. ಸಂ. | ಅಧಿಕಾರಿಗಳ ಹೆಸರು | ಉಪ ನಿರ್ದೇಶಕರ ವೃಂದಕ್ಕೆ ಪೂರ್ವಾನ್ವಯವಾಗಿ ನಿಗಧಿಪಡಿಸಿದ ಜೇಷ್ಠತಾ ದಿನಾಂಕ |
|---|---|---|
| 1. | ಯು. ಬಸವರಾಜು | 16–6–2001 |
| 2. | ಶಶಿಕಲಾ ಯು ಶೆಟ್ಟಿ | 3–6–2002 |
| 3. | ಮಾಲತಿ ಎಸ್. ಪೋಳ್ | 3–6–2002 |
| 4. | ಎನ್. ಮುನಿರೆಡ್ಡಿ | 28–6–2002 |
| 5. | ಶಹರ್ ಭಾನು | 28–6–2002 |
| 6. | ಎಂ.ಎಸ್. ಜಯಸ್ವಾಮಿ | 28–6–2002 |
| 7. | ಹೆಚ್.ಪಿ ಶಿವಶಂಕರ್ | 11–2–2003 |
| 8. | ವಿ. ದೊರೆಸ್ವಾಮಿ | 11–2–2003 |

| ಕ್ರ. ಸಂ. | ಅಧಿಕಾರಿಗಳ ಹೆಸರು | ಉಪ ನಿರ್ದೇಶಕರ ವೃಂದಕ್ಕೆ ಪೂರ್ವಾನ್ವಯವಾಗಿ ನಿಗಧಿಪಡಿಸಿದ ಜೇಷ್ಠತಾ ದಿನಾಂಕ |
|---|---|---|
| 9. | ಎನ್.ಆರ್. ವಿಜಯ್ | 11–2–2003 |
| 10. | ಯೇಸುಪುತ್ರಮ್ಮ | 11–2–2003 |
| 11. | ಹೆಚ್.ಸಿ. ಚಿದಾನಂದ | 11–2–2003 |
| 12. | ಹೆಚ್.ಜೆ. ಚಂದ್ರಶೇಖರಯ್ಯ | 11–2–2003 |
| 13. | ಗೆಟ್ರೂಡ್ ವೇಗಸ್ | 11–2–2003 |
| 14. | ಎಂ.ಎನ್. ಪ್ರೇಮಕುಮಾರಿ | 11–2–2003 |
| 15. | ರಮೇಶ್ ಹಾಲಭಾವಿ | 11–2–2003 |
| 16. | ಎಂ. ರಾಧಾಕೃಷ್ಣ | 11–2–2003 |
| 17. | ಕೆ.ಹೆಚ್. ಓಬಳಪ್ಪ | 11–2–2003 |
| 18. | ವಿ. ವಾಸುದೇವ್ | 11–2–2003 |
| 19. | ಹೆಚ್.ಕೆ. ದಾಸಪ್ಪ | 11–2–2003 |
| 20. | ಬಿ. ವಿಮಲ | 11–2–2003 |
| 21. | ಪ್ರಭಾವತಿ ಕರ್ನಿಂಗ್ | 26–4–2003 |

**ಭಾಗ–2**

ಸರ್ಕಾರದ ಅಧಿಸೂಚನೆ ಸಂಖ್ಯೆ : ಮಮಇ 141 ಎಸ್‌ಜೆಡಿ 2009, ದಿನಾಂಕ : 10–11–2010 ನ್ನು ಕೂಡಲೇ ಜಾರಿಗೆ ಬರುವಂತೆ ಹಿಂಪಡೆದು ಪ್ರಸ್ತುತ ಉಪ ನಿರ್ದೇಶಕರ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿ ಕಾರ್ಯನಿರ್ವಹಿಸುತ್ತಿರುವ ಹಾಗೂ ಸ್ವತಂತ್ರ ಪ್ರಭಾರದಲ್ಲಿ ಕಾರ್ಯನಿರ್ವಹಿಸಿ ನಿವೃತ್ತಿ/ನಿಧನ ಹೊಂದಿರುವ ಈ ಕೆಳಕಂಡ ಅಧಿಕಾರಿಗಳಿಗೆ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ದಿನಾಂಕಗಳಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಆರ್.ಪಿ.ಪಿ.ಪಿ) ನಿಯಮಾವಳಿ 1978ರ ನಿಯಮ 2(1)(3) ರಡಿ (ವೇತನ ಶ್ರೇಣಿ ರೂ. 9580–14220) ಪೂರ್ವಾನ್ವಯವಾಗಿ ಸಹಾಯಕ ನಿರ್ದೇಶಕರ ಜೇಷ್ಠತಾ ಪಟ್ಟಿಯ ಪುನರಾವಲೋಕನೆಯ ಷರತ್ತಿನ ಮೇರೆಗೆ ನಿಗಧಿಪಡಿಸಲು ಆದೇಶಿಸಿದೆ.

| ಕ್ರ. ಸಂ. | ಅಧಿಕಾರಿಗಳ ಹೆಸರು | ಉಪ ನಿರ್ದೇಶಕರ ವೃಂದಕ್ಕೆ ಪೂರ್ವಾನ್ವಯವಾಗಿ ನಿಗಧಿಪಡಿಸಿದ ಜೇಷ್ಠತಾ ದಿನಾಂಕ | ಷರಾ |
|---|---|---|---|
| **1** | **2** | **3** | **4** |
| 1. | ಕೆ. ಗೋಪಾಲಕೃಷ್ಣ | 11–2–2003 | |
| 2. | ವೈ. ಕೃಷ್ಣಪ್ಪ | 11–2–2003 | ನಿಧನ |
| 3. | ರಮೇಶ್ ಪಿ. ಭರಸ್ಕಳೆ | 11–2–2003 | |
| 4. | ಬಿ.ಎಂ. ನಂದೂರ್ | 11–2–2003 | ನಿವೃತ್ತಿ |
| 5. | ಆರ್.ಜಿ. ಲಮಾಣಿ | 11–2–2003 | ನಿವೃತ್ತಿ |
| 6. | ಸಿ. ಪ್ರೇಮಕುಮಾರಿ | 8–9–2003 | ನಿವೃತ್ತಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ಪಿ.ಆರ್. 678**

**ಒಳಾಡಳಿತ ಇಲಾಖೆ**

**ಅಧಿಸೂಚನೆ**

**ಸಂಖ್ಯೆ : ಒಇ 212 ಪೊಸಿಪ 2011, ಬೆಂಗಳೂರು ದಿನಾಂಕ : 29–9–2011.**

ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ : ಹೆಚ್‌ಡಿ 88 ಪಿಇಜಿ 1998 ದಿನಾಂಕ : 10–12–1999 ರಲ್ಲಿ ಕರ್ನಾಟಕ ರಾಜ್ಯ ಪೊಲೀಸ್ ಇಲಾಖೆಯ ಡಿವೈ.ಎಸ್.ಪಿ. (ಎಫ್.ಪಿ.ಬಿ.) ವೃಂದದಲ್ಲಿ 2–12–1996ಕ್ಕೆ ಅಂತ್ಯಗೊಂಡಂತೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿತ್ತು. ತದನಂತರದ ಅವಧಿಯಲ್ಲಿ ಯಾವುದೇ ತಾತ್ಕಾಲಿಕ/ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿರುವುದಿಲ್ಲ. ಆದ್ದರಿಂದ ದಿನಾಂಕ :2–12–1996 ರಿಂದ ದಿನಾಂಕ: 1–1–2011 ರ ವರೆಗೆ ನೇಮಕಾತಿ ಹೊಂದಿದ ಅಧಿಕಾರಿಗಳನ್ನು ಒಳಗೊಂಡಂತೆ ಡಿವೈ.ಎಸ್.ಪಿ. (ಎಫ್.ಪಿ.ಬಿ.) ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಅನುಬಂಧಕ್ಕೆ ಲಗತ್ತಿಸಿದಂತೆ ಪ್ರಕಟಿಸಲಾಗಿದೆ. ಅನುಬಂಧದಲ್ಲಿ ನಮೂದಿಸಿದ ಅಧಿಕಾರಿಗಳ ಜೇಷ್ಠತೆ : ಸೇವಾ ವಿವರಗಳ ಕುರಿತಂತೆ ಯಾವುದಾದರೂ ಆಕ್ಷೇಪಣೆ/ ಸಲಹೆಗಳಿದ್ದಲ್ಲಿ ಅವುಗಳನ್ನು ಲಿಖಿತವಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, ವಿಧಾನಸೌಧ, ಬೆಂಗಳೂರು ರವರಿಗೆ ಸದರಿ ಅಧಿಸೂಚನೆ ಗೆಜೆಟ್‌ನಲ್ಲಿ ಪ್ರಕಟಿಸಿದ ದಿನಾಂಕದಿಂದ 30 ದಿನಗಳಲ್ಲಿ ಸಲ್ಲಿಸತಕ್ಕದ್ದು. ತದನಂತರದ ಅವಧಿಯಲ್ಲಿ ಬಂದಂತಹ ಸಲಹೆ/ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ANNEXURE**

**Grandation List of Dy SP (FPB) As on 01-01-2011**

| Sl. No. | Name Sriyuths | Date of Birth | Date of Entry into service | Date of Promotion | Date of report in Promotion post | Caste SC/ST | Remarks |
|---|---|---|---|---|---|---|---|
| 1. | C.K. Nanaiah | 2-4-1945 | 11-5-1970 | 24-3-1995 | 24-3-1995 | | Promoted & Retired |
| 2. | M. Narasimhaiah | 2-4-1952 | 20-10-1975 | 24-3-1995 | 24-3-1995 | SC | Promoted |
| 3. | I.S. Enner | 1-6-1946 | 11-5-1970 | 1-12-1999 | 17-12-1999 | | Retired |
| 4. | B.N. Chougule | 1-3-1943 | 11-5-1970 | 1-12-1999 | 20-12-1999 | | Retired |
| 5. | H.T. Shankarappa | 6-10-1945 | 11-5-1970 | 1-12-1999 | 24-12-1999 | | Retired |
| 6. | H.V. Deshpande | 25-7-1947 | 11-5-1970 | 1-12-1999 | 17-1-2000 | | Retired |
| 7. | T.S. Nagaraj | 20-8-1945 | 11-5-1970 | 1-12-1999 | 23-12-1999 | | Retired |
| 8. | Chandrashekar Kalyan | 18-12-1950 | 20-10-1975 | 23-10-2001 | 8-12-2001 | | Retired |
| 9. | B.C. Shankar | 2-11-1943 | 11-5-1970 | 17-11-2001 | 20-11-2001 | | Retired |
| 10. | Thammanna | 20-4-1952 | 20-10-1975 | 28-3-2002 | 1-4-2002 | | |
| 11. | J.R. Kote | 1-1-1952 | 20-10-1975 | 28-3-2002 | 1-4-2002 | | |
| 12. | S.A. Khader | 12-8-1950 | 20-10-1975 | 7-2-2004 | 12-2-2004 | | Retired |
| 13. | A.M. Kulkarni | 1-5-1950 | 20-10-1975 | 7-2-2004 | 23-2-2004 | | Retired |
| 14. | R. Ramesh | 3-10-1949 | 5-11-1977 | 7-2-2004 | 12-2-2004 | SC | Retired |
| 15. | Inayathulla Khan | 1-1-1949 | 20-10-1975 | 27-7-2004 | 27-7-2004 | | Retired |
| 16. | G.N. Varikar | 14-2-1952 | 20-10-1975 | 27-4-2006<br>13-2-2008 | 27-4-2006<br>13-2-2008 | | Retrospective Promotion with effect from 27-4-2006 |
| 17. | K.R. Venkatesh | 20-12-1954 | 5-11-1977 | 27-4-2006 | 4-5-2006 | | |

| | | | | | | | |
|---|---|---|---|---|---|---|---|
| 18. | R. Narayanappa | 20-1-1950 | 5-11-1977 | 27-4-2006 | 8-5-2006 | | Retired |
| 19. | K.B. Balakrishna | 4-3-1954 | 5-11-1977 | 27-4-2006 | 4-5-2006 | | |
| 20. | M. Prabhuswamy | 5-6-1953 | 5-11-1977 | 27-4-2006 | 4-5-2006 | | |
| 21. | M.B. Somesh | 2-10-1955 | 5-11-1977 | 27-4-2006 | 4-5-2006 | | |
| 22. | J.V. Vasu | 3-7-1953 | 5-11-1977 | 6-11-2008 | 24-11-2008 | | |
| 23. | K.N. Krishnamurthy | 1-1-1952 | 1-8-1979 | 6-11-2008 | 3-12-2008 | | |
| 24. | P. Prakash | 28-5-1956 | 1-8-1979 | 6-11-2008 | 4-12-2008 | | |

No. HD 212 Posipa 2011

By Order and in the Name of the Govenor of Karnataka

**T.N. RAVIPRAKASH**

Under Secretary to Government,

Home Department (Police Services)

**P.R. No. 1059**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ ಚಾಮರಾಜಪೇಟೆ, ಬೆಂಗಳೂರು–18.

### ದಾವಾ ಅರ್ಜಿ ಸಂಖ್ಯೆ : ಜೆಆರ್‌ಬಿ/ಡಿಎಸ್/723/2009–10, ದಿನಾಂಕ : 8–1–2010.

| ವಾದಿ | ಪ್ರತಿವಾದಿಗಳು |
|---|---|
| ಕಾರ್ಯದರ್ಶಿ ಸಗರ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ. 39, 4ನೇ ಮುಖ್ಯ ರಸ್ತೆ, ರಾಮಮೋಹನಪುರ, ದೇವಯ್ಯಪಾರ್ಕ್ ಹತ್ತಿರ, ಬೆಂಗಳೂರು–560021 | 1. ವೈ.ಎಸ್. ರೇಣುಗೋಪಾಲ S/o ವೈ.ಎಚ್. ಶಿವಣ್ಣ ನಂ. 570, 15ನೇ ಮುಖ್ಯ ರಸ್ತೆ, 23ನೇ ಅಡ್ಡ ರಸ್ತೆ, 3ನೇ ಹಂತ, ಹೆಚ್.ಎಸ್.ಆರ್. ಲೇಔಟ್, ಬೆಂಗಳೂರು–560034.<br>2. ಶ್ರೀ ವೈ.ಹೆಚ್. ಶಿವಣ್ಣ S/o ಲೇಟ್ ಹನುಮಂತಯ್ಯ, ನಂ. 570, 15ನೇ ಮುಖ್ಯ ರಸ್ತೆ, 23ನೇ ಅಡ್ಡ ರಸ್ತೆ, 3ನೇ ಹಂತ, ಹೆಚ್.ಎಸ್.ಆರ್. ಲೇಔಟ್, ಬೆಂಗಳೂರು–560034. |

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಆದೇಶಕ್ಕೆ ಮುನ್ನ ಜಪ್ತಿ ಮಾಡುವ ಸಲುವಾಗಿ ತಿಳುವಳಿಕೆ ನೋಟೀಸು**

**ಪ್ರಸ್ತಾವನೆ :**

1. ವಾದಿಯು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ರಡಿ ದಾವ ಅರ್ಜಿಯನ್ನು ಸಲ್ಲಿಸಿ, ಪ್ರತಿವಾದಿಯಿಂದ ಸಂಘಕ್ಕೆ ಬರಬೇಕಾಗಿರುವ ರೂ. 3,11,381/– (ಮೂರು ಲಕ್ಷದ ಹನ್ನೊಂದು ಸಾವಿರದ ಮೂರು ನೂರ ಎಂಭತ್ತೊಂದು ರೂಪಾಯಿಗಳು ಮಾತ್ರ) ಗಳನ್ನು ಮತ್ತು ಈ ಮೊತ್ತಕ್ಕೆ ದಿನಾಂಕ : 1–7–2009 ರಿಂದ ಸಾಲಿಯಾನ ಶೇಕಡ 18 ರಂತೆ ಬಡ್ಡಿಯನ್ನು ವಸೂಲಿ ಮಾಡಿಕೊಳ್ಳಲು ಆದೇಶ ಹೊರಡಿಸಬೇಕೆಂದು ಈ ನ್ಯಾಯಾಲಯದಲ್ಲಿ ದಾವೆಯನ್ನು ಹೂಡಿರುತ್ತಾರೆ. ಈ ದಾವೆಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಯಿತು. ಮೂಲ ದಾವಾ ಅರ್ಜಿಯ ಜೊತೆ ವಾದಿಯು ಸಹಕಾರ ಸಂಘಗಳ ಕಾಯಿದೆ 1959 ಕಲಂ 103 ರಡಿ ಆದೇಶ ಪೂರ್ವ ಜಪ್ತಿ ಆದೇಶವನ್ನು ಹೊರಡಿಸಬೇಕೆಂದು ಪ್ರಮಾಣ ಪತ್ರದೊಂದಿಗೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಈ ಕುರಿತು ಈ ನ್ಯಾಯಾಲಯವು ಕ್ರಮವಿಟ್ಟಿರುತ್ತದೆ.

2. ಒಂದನೇ ಪ್ರತಿವಾದಿಯವರು ದಿನಾಂಕ : 8–11–2000 ರಿಂದ 7–5–2002 ರವರೆಗೆ ಅರ್ಜಿದಾರರ ಸಂಘದಲ್ಲಿ ಕಾರ್ಯದರ್ಶಿಯಾಗಿ ಕೆಲಸ ನಿರ್ವಹಿಸಿದ್ದು ನಂತರ, ಕೆಲಸಕ್ಕೆ ಬರುವುದನ್ನು ಅನಧಿಕೃತವಾಗಿ ನಿಲ್ಲಿಸಿರುತ್ತಾರೆ. ಸಂಘದ ಮುಖ್ಯ ಕಾರ್ಯನಿರ್ವಾಹಕರಾಗಿ ಪ್ರಮಾಣಿಕವಾಗಿ ಮತ್ತು ನಂಬಿಕೆಯಿಂದ ಕೆಲಸ ಮಾಡದೆ ಸಂಘದ ಬಂಡವಾಳದಲ್ಲಿ ರೂ. 5,35,270/– (ಐದು ಲಕ್ಷದ ಮುವತ್ತೈದು ಸಾವಿರದ ಎರಡು ನೂರ ಎಪ್ಪತ್ತು ರೂಪಾಯಿಗಳು ಮಾತ್ರ) ದುರುಪಯೋಗ ಪಡಿಸಿಕೊಂಡಿರುವುದಾಗಿ, ಇದನ್ನು 2001–02, 2002–03, ಮತ್ತು 2003–04 ರ ಆಡಿಟ್ ವರದಿಯಲ್ಲಿ ನಮೂದಾಗಿರುವುದಾಗಿ ದಾವಾ ಅರ್ಜಿಯಲ್ಲಿ ತಿಳಿಸಿರುತ್ತಾರೆ. ಎರಡನೇ ಎದುರು ಅರ್ಜಿದಾರ ಒಂದನೇ ಎದುರು ಅರ್ಜಿದಾರರ ತಂದೆ ಆಗಿರುವುದಾಗಿ, ಈ ದುರುಪಯೋಗದ ಮೊತ್ತವನ್ನು ಇವರುಗಳಿಬ್ಬರು ಪಾವತಿಸಲು ಒಪ್ಪಿಕೊಂಡಿರುವುದಾಗಿ ದಾವಾ ಅರ್ಜಿಯಲ್ಲಿ ತಿಳಿಸಿರುತ್ತಾರೆ. ದಿನಾಂಕ : 30–6–2009ರ ಅಂತ್ಯಕ್ಕೆ ಬಡ್ಡಿ ಹಾಗೂ ಇತರೆ ಸೇರಿ ರೂ. 8,41,931/–ಗಳು (ಎಂಟು ಲಕ್ಷದ ನಲವತ್ತೊಂದು ಸಾವಿರದ ಒಂಭೈನೂರಾ ಮುವತ್ತೊಂದು ರೂಪಾಯಿಗಳು ಮಾತ್ರ) ಬರಬೇಕಾಗಿದ್ದು ಇದರಲ್ಲಿ ವಿವಿಧ ದಿನಾಂಕಗಳಲ್ಲಿ ರೂ. 5,30,550/– (ಐದು ಲಕ್ಷದ ಮೂವತ್ತು ಸಾವಿರದ ಐದು ನೂರಾ ಐವತ್ತು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಿರುವುದಾಗಿ, ಬಾಕಿ ಹಣದ

ಪಾವತಿಗಾಗಿ 2ನೇ ಎದುರು ಅರ್ಜಿದಾರರಿಗೆ ಸೇರಿದ ಷೆಡ್ಯೂಲ್ ಸ್ವತ್ತನ್ನು ಸೆಕ್ಯೂರಿಟಿಯಾಗಿ ನೀಡಿರುವುದಾಗಿ ಒಪ್ಪಿಕೊಂಡಿದಾಗ್ಯೂ, ಇಲ್ಲಿಯವರೆಗೆ ಬಾಕಿ ಹಣಪಾವತಿಸಲು ಕ್ರಮವಿಡದೆ ಇರುವುದರಿಂದಲೂ ಷೆಡ್ಯೂಲ್ ಸ್ವತ್ತನ್ನು ಮಾರಾಟ ಅಥವಾ ವರ್ಗವಾಣೆ ಮಾಡಬಹುದೆಂಬ ನಿರೀಕ್ಷಣೆ ವಿಷಯವನ್ನು ಈ ನ್ಯಾಯಾಲಯದ ಗಮನಕ್ಕೆ ತಂದು 2ನೇ ಪ್ರತಿವಾದಿಯ ಹೆಸರಿಗೆ ಸೇರಿದ ಸ್ಥಿರಾಸ್ತಿಯನ್ನು ಆದೇಶಕ್ಕೆ ಪೂರ್ವ ಜಪ್ತಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

3. ವಾದಿಯೂ ಕಲಂ 103ರ ಅರ್ಜಿ ಮತ್ತು ಅರ್ಜಿಯ ಜೊತೆ ಸಲ್ಲಿಸಿರುವ ಪ್ರಮಾಣ ಪತ್ರದಲ್ಲಿ ವ್ಯಕ್ತ ಪಡಿಸಿರುವ ಅಂಶಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿ, ಮೇಲ್ನೋಟಕ್ಕೆ ವಾಸ್ತವ ಸಂಗತಿ ಎಂದು ಕಂಡುಬಂದಿರುತ್ತದೆ ಹಾಗೂ 2ನೇ ಪ್ರತಿವಾದಿ ಹೆಸರಿನಲ್ಲಿರುವ ಸ್ಥಿರಾಸ್ತಿಯು ಪರಭಾರೆಯಾದಲ್ಲಿ ಪ್ರತಿವಾದಿಗಳಿಂದ ವಾದಿ ಸಂಘಕ್ಕೆ ಬರಬೇಕಾಗಿರುವ ಮೊತ್ತ ವಸೂಲಿ ಮಾಡುವುದು ಸಾಧ್ಯವಾಗದಂತಹ ಪರಿಸ್ಥಿತಿ ಉಂಟಾಗುವ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುವ ಹಿನ್ನೆಲೆಯಲ್ಲಿ ಕಲಂ 103ರ ಆದೇಶಕ್ಕೆ ಪೂರ್ವ ಜಪ್ತಿ ಆದೇಶ ಹೊರಡಿಸುವ ಅವಶ್ಯಕತೆ ಮನಗಂಡು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

## ಆದೇಶ

ಮೇಲೆ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿ.ಓ. 139 ಸಿ.ಎಂ.ಎಲ್. 2010, ದಿನಾಂಕ : 17–2–2011 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಸಿ.ಎಸ್. ವೀರೇಶ್ ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಆದ ನಾನು 2ನೇ ಪ್ರತಿವಾದಿ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ಈ ಪ್ರಕರಣದ ಅಂತಿಮ ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಆದೇಶ ಹೊರಡಿಸಿರುತ್ತೇನೆ.

ಪ್ರತಿವಾದಿಯು ಒಂದು ವೇಳೆ ಈ ಜಪ್ತಿ ಪೂರ್ವ ಆದೇಶದಲ್ಲಿ ತಿಳಿಸಿರುವ ಯಾವುದೇ ಸ್ಥಿರಾಸ್ತಿಯನ್ನು/ಸ್ಥಿರಾಸ್ತಿ ಭಾಗವನ್ನು ಈ ಆದೇಶದಿಂದ ಮುಕ್ತ ಮಾಡಿಸಿಕೊಳ್ಳಲು ಇಚ್ಛಿಸಿದಲ್ಲಿ ಈ ದಾವ ಅರ್ಜಿಯಲ್ಲಿ ವಾದಿಯು ಕ್ಲೈಮ್ ಮಾಡಿರುವ ಮೊತ್ತ ರೂ. 3,11,381/– (ಮೂರು ಲಕ್ಷದ ಹನ್ನೊಂದು ಸಾವಿರದ ಮೂರು ನೂರ ಎಂಭತ್ತೊಂದು ರೂಪಾಯಿಗಳು ಮಾತ್ರ)ಗಳನ್ನು ವಾದಿ ಸಂಘದಲ್ಲಿ ಅಮಾನತ್ತು ಖಾತೆಗೆ ಆದೇಶ ಹೊರಡಿಸಿದ 30 ದಿವಸದೊಳಗಾಗಿ ಜಮಾ ಮಾಡಿ ಅಧಿಕೃತ ಚಲನ್/ ರಸೀದಿಯನ್ನು ಹಾಜರುಪಡಿಸಿದಲ್ಲಿ ಈ ಆದೇಶದಲ್ಲಿ ತಿಳಿಸಿರುವ ಷೆಡ್ಯೂಲ್ ಸ್ವತ್ತನ್ನು ಮುಕ್ತಗೊಳಿಸುವ ಷರತ್ತಿಗೆ ಒಳಪಟ್ಟಿರುತ್ತದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿರುವಂತೆ ಈ ಆದೇಶ ಹೊರಡಿಸಿದ 30 ದಿವಸಗಳೊಳಗಾಗಿ ಅವಶ್ಯಕವಿರುವ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಈ ಆದೇಶ ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ಯಾವುದೇ ವ್ಯಕ್ತಿಗಳಿಗೆ ಈ ಆಸ್ತಿ ಪೂರ್ವ ಜಪ್ತಿ ಆದೇಶವು ಒಳಪಟ್ಟಿರುತ್ತದೆ.

## ಷೆಡ್ಯೂಲ್ ಆಸ್ತಿ ವಿವರ

ಬೆಂಗಳೂರು ನಗರಕ್ಕೆ ಸೇರಿದ ಹೊಸೂರು ಸರ್ಜಾಪುರ ಮುಖ್ಯ ರಸ್ತೆಯಲ್ಲಿನ ಹೆಚ್.ಎಸ್.ಆರ್. ಲೇಔಟ್, ಸೆಕ್ಟರ್–3, ಸೈಟ್ ನಂ. 570ಕ್ಕೆ ಸೇರಿದ ಪೂರ್ವ ಪಶ್ಚಿಮ 12.18 ಮೀಟರ್ ಮತ್ತು ಉತ್ತರ ದಕ್ಷಿಣ 9.14 ಮೀಟರುಗಳು ಒಟ್ಟು 111.32 ಚದರ ಮೀಟರಗಳ್ಳುಳ ಪೂರಾ ಸ್ವತ್ತಿಗೆ ಚಕ್ಕುಬಂಧಿ:

| | | |
|---|---|---|
| ಪೂರ್ವಕ್ಕೆ | : | 40 ಅಡಿ ರಸ್ತೆ |
| ಪಶ್ಚಿಮಕ್ಕೆ | : | ಸೈಟ್ ನಂ. 563 |
| ಉತ್ತರಕ್ಕೆ | : | ಸೈಟ್ ನಂ. 571 |
| ದಕ್ಷಿಣಕ್ಕೆ | : | ಸೈಟ್ ನಂ. 569 |

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ಈ ದಿನ ಅಂದರೆ ದಿನಾಂಕ : 8–1–2010 ರಂದು ಹೊರಡಿಸಿರುತ್ತೇನೆ.

**ಸಿ.ಎಸ್. ವೀರೇಶ್**
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

**ಪಿ.ಆರ್. 1098**

## ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ನಡಾವಳಿಗಳು

**ವಿಷಯ:** ಶ್ರೀ ಆರ್.ಡಿ. ಮೊಕಾಶಿ, ಪ್ರಾಚಾರ್ಯರು, ಕೈಗಾರಿಕಾ ತರಬೇತಿ ಸಂಸ್ಥೆ, ಗದಗ (ಪ್ರಸ್ತುತ ಕೈ.ತ. ಸಂಸ್ಥೆ, ಹನುಮಸಾಗರ) ಇವರ ವಿರುದ್ಧ ಲೋಕಾಯುಕ್ತ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಉಲ್ಲೇಖ:**
1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂ. ಲೋಕ್/ಐಎನ್ಐ(ಜಿ)/ಎಲ್–15/ಸಿಆರ್–1/2007/ಗದಗ ದಿನಾಂಕ : 1–7–2011.
2. ತನಿಖಾಧಿಕಾರಿಗಳ ವರದಿ ದಿನಾಂಕ : 6–4–2011.
3. ಗದಗ ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ ಮೊಕದ್ದಮೆ ಸಂ. 1/2007 ಕಲಂ 13 (1) (ಸಿ) ಸಹವಾಚನ 13 (2) ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988 ದಿನಾಂಕ : 6–3–2007.

**ಪ್ರಸ್ತಾವನೆ :**

ಶ್ರೀ ಆರ್.ಡಿ. ಮೊಕಾಶಿ, ಪ್ರಾಚಾರ್ಯರು, ಕೈಗಾರಿಕಾ ತರಬೇತಿ ಸಂಸ್ಥೆ, ಗದಗ (ಪ್ರಸ್ತುತ ಕೈ.ತ. ಸಂಸ್ಥೆ, ಹನುಸಾಗರ) ಇವರ ವಿರುದ್ಧ ಮೊಕದ್ದಮೆ ಸಂ. 1/2007 ಕರ್ನಾಟಕ ಲೋಕಾಯುಕ್ತ ಗದಗ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಮಾನ್ಯ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ : 1–7–2011 ರೊಡನೆ ಕಳುಹಿಸುತ್ತಾ ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯಿದೆ 1988 ರ 19(1) (ಸಿ) ಕಲಂ ಅಡಿಯಲ್ಲಿ ಮಂಜೂರಾತಿ ನೀಡಲು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಗಳಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರು ತಮ್ಮ ಉಲ್ಲೇಖ–1 ರ ಪತ್ರದೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿರುತ್ತಾರೆ.

1. ಕು: ನೀಲ. ಬ. ಬೆಲ್ಲದ, ರವರ ಫಿರ್ಯಾದಿ ದಿನಾಂಕ : 6–3–2007.
2. ಪ್ರಥಮ ವರ್ತಮಾನ ವರದಿ, ಕರ್ನಾಟಕ ಲೋಕಾಯುಕ್ತ, ಗದಗ ಪೊಲೀಸ್ ಠಾಣೆ ಪ್ರಕರಣ ಸಂ. 01/2007/
3. ಅಮಾನತ್ತು ಪಂಚನಾಮೆ ದಿನಾಂಕ : 6–3–2007.
4. ದಿನಾಂಕ : 7–3–2007, 17–4–2007, 25–2–2010, 28–4–2010, 7–5–2010 ಗಳಂದು ಜರುಗಿಸಿದ ಪಂಚನಾಮೆಯ ಪ್ರತಿಗಳು.
5. ಸಾಕ್ಷಿದಾರರ ಹೇಳಿಕೆಗಳು :–

ಎ) ಶ್ರೀ. ಪಿ.ಹೆಚ್. ಗರಸಂಗಿ, ಕಛೇರಿ ಅಧೀಕ್ಷಕರು, ಕೈ.ತ.ಸಂಸ್ಥೆ (ಮ) ಗದಗ ಬೆಟಗೇರಿ

ಬಿ) ಶ್ರೀ ಹೆಚ್.ಬಿ. ಮಾನಿನಹೊಳೆ, ಪ್ರದಸ., ಕೈ.ತ.ಸಂಸ್ಥೆ(ಮ), ಗದಗ ಬೆಟಗೇರಿ

ಸಿ) ಶ್ರೀ ಎಸ್.ಆರ್. ಬಾಣದ, ದ್ವಿದಸ., ಕೈ.ತ.ಸಂಸ್ಥೆ(ಮ) ಗದಗ ಬೆಟಗೇರಿ

ಡಿ) ಶ್ರೀ ಎಸ್.ಬಿ ಬೊಮ್ಮಸಾಗರ, ಸಹಾಯಕ ಸಾಂಖ್ಯಿಕ ಅಧಿಕಾರಿ, ಜಿಲ್ಲಾ ಪಂಚಾಯತ್ ಗದಗ.

ಇ) ಶ್ರೀ ಪಿ.ಬಿ. ರಾಮಾಪುರ, ದ್ವಿದಸ., ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಜಿಲ್ಲಾ ಪಂಚಾಯತ್ ಗದಗ.

ಎಫ್) ಕು: ನೀಲ ಬಿ. ಬೆಲ್ಲದ, ರಾಚೋಟೇಶ್ವರ ನಗರ, ಗದಗ.

ಜಿ) ಶ್ರೀ ಕೆ.ಎಸ್. ಭಾಸಲಾಪುರ, ಮುಖ್ಯಪೇದೆ, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಗದಗ.

ಹೆಚ್) ಶ್ರೀಮತಿ ಜಿಎನ್. ಗುರ್ಲಾ ಹೊಸೂರ, ಮಹಿಳಾ ಮುಖ್ಯ ಪೇದೆ, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಗದಗ

ಐ) ಶ್ರೀ ಹೆಚ್.ವೈ. ಕಂಪಲಿ, ಸಿಪಿಸಿ, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಗದಗ.

ಜೆ) ಶ್ರೀ ವಿ.ಎಸ್. ವಜ್ರಾಂಗಿ, ಎಪಿಸಿ, ಕರ್ನಾಟಕ ಲೋಕಾಯುಕ್ತ ಠಾಣೆ, ಗದಗ.

ಕೆ) ಕು: ರೇಖಾ. ಬಿ. ಮನ್ವಾಚಾರ್, ಅತಿಥಿ ಬೋಧಕರು, ಕೈ.ತ.ಸಂಸ್ಥೆ, ಗದಗ ಬೆಟಗೇರಿ.

ಎಲ್) ಕು: ಶಿವಲೀಲಾ ಪಿ. ನಾರಾಯಣಪುರ, ಅತಿಥಿ ಬೋಧಕರು, ಕೈ.ತ.ಸಂಸ್ಥೆ, ಗದಗ ಬೆಟಗೇರಿ.

ಎಂ) ಶ್ರೀ ಪಿ.ಎಸ್. ಶಿಡ್ಲಿಂಗ್, ಕಿತಅ, ಕೈ.ತ.ಸಂಸ್ಥೆ, ಗದಗ ಬೆಟಗೇರಿ

ಎನ್) ಶ್ರೀ ಜಿ.ಬಿ. ಕದರಿ, ಪ್ರದಸ, ಕರ್ನಾಟಕ ಗೃಹ ಮಂಡಳಿ ಸಮನ್ವಯ ಕಛೇರಿ, ಗದಗ.

ಒ) ಕು: ಮಮತಾ. ಎಂ. ವೀರಾಪುರ, ಗದಗ.

ಪಿ) ಶ್ರೀ ಎಂ.ಎಂ. ಖಾಜಿ, ಕಿರಿಯ ಸಹಾಯಕ, ಹೆಸ್ಕಾಂ, ಗದಗ

ಕ್ಯೂ) ಶ್ರೀ ಎಂ.ಕೆ. ಬಡಿಗೇರ್, ವರ್ಕ್ ಇನ್ಸ್‌ಪೆಕ್ಟರ್, ಕರ್ನಾಟಕ ಗೃಹ ಮಂಡಳಿ ಸಮನ್ವಯ ಕಛೇರಿ, ಗದಗ.

ಆರ್) ಶ್ರೀ ಬಸವರಾಜ ಮಲ್ಲೂರ, ಪ್ರಾಚಾರ್ಯರು, ಕೈ.ತ.ಸಂಸ್ಥೆ, ಗದಗ ಬೆಟಗೇರಿ

ಎಸ್) ಶ್ರೀ ಎ.ಹೆಚ್. ಪೂಜಾರ್, ಪ್ರದಸ., ಕೈ.ತ.ಸಂಸ್ಥೆ, ಗದಗ ಬೆಟಗೇರಿ

ಟಿ) ಕೈ.ತ.ಸಂಸ್ಥೆ, ಗದಗ ಬೆಟಗೇರಿಯ ವಿದ್ಯಾರ್ಥಿಗಳು (ಎನ್.ವಿ. ಹಳ್ಳಿ, ವಿ.ಎಂ. ನಾರಾಯಣಕರ, ಪಿ.ಎಸ್. ಕುಂಬಾರ, ಯು.ಎಸ್. ಅಂಬಲಿ, ವಿ.ಪಿ. ಹಡಪದ, ವಿ.ಎಸ್. ಬೆಟಗೇರಿ, ಪಿ.ವಿ. ಸಜ್ಜನರ, ಎಂ.ಕೆ. ಶೇಖ್, ಎಸ್.ಸಿ. ಕಾಲವಾಡ, ಪಿ.ಎಸ್. ಕಬಾಡಿ, ಎಸ್.ವೈ. ಸಣಕಲ್, ಎ.ಡಿ. ಬ್ಯಾಳಿ, ಪಿ.ಆರ್. ಬೆಳಮಕರ್).

ಪಿರ್ಯಾದುದಾರರಾದ ಕು: ನೀಲ ಬಿ. ಬೆಲ್ಲದ, ಅತಿಥಿ ಬೋಧಕರು, ಕೈ.ತ.ಸಂಸ್ಥೆ, ಗದಗ ಬೆಟಗೇರಿ ಇವರು ದಿನಾಂಕ: 6–3–2007 ರಂದು ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಗದಗಕ್ಕೆ ಹಾಜರಾಗಿ ಸದರಿ ಸಂಸ್ಥೆಯಲ್ಲಿ ದಿನಾಂಕ : 18–8–2006 ರಿಂದ 16–2–2007 ರವರೆಗೆ ಅತಿಥಿ ಬೋಧಕರಾಗಿ ಕೆಲಸ ಮಾಡಿದ್ದು, ಈ ಸಂಬಂಧ ಅವರಿಗೆ ಬರಬೇಕಾದ ಅತಿಥಿ ಬೋಧಕರ ಸಂಭಾವನೆ ರೂ. 19,350/–ಗಳ ಪೈಕಿ ಆಪಾದಿತರು ಸದರಿ ಸಂಸ್ಥೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀಮತಿ ಎಸ್.ಆರ್. ಬಾಣದ, ದ್ವಿದಸ., ಇವರ ಮುಖಾಂತರ ಪಿರ್ಯಾದುದಾರರಿಂದ ರೂ. 19,350/– ಗಳಿಗೆ ಸ್ವೀಕೃತಿಯನ್ನು ಪಡೆದು, ರೂ. 13,000/– ಗಳನ್ನು ನೀಡುವಂತೆ ತಿಳಿಸಿದ್ದು, ಅದರಂತೆ ಶ್ರೀಮತಿ ಎಸ್.ಆರ್. ಬಾಣದ, ದ್ವಿದಸ., ರವರು ಪಿರ್ಯಾದುದಾರರಿಗೆ ವಿಷಯವನ್ನು ತಿಳಿಸಿದಾಗ, ಪಿರ್ಯಾದುದಾರರು ರೂ. 19,350/–ಗಳಿಗೆ ರಸೀದಿ ನೀಡಲು ಒಪ್ಪಿರುವುದಿಲ್ಲ. ಈ ಸಂಬಂಧ ಆಪಾದಿತರನ್ನು ಸಂಪರ್ಕಿಸಲಾಗಿ, ಅವರು "ಶ್ರೀಮತಿ. ಎಸ್.ಆರ್. ಬಾಣದ, ದ್ವಿದಸ., ರವರು ನಾನು ಹೇಳಿದಂತೆ ಹಣ ಕೊಡುತ್ತಾರೆ. ಇಲ್ಲವಾದಲ್ಲಿ ತಮ್ಮ ಸಂಬಳದ ಹಣವನ್ನು ಸರ್ಕಾರಕ್ಕೆ ಮರುಪಾವತಿ ಮಾಡುತ್ತೇವೆ" ಎಂದು ತಿಳಿಸಿರುತ್ತಾರೆಂದು ತದನಂತರ ಪಿರ್ಯಾದುದಾರರು ದಿನಾಂಕ : 5–3–2007 ರಂದು ರೂ. 13,000/–ಗಳಿಗೆ ಮಾತ್ರ ಸ್ವೀಕೃತಿಯನ್ನು ನೀಡಿ ಅವರು ನೀಡಿದ ರೂ. 13,000/–ಗಳನ್ನು ಮಾತ್ರ ಪಡೆದು ಕೊಂಡಿರುತ್ತೇನೆಂದು, ಉಳಿದ ಮೊತ್ತವನ್ನು ಆಪಾದಿತರು ಸುಳ್ಳು ದಾಖಲೆಗಳನ್ನು ಸೃಷ್ಟಿಸಿಕೊಂಡು ಸ್ವಂತಕ್ಕೆ ದುರುಪಯೋಗ ಪಡಿಸಿಕೊಂಡಿರುತ್ತಾರೆ ಎಂದು ದೂರು ನೀಡಿದ್ದರ ಮೇರೆಗೆ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ ಗದಗ ಇಲ್ಲಿ ನೋಂದಾಯಿಸಿಕೊಳ್ಳಲಾಗಿರುತ್ತದೆ.

ತನಿಖಾಧಿಕಾರಿಗಳಾದ ಶ್ರೀ ಎಂ.ಎನ್. ಕರಿಬಸವನಗೌಡ, ಆರಕ್ಷಕ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ ಗದಗ ರವರು ಆಪಾದಿತರಾದ ಶ್ರೀ ಆರ್.ಡಿ. ಮೊಕಾಶಿ, ಅಂದಿನ ಪ್ರಾಚಾರ್ಯರು, ಕೈ.ತ.ಸಂಸ್ಥೆ(ಮ), ಗದಗ ಬೆಟಗೇರಿ ಹಾಗೂ ಇತರರ ವಿರುದ್ಧ ದಂಡಾರ್ಹ ಪ್ರಕರಣವನ್ನು ದಿನಾಂಕ : 6–3–2007 ರಂದು ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ ಗದಗ ರವರ ಮೊಕದ್ದಮೆ ಸಂ. 1/2007 ರಲ್ಲಿ ಲಂಚ ನಿರೋಧಕ ಕಾಯಿದೆ ಕಲಂ 13(1)(ಸಿ) ಸಹವಾಚಕ 13(2) ಅಡಿಯಲ್ಲಿ ದಾಖಲಿಸಿ ಕೊಂಡಿರುತ್ತಾರೆ.

ಆಪಾದಿತರಾದ ಶ್ರೀ ಆರ್.ಡಿ. ಮೊಕಾಶಿ, ಅಂದಿನ ಪ್ರಾಚಾರ್ಯರು, ಕೈ.ತ.ಸಂಸ್ಥೆ(ಮ), ಗದಗ ಬೆಟಗೇರಿ ರವರು ಈ ಪ್ರಕರಣದ 2ನೇ ಆಪಾದಿತರಾದ ಶ್ರೀಮತಿ ಸುಜಾತರವರೊಂದಿಗೆ ಪಿರ್ಯಾದುದಾರರು ಬರೆದುಕೊಟ್ಟಂತೆ ಸ್ವೀಕೃತಿ ಪತ್ರವನ್ನು ಬರೆಯಿಸಿರುವುದು ತನಿಖೆಯಿಂದ ದೃಢಪಟ್ಟಿದ್ದು, ಆ ಮೂಲಕ ರೂ. 6,200/– ಗಳನ್ನು ಸುಳ್ಳು ದಾಖಲೆಗಳನ್ನು ಸೃಷ್ಟಿಸುವುದರ ಮೂಲಕ ದುರುಪಯೋಗ ಪಡಿಸಿಕೊಂಡಿರುತ್ತಾರೆಂದು, ಹಾಗೂ ಮಮತಾ ವೀರಾಪುರ ಮತ್ತು ಸುಜಾತ ಆರ್. (ಆಪಾದಿತೆ–2) ಇವರು, ಆಪಾದಿತರು ಕರ್ತವ್ಯ ನಿರ್ವಹಿಸುತ್ತಿದ್ದ ಸಂಸ್ಥೆಯಲ್ಲಿ ಅತಿಥಿ ಬೋಧಕರಾಗಿ ಕರ್ತವ್ಯ ನಿರ್ವಹಿಸದೆ ಇದ್ದರೂ ಸಹ ಅವರ ಹೆಸರಿನಲ್ಲಿ ಅನುಕ್ರಮವಾಗಿ ರೂ. 18,150/– ಗಳನ್ನು ಮತ್ತು ರೂ. 8,100/–ಗಳನ್ನು ಡ್ರಾ ಮಾಡಿಕೊಂಡು ದುರುಪಯೋಗ ಪಡಿಸಿಕೊಂಡಿರುತ್ತಾರೆಂದು ಹಾಗೂ ಕು: ಶಿವಲೀಲಾ ನಾರಾಯಣಪುರ ಇವರು ಅತಿಥಿ ಬೋಧಕರಾಗಿ ಕಾರ್ಯನಿರ್ವಹಿಸಲು ಅನರ್ಹರಾಗಿದ್ದರೂ ಸಹ ಅವರನ್ನು ಅತಿಥಿ ಬೋಧಕರಾಗಿ ತೆಗೆದುಕೊಂಡು ಅವರಿಗೆ ರೂ. 1,200/–ಗಳನ್ನು ಪಾವತಿಸುವ ಮೂಲಕ ಸದರಿ ಮೊತ್ತ ದುರುಪಯೋಗವಾಗಲು ಆಪಾದಿತರು ಕಾರಣರಾಗಿರುತ್ತಾರೆಂದು ತನಿಖಾ ವರದಿಯಲ್ಲಿ ಆರೋಪಿಸಲಾಗಿರುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಕಲಂ 13(1), (ಸಿ) (ಡಿ) ಸಹವಾಚಕ 13(2) ಲಂಚ ನಿರೋಧಕ ಕಾಯಿದೆ 1988 ಮತ್ತು ಕಲಂ 465, 471, ಸಹವಾಚಕ 34 ಭಾರತೀಯ ದಂಡ ಸಂಹಿತೆ ಯಡಿಯಲ್ಲಿ ಶಿಕ್ಷಾರ್ಹ ಅಪರಾದವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣ ಮನವರಿಕೆಯಾಗಿದೆ. ಆದ್ದರಿಂದ ಆಪಾದಿತರನ್ನು ಸದರಿ ಪ್ರಕರಣಗಳ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯವೆಂದು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ರವರು ಆಪಾದಿತನನ್ನು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಯ ನಿಯಮ–8 (2) ಹಾಗೂ 95 (3) ನ್ನು ಓದಿಕೊಂಡಂತೆ ಕೆ.ಸಿ.ಎಸ್. (ಸಿಸಿಎ) ನಿಯಮ 1957 ರ ನಿಯಮ–8 (viii) ರ ಪ್ರಕಾರ ಕೆಲಸದಿಂದ ತೆಗೆದುಹಾಕಲು ಅಧಿಕಾರ ಹೊಂದಿರುತ್ತಾರೆ. ಮೇಲೆ ನಮೂದಿಸಿದ ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿ ಮನಗಂಡು, ಆರೋಪಿ ಆರೋಪಣೆ ಎಸಗಿರುವ ಬಗ್ಗೆ ಸಾಬೀತಾಗಿರುವುದು ಮನವರಿಕೆಯಾಗಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯೆದೆ 1988ರ ಕಲಂ 19(1) (ಸಿ) ಅನ್ವಯ ಶ್ರೀ ಆರ್.ಡಿ. ಮೊಕಾಶಿ, ಅಂದಿನ ಪ್ರಾಚಾರ್ಯರು, ಕೈ.ತ. ಸಂಸ್ಥೆ (ಮ) ಗದಗ ಬೆಟಗೇರಿ ರವರನ್ನು ಕಲಂ 13(1), (ಸಿ) (ಡಿ) ಸಹವಾಚಕ 13(2) ಲಂಚ ನಿರೋಧಕ ಕಾಯಿದೆ 1988 ಮತ್ತು ಕಲಂ 465, 468, 471, ಸಹವಾಚಕ 34 ಭಾರತೀಯ ದಂಡ ಸಂಹಿತೆಯಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆರವರು ಹೊಂದಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂ. ಉತಇ/ತರಬೇತಿ/ಆಡಳಿತ–6/ಎಸ್‌ಟಿಎಫ್–ಆರ್–142/09–10. ದಿನಾಂಕ : 8–9–2011**

ಆರೋಪಿತರಾದ ಶ್ರೀ ಆರ್.ಡಿ. ಮೊಕಾಶಿ, ಅಂದಿನ ಪ್ರಾಚಾರ್ಯರು, ಕೈ.ತ.ಸಂಸ್ಥೆ(ಮ) ಗದಗ ಬೆಟಗೇರಿರವರನ್ನು ಹುದ್ದೆಯಿಂದ ತೆಗೆದುಹಾಕುವ/ವಜಾ ಮಾಡುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಶ್ರೀ ಎನ್. ಮಂಜುನಾಥ ಪ್ರಸಾದ್, ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಆದ ನಾನು ಶ್ರೀ ಆರ್.ಡಿ. ಮೊಕಾಶಿ, ಅಂದಿನ ಪ್ರಾಚಾರ್ಯರು, ಕೈ.ತ.ಸಂಸ್ಥೆ(ಮ) ಗದಗ ಬೆಟಗೇರಿ ಇವರನ್ನು ಕಲಂ 13 (1), (ಸಿ) (ಡಿ) ಸಹವಾಚಕ 13(2) ಲಂಚ ನಿರೋಧಕ ಕಾಯಿದೆ 1988 ಮತ್ತು ಕಲಂ 465, 468, 471, ಸಹವಾಚಕ 34 ಭಾರತೀಯ ದಂಡ ಸಂಹಿತೆ ಪ್ರಕಾರ

ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಲಂಚ ನಿರೋಧಕ ಕಾಯಿದೆ 19 (ಸಿ) ಅಡಿಯಲ್ಲಿ ಈ ಮೂಲಕ ಮಂಜೂರಾತಿ ನೀಡಲಾಗಿದೆ.

**ಆಯುಕ್ತರು**
ಉದ್ಯೋಗ ಮತ್ತು ತರಬೇತಿ.

**ಪಿ.ಆರ್. 1119**

## ಸಹಕಾರ ಸಂಘಗಳ ನಿಬಂಧಕರು ಕರ್ನಾಟಕ ರಾಜ್ಯ ನಂ. 1, ಆಲಿ ಅಸ್ಕರ್ ರಸ್ತೆ, ಬೆಂಗಳೂರು ಇವರ ನಡವಳಿಗಳ ಬಗ್ಗೆ

**ವಿಷಯ:** ಸಮಾಪನೆಗೊಂಡಿರುವ ಶ್ರೀ ವಿನಾಯಕ ಲೇಬರ್ ಕಾಂಟ್ರಾಕ್ಟ್ ಕೋ-ಆಪರೇಟವ್ ಸೊಸೈಟಿ ಲಿ., ಗದಗ ಇದರ ನೋಂದಣಿ ಸಂಖ್ಯೆ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿ ಸಮಾಪನಾ ಆದೇಶದ ಸಂಖ್ಯೆ : ಆರ್‌ಸಿಎಸ್/ಎಲ್‌ಕ್ಯೂಡಿ/25/2005-06, ದಿನಾಂಕ : 25-11-2005.
2. ಈ ಕಛೇರಿ ಆದೇಶದ ಸಂಖ್ಯೆ : ಆರ್‌ಸಿಎಸ್/ಎಲ್ ಕ್ಯೂಡಿ/25/2005-06, ದಿನಾಂಕ : 20-9-2011.
3. ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಳಗಾವಿ ಪ್ರಾಂತ ಬೆಳಗಾವಿ ಇವರ ಪತ್ರ ಸಂಖ್ಯೆ : ಜೆಆರ್‌ಎಲ್/ಎ/351/ಎಲ್ ಕ್ಯೂಡಿ/2004-05, ದಿನಾಂಕ : 29-6-2010.

**ಪ್ರಸ್ತಾವನೆ :**

ಶ್ರೀ ವಿನಾಯಕ ಲೇಬರ್ ಕಾಂಟ್ರಾಕ್ಟ್ ಕೋ-ಆಪರೇಟಿವ್ ಸೊಸೈಟಿ ಲಿ., ಗದಗ ಈ ಸಂಘವು ಸಂಖ್ಯೆ : 4735/1977-78, ದಿನಾಂಕ : 11-7-1977ರಂತೆ ನೋಂದಣಿ ಅಗಿರುತ್ತದೆ. ಇದರ ಕಾರ್ಯವ್ಯಾಪ್ತಿಯಲ್ಲಿ ಬೆಳಗಾವಿ ಪ್ರಾಂತ, ಹಾಗೂ ಗುಲ್ಬರ್ಗಾ ಪ್ರಾಂತಗಳಿಗೆ ವಿಸ್ತರಿಸಿರುತ್ತದೆ. ಉಲ್ಲೇಖ (1)ರ ಆದೇಶದಂತೆ ಸಮಾಪನೆಗೊಳಿಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಗದಗ ಇವರನ್ನು ಸದರಿ ಸಂಘದ ಸಮಾಪನಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು. ಅದರಂತೆ ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ದಿನಾಂಕ : 7-2-2006 ರಂದು ವಹಿಸಿಕೊಂಡು, ಸಮಾಪನಾ ಸಭೆಯನ್ನು ದಿನಾಂಕ : 2-6-2010 ರಂದು ಶೂನ್ಯ ಸಾಲ ಜಿಂದಗಿ ಪತ್ರಿಕೆ ತಯಾರಿಸಿ, ಕಳೆದ 20 ವರ್ಷಗಳಿಂದ ಸ್ಥಗಿತಾವಸ್ಥೆಯಲ್ಲಿರುವ ಈ ಸಂಘದ ಪುನಶ್ಚೇತನದ ಸಾಧ್ಯತೆಗಳು ಇಲ್ಲದ್ದರಿಂದ ಸರ್ಕಾರದ ಶೇರು ರೂ. 9500/-ಗಳನ್ನು ಮನ್ನಾ ಮಾಡಲು ವಿನಂತಿಸಿ ನೋಂದಣಿ ರದ್ದತಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುವುದಕ್ಕೆ ಉಲ್ಲೇಖ (3) ರಲ್ಲಿ ಜಂಟಿ ನಿಬಂಧಕರು ಬೆಳಗಾವಿ ಇವರು ಷೇರು ಮನ್ನಾ ಮಾಡಿ ಶೂನ್ಯ ಸಾಲ ಜಿಂದಗಿ ಪತ್ರಿಕೆಗೆ ಅನುಮತಿಸಿ ಈ ಸಂಘದ ನೋಂದಣಿ ರದ್ದು ಮಾಡಲು ವಿನಂತಿಸಿರುತ್ತಾರೆ. ಉಲ್ಲೇಖ (2)ರ ಆದೇಶದಲ್ಲಿ ಈ ಸಂಘದ ಶೇರು ಮನ್ನಾ ಮಾಡಲಾಗಿದೆ.

ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸಂಘವನ್ನು ಯಥಾಸ್ಥಿತಿಯಲ್ಲಿ ಮುಂದುವರಿಸುವುದರಿಂದ ಸಾರ್ವಜನಿಕರಿಗಾಗಲೇ ಅಥವಾ ಸದಸ್ಯರಿಗಾಗಲೀ ಯಾವುದೇ ಪ್ರಯೋಜನಕಾರಿಯಾಗಿಲ್ಲವೆಂದು ಮನಗಂಡು ಸದರಿ ಸಮಾಪನಾ ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸಮಂಜಸವೆಂದು ಭಾವಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

**ಸಂಖ್ಯೆ : ಆರ್‌ಸಿಎಸ್/ಎಲ್ ಕ್ಯೂಡಿ/25/05-06, ದಿನಾಂಕ : 17-10-2011.**

ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುವಂತೆ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಎಸ್.ಜಿ. ಹೆಗಡೆ ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರಡಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಸಮಾಪನೆಗೊಂಡಿರುವ ಶ್ರೀ ವಿನಾಯಕ ಲೇಬರ್ ಕಾಂಟ್ರಾಕ್ಟ್ ಕೋ-ಆಪರೇಟವ್ ಸೊಸೈಟಿ ಲಿ., ಗದಗ ಇದರ ನೋಂದಣಿ ಸಂಖ್ಯೆ : 4735/1977-78, ದಿನಾಂಕ : 11-7-1977ನ್ನು ರದ್ದುಪಡಿಸಿರುತ್ತೇನೆ. ಈ ನೋಂದಣಿ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಂಘದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ನಿಂತುಹೋಗಿರುತ್ತದೆಂದು ಸಂಘವು ಅಸ್ತಿತ್ವದಲ್ಲಿಲ್ಲದೆ ವಿಸರ್ಜಿತವಾಗಿದೆಯೆಂದು ಪರಿಗಣಿಸಿತಕ್ಕದ್ದು, ಸದರಿ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಸಹಕಾರ ಸಂಘಗಳ ಉಪನಿಬಂಧಕರು ಗದಗ ಇವರ ಕಛೇರಿಯಲ್ಲಿ ಇಡತಕ್ಕದ್ದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಕಛೇರಿಯ ಮೊಹರಿನೊಂದಿಗೆ ಈ ದಿನ 17-10-2011 ರಂದು ಹೊರಡಿಸಲಾಗಿದೆ.

**ಎಸ್.ಜಿ. ಹೆಗಡೆ**
ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

**ಪಿ.ಆರ್. 1133**

## THE COMMISSIONARATE OF HEALTH AND FAMILY WELFARE SERVICES

**ANAND RAO CIRCLE, BANGALORE-09**

**NOTIFICATION**

**NO. PHI/C/02/08-09, BANGALORE, DATED : 23-9-2011**

**Ref:** Government Notification No. HFW 70 (V) CGM 2010, Benagaluru, Dated : 30-7-2011.

In exercise of the powers conferred by sub-section (1) of section 37 of the Food Safety and Standards Act, 2006 (34 of 2006), the Commissioner of Food Safety, Government of Karnataka hereby appoints and notify the following persons Specified in column (3) of schedule below as whole time Food Safety Officers for the Local areas specified in column (5) and (6) and modified in column No (7) of the schedule with immediate effect.

| Sl. No. | District | Name of the Food Safety Officer | Place of Salary | Local Area Allotted for Food Safety Officer | Additional Local Area Allotted | Modified Local Area Allotted & Additional Local Area Allotted |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | Dakshina Kannada | Dayananda. S. | PHC, Sattegala | Puttur | Sulya, Bantvala | H.D. Kote, Sulya |
| 2. | Mysore | Shafiq Ahmed Sharif | CHC, Jayapura | Nanjanagudu | H.D. Kote | Nanjanagudu, Puttur |
| 3. | Mysore | G.S. Venkata Narayanappa | PHC, Shilanapura | Hunasur | - | Hunasur, Bantvala |
| 4. | Shimoga | T.V. Manjunath | PHC, Tirthahalli | Sagara | Badravathi | Sagara, Tirthahalli |
| 5. | Shimoga | K. Krishnappa | PHC, Nagara | Shimoga | Hosanagara, Tirthahalli | Shimoga, Hosanagara, Badravathi |
| 6. | Bijapur | E.H. Farooki | PHC, Managuli | Basavana, Bagewadi | Indi | Basavana Bagewadi, Muddebihala |
| 7. | Bijapur | S.S. Kanthalagavi | TMC, Talikote | Muddebihala | - | Sindagi |
| 8. | Bijapur | R.S. Biradar | PHC, Honnange | Bijapur | Sindagi | Bijapur, Indi |
| 9. | Chikka magalur | K.S. Venkatesh | THO, N.R. Pura | N.R. Pura | Shringeri, | Koppa |

**Food Safety Commissioner and Commissioner,**
Health and Family Welfare Services, Bangalore.

**P.R. No. 1184**

## THE COMMISSIONARATE OF HEALTH AND FAMILY WELFARE SERVICES

**ANAND RAO CIRCLE, BANGALORE**

**NOTIFICATION**

**NO. PHI/C/02/08-09, BANGALORE, DATED : 23-9-2011**

**Ref:** Government Notification No. HFW 70 (V) CGM 2010, Benagaluru, Dated : 30-7-2011.

In exercise of the powers conferred by sub-section (1) of section 37 of the Food Safety and Standards Act, 2006 (34 of 2006), the Commissioner of Food Safety, Government of Karnataka hereby appoints and notify the following persons Specified in column (3) of schedule below as whole time Food Safety Officers for the Local areas specified in column (5) and (6) and Corrigendum in column No (7) of the schedule with immediate effect.

| Sl. No. | District | Name of the Food Safety Officer | Place of Salary | Local Area Allotted for Food Safety Officer | Additional Local Area Allotted | Corrigendum of FSO, Notification Dated : 5-8-2011 |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | Hassan | S. Maralaiah | PHC, Belur | Belur | Arasikere, Sakaleshapura | Marulaiah PHC, Hagare |
| 2. | Chikka Magalore | H.O. Mahendraiah | PHC, Kanadore | Kaduru | Tarikere | PHC, Kunkanadu |
| 3. | Davanagare | Harapanahalli Kotreshappa | PHC, Kanasinakere | Harapanalli | Harihara, Jagalore | PHC, Arasikere |
| 4. | Bijapur | R.S. Biradar | PHC, Honnange | Bijapur | Sindgi | Raja Patela Tum Saheba, Patela Biradar |
| 5. | Chamarajangar | H.P. Raju | PHC, Chilakaravadi | Yalanduru | Kollegala | Chilakawadi |
| 6. | Mandya | D. Puttaswamy | PHC, Gurudevalahalli | Mandya | - | B. Puttaswamy, Including CMC Area Mandya |
| 7. | Udupi | S. Anantha Manjrekar | CHC, Kota | Udupi | Kundapur, Karkala | Chandrakanta Ananta Manjrekar |
| 8. | Bagalakot | S.I. Bijapur | PHC, Ranihal | Jamakandi | Mudhola, Bilagi | S.I. Vijapura |

**Food Safety Commissioner and Commissioner,**
Health and Family Welfare Services, Bangalore.

**P.R. No. 1184**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರ ಕಾರ್ಯಾಲಯ, ಬೀದರ ಜಿಲ್ಲೆ, ಬೀದರ.

**ವಿಷಯ:** ಸ್ಥಗಿತಗೊಂಡ **ಮುಲ್ಲಾಮಾರಿ ಮೇಲ್ದಂಡೆ ಮೀನುಗಾರರ ಸಹಕಾರ ಸಂಘ** (ನಿ) **ಶರಣನಗರ ತಾ॥ ಬಸವಕಲ್ಯಾಣ ಜಿಲ್ಲಾ ಬೀದರ** ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 (2) (ಬಿ)ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು ಬೀದರ ಇವರ ಪತ್ರ ಸಂಖ್ಯೆ/ಸನಿಬಿ1/ವಿ2/ಸಮಾಪನೆ/2011-2012/ದಿನಾಂಕ:30-07-2011.

**ಪೀಠಿಕೆ :-**

**ಮುಲ್ಲಾಮಾರಿ ಮೇಲ್ದಂಡೆ ಮೀನುಗಾರರ ಸಹಕಾರ ಸಂಘ** (ನಿ) **ಶರಣನಗರ ತಾ॥ ಬಸವಕಲ್ಯಾಣ ಜಿಲ್ಲಾ ಬೀದರ,** ಬೀದರ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಬೀದರ ಇವರಿಂದ ನೋಂದಣಿ ಸಂಖ್ಯೆ/ಎಆರ್.ಸಿ.ಎಸ್./74-75/83-84 ದಿನಾಂಕ:____________ರಂದು ನೋಂದಣಿಯಾಗಿದ್ದು ಈ ಸಂಘ ಸುಮಾರು ಮೂರು ವರ್ಷಗಳಿಂದ ಅದರ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ಸ್ಥಗಿತಗೊಳಿಸಿರುವುದರಿಂದ ಹಾಗೂ ಈ ಸಂಘದ ಕಾರ್ಯಚಟುವಟಿಕೆಗಳು ಪ್ರಾರಂಭಿಸುವುದಕ್ಕೆ ಯಾರಿಗೂ ಕೂಡಾ ಆಸಕ್ತಿ ಇರುವುದಿಲ್ಲವೆಂದು ಹಾಗೂ ಪುನಃಶ್ಚೇತನಕ್ಕೆ ಅವಕಾಶವಿಲ್ಲವೆಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರು ಉಲ್ಲೇಖಿತ ಪತ್ರದ ಮೂಲಕ ವರದಿ ಮಾಡಿ ಆಡಳಿತಾತ್ಮಕ ಹಿತದೃಷ್ಟಿಯಿಂದ ಇದನ್ನು ಸಮಾಪನೆಗೊಳಿಸಲು ಉಲ್ಲೇಖಿತ ಪತ್ರದ ಮೂಲಕ ಈ ಕಛೇರಿಗೆ ಶಿಫಾರಸ್ಸು ಮಾಡಿರುವುದರಿಂದ ಈ ಕೆಳಗಿನ ಆದೇಶ ಜಾರಿ ಮಾಡಿದೆ.

**-: ಆದೇಶ :-**

**ಸಂಖ್ಯೆ/ಉನಿಬಿ/ವಿ1/ಆಡಳಿತ/2011-2012/927 ದಿನಾಂಕ:30-7-2011**

ಈ ಆದೇಶದ ಪೀಠಿಕೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 (2)ನ್ನು ಸರಕಾರದ ಅಧಿಸೂಚನೆ ಸಂಖ್ಯೆ/ಸಿ.ಓ/139/ಸಿ.ಎಲ್.ಎಂ/2010/ದಿನಾಂಕ: 17-02-11ರ ಮೇರೆಗೆ ದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಗೋಪಾಲ ಚ್ಚವಾಣ ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ ಆದ ನಾನು ಸ್ಥಗಿತಗೊಂಡ **ಮುಲ್ಲಾಮಾರಿ ಮೇಲ್ದಂಡೆ ಮೀನುಗಾರರ ಸಹಕಾರ ಸಂಘ** (ನಿ) **ಶರಣನಗರ ತಾ॥ ಬಸವಕಲ್ಯಾಣ ಜಿಲ್ಲಾ ಬೀದರ** ಇದನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1)ರ ಅನ್ವಯ ಸಹಾಯಕ ನಿರ್ದೇಶಕರು, ಮೀನುಗಾರಿಕೆ ಬಸವಕಲ್ಯಾಣ, ಇವರನ್ನು ಮಾರ್ಗ ಸದರಿ ಸಂಘದ ಸಮಾಪನೆ ಅಧಿಕಾರಿಯನ್ನಾಗಿ ನೇಮಕಮಾಡಿ ಆದೇಶ ಹೊರಡಿಸುತ್ತೇನೆ.

